

# ಹೊಸತು




## ನೆಮ್ಮದಿಯ ನಾಳೆ ನಮ್ಮದು

ಸೆಪ್ಟೆಂಬರ್ ೨೦೦೦
ಬೆಲೆ : ರೂ. ೧೦



ಸಂನ್ಯಾಸಿಯಂತಿದ್ದ ಸಂಸಾರಿ ಎಸ್. ಎನ್.
ಕೆಲವು ಇಂಗ್ಲಿಷ್ ಪತ್ರಿಕೆಗಳ ಸ್ಟಾಕ್‌ಮಾರ್ಕೆಟ್ ಪ್ರಜಾಪ್ರಭುತ್ವ
ಕನ್ನಡ ಮಾತು ತಲೆಯೆತ್ತುವ ಬಗೆ
ಭಾರತದಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನಕ್ಕೆ ಭವಿಷ್ಯವಿದೆಯೆ?
ಮೀಸಾ-ಟಾಡಾ ನಂತರ ಮತ್ತೊಂದು ಕರಾಳ ಶಾಸನ
ಲೂಟಿಕೋರರ ಭೂರಿ ಭೋಜನ
ರಾಮಾಯಣದಲ್ಲಿ ವಿಮಾನ
ಅಲಿ ಸರ್ದಾರ್ ಜಾಫ್ರಿ
ಗಣಪತಿ- ವಿವಿಧ ಪರಂಪರೆಗಳಲ್ಲಿ

# ಹೊಸತು

## ಒಳಗೇನಿದೆ.....




*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಹರಿಣಿ, ನಾಡಿಗ್*
*ಮುಖಪುಟದಲ್ಲಿ : ಡಾ|| ರಾಜ್‌ಕುಮಾರ್ : ಪ್ರಗತಿ ಕಲರ್ ಲ್ಯಾಬ್*
*ವಿನಾಯಕನ ವರ್ಣಚಿತ್ರ : ಡಿ. ಎಸ್. ಚೌಗಲೆ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ* **ಕಚೇರಿ ಸಹಕಾರ :** *ಜಿ. ವಿ. ತೇಜೋವತಿ*


ಅಮರನಾಥ ಯಾತ್ರೆಗೆಂದು ತೆರಳಿದವರು ಕೇಂದ್ರ ಸರ್ಕಾರದ ರಕ್ಷಣೆಯಲ್ಲಿದ್ದು ಸರ್ಕಾರದ ಪ್ರತಿನಿಧಿಗಳ ಸೂಚನೆಗಳಂತೆ ನಡೆದುಕೊಳ್ಳಬೇಕಾದ್ದು ಎರಡು - ಮೂರು ವರ್ಷಗಳಿಂದ ಜಾರಿಯಲ್ಲಿದೆ. ಈ ವರ್ಷದ ಯಾತ್ರಿಕರು ಅನುಭವಿಸಿದ ಪಾಡು ಪೂರ್ಣವಾಗಿ ದಾಖಲಾಗಿಲ್ಲ, ಮೂವತ್ತಕ್ಕೂ ಹೆಚ್ಚು ಮಂದಿ ಕೊಲ್ಲಲ್ಪಟ್ಟರು. ಯಾರು ಕೊಂದರೆಂಬುದು ಸಹ ಜಿಜ್ಞಾಸೆಗೆ ವಸ್ತುವಾಗಿದೆ ! ಜಾರ್ಜ್ ಫರ್ನಾಂಡಿಸ್ ಧೀರ ರಕ್ಷಾ ಮಂತ್ರಿಯಾಗಿ ಕೊಲೆಗಳಾದ ನಂತರ ಆಯಾ ಸ್ಥಳಗಳಿಗೆ ಭೇಟಿ ನೀಡುತ್ತಾರೆ ಮತ್ತು ಘೋಷಣೆಗಳನ್ನು ಕೊಡುತ್ತಾರೆ, ಯಥಾ ಪ್ರಕಾರ ಪಾಕಿಸ್ತಾನದ ದುಷ್ಕೃತ್ಯಗಳೆಂದು ಅವನ್ನು ಖಂಡಿಸುತ್ತಾರೆ. ಸೈನ್ಯದ ರಕ್ಷಣೆಯಲ್ಲಿದ್ದವರಿಗೆ ಸಹ ರಕ್ಷಣೆ ನೀಡದಂತಹ ವಿಪತ್ಕಾರಿ ಸನ್ನಿವೇಶಕ್ಕೆ ಕೇಂದ್ರ ಸರ್ಕಾರವನ್ನು ಕೊಂಡೊಯ್ದಿರುವುದು ಇಂದಿನ ಸಮ್ಮಿಶ್ರ ಸರ್ಕಾರಕ್ಕೆ ನಾಚಿಕೆಯ ವಿಷಯ. ಯಾತ್ರಿಕರ ನಂತರ ಬಂದಿದ್ದು ಸಾದಾ ಕಾಶ್ಮೀರಿ ನಾಗರಿಕರ ಸರದಿ. ನೂರಕ್ಕೂ ಹೆಚ್ಚು ಮಂದಿ ಹತ್ಯೆಗಳಿಗೊಳಗಾದರು. ಅದಕ್ಕೂ ಪಾಕಿಸ್ತಾನ, ಐ.ಎಸ್.ಐ.ಗಳನ್ನು ಖಂಡಿಸಲಾಯಿತು. ಪಾಕಿಸ್ತಾನದ ರಾಜಕೀಯ ಹಾಗೂ ಮಿಲಿಟರಿ ನಾಯಕರ ಪಿತೂರಿಗಳು ಹೊಸದೇನೂ ಅಲ್ಲ. ನಮ್ಮ ಕೇಂದ್ರ ಸರ್ಕಾರ ಕ್ರಮೇಣ ಅಶಕ್ತವಾಗುತ್ತಿರುವುದು ಮಾತ್ರ ಹೊಸದು. ಅಣ್ವಸ್ತ್ರ ನಮ್ಮಲ್ಲಿದೆಯಾದ್ದರಿಂದ ಯಾರೂ ನಮ್ಮನ್ನು ಮುಟ್ಟಲಾರರೆಂದು ಗುಡುಗಿದ್ದ ಅದ್ವಾನಿ ಈಗ ರಾಷ್ಟ್ರವನ್ನು ಮೆಟ್ಟುವವರ ವಿರುದ್ಧ ಏನೂ ಮಾಡದಾಗಿದ್ದಾರೆ. ಸಾಯಿಸಲ್ಪಟ್ಟವರಿಗೆ ಸಂತಾಪ ಸೂಚಿಸುವ ಸಂಪ್ರದಾಯವಷ್ಟೇ ಅವರದು!

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಹಾಗೂ ಅವಿಭಜಿತ ಕಾಂಗ್ರೆಸ್ ಪಕ್ಷದ ಕಡೆಯ ಅಧ್ಯಕ್ಷ ಶ್ರೀ ಎಸ್. ನಿಜಲಿಂಗಪ್ಪನವರು ತಮ್ಮ ೯೮ನೆಯ ವಯಸ್ಸಿನಲ್ಲಿ ತೀರಿಕೊಂಡದ್ದು ಈ ತಿಂಗಳಲ್ಲಿ ನಾವು ಅನುಭವಿಸಿದ ಅಪಾರವಾದ ಒಂದು ನಷ್ಟ. ಅವರ ವ್ಯಕ್ತಿತ್ವದ ಬಗ್ಗೆ ಹಲವು ಮಾಧ್ಯಮಗಳಲ್ಲಿ ಈಗಾಗಲೇ ಸಾಕಷ್ಟು ಮಾಹಿತಿ ಪ್ರಕಟವಾಗಿದೆ. ಅವರನ್ನು ನಿಕಟವಾಗಿ ಬಲ್ಲವರಾಗಿದ್ದ ಶ್ರೀ ಕೋ. ಚೆನ್ನಬಸಪ್ಪನವರು ಪತ್ರಿಕೆಯ ಈ ಸಂಚಿಕೆಯಲ್ಲಿ ತಮ್ಮ ಅನಿಸಿಕೆಗಳನ್ನು ಬರೆದಿದ್ದಾರೆ. ನಾನು ಶ್ರೀ ನಿಜಲಿಂಗಪ್ಪನವರನ್ನು ಡಾ|| ಜಿ. ಎನ್. ರೆಡ್ಡಿಯವರೊಡನೆ ಹಲವಾರು ಬಾರಿ ಭೇಟಿಯಾಗಿದ್ದೆ. ಬುದ್ಧ, ಬಸವ, ಮತಧರ್ಮದ ಕಟ್ಟುಪಾಡುಗಳು, ಭ್ರಷ್ಟಾಚಾರ ಮುಂತಾದ ಹಲವು ವಿಷಯಗಳನ್ನು ಕುರಿತಂತೆ ಶ್ರೀ ನಿಜಲಿಂಗಪ್ಪನವರು ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳುತ್ತಿದ್ದರು. ಮೈಸೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ ಅವರ ಅಧ್ಯಕ್ಷತೆಯಲ್ಲಿ 'ರಾಜಕೀಯ ಸಮಸ್ಯೆಗಳು' ಎಂಬ ವಿಷಯದ ಮೇಲೆ ನಾನು ಪ್ರಬಂಧ ಮಂಡಿಸಿದ್ದೆ. ಅಂದಿನ ಅವರ ಅಧ್ಯಕ್ಷ ಭಾಷಣದ ಕೆಲಭಾಗಗಳು ಇಂದಿಗೂ ನೆನಪಿನಲ್ಲಿವೆ. ಅಯೋಧ್ಯೆಯ ರಾಮಮಂದಿರದ ಕಿತಾಪತಿ ನಡೆಸುತ್ತಿದ್ದ ರಾಜಕೀಯ ಪಕ್ಷ ಮತ್ತು ಪರಿವಾರದ ಕುಕೃತ್ಯಗಳನ್ನು ಖಂಡಿಸಿ ಶ್ರೀ ನಿಜಲಿಂಗಪ್ಪನವರೆಂದರು : ''ನಮ್ಮ ಊರುಗಳಲ್ಲಿ ಗುಡಿಗಳು ಪಾಳು ಬೀಳುತ್ತಿವೆ. ಅವನ್ನು ಸರಿಮಾಡಿಕೊಂಡರೆ ಸಾಲದೇನು ? ಅಯೋಧ್ಯೆಯಲ್ಲಿ ದೊಡ್ಡ ರಾಮಮಂದಿರ ಏಕೆ ಬೇಕು ? ಇದೊಂದು ಕ್ಷುದ್ರ ರಾಜಕೀಯ ಹುನ್ನಾರ.'' ಎಷ್ಟು ಜನ ಹೀಗೆ ತಮಗನ್ನಿಸಿದ್ದನ್ನು ನೇರವಾಗಿ ಹೇಳುವ ಛಾತಿ ಮತ್ತು ನೈತಿಕ ವ್ಯಕ್ತಿತ್ವ ಉಳಿಸಿಕೊಂಡಿದ್ದಾರೆ ? ಹೀಗೆ ಹೇಳಿದಾಗ ಶ್ರೀ ನಿಜಲಿಂಗಪ್ಪನವರ ಎಲ್ಲ ರಾಜಕೀಯ ಧೋರಣೆಗಳನ್ನೂ ಮಾನ್ಯ ಮಾಡಬೇಕೆಂದು ಅರ್ಥವಲ್ಲ. ಸೈದ್ಧಾಂತಿಕವಾಗಿ ಇಂದಿರಾ ಗಾಂಧಿಯವರನ್ನು ವಿರೋಧಿಸಿದ ಶ್ರೀ ನಿಜಲಿಂಗಪ್ಪನವರು ಸೇರಿದ್ದು ಅತುಲ್ಯ ಘೋಷ್, ಎಸ್. ಕೆ. ಪಾಟೀಲ್, ಮೊರಾರ್ಜಿ ದೇಸಾಯಿಯವರಂತಹ ನಾಯಕರ ಬಣಕ್ಕೆ. ಇವರೆಲ್ಲರ ಸಾಮಾಜಿಕ ಆರ್ಥಿಕ ಕಾಳಜಿಗಳು ಎಂತಹವಾಗಿದ್ದುವೆಂಬುದರ ವ್ಯಾಖ್ಯಾನ ಈಗ ಅನಗತ್ಯ. ತಮ್ಮ ಚಿಂತನೆಗೆ ತೋರಿದ ನಿಷ್ಠೆ ಮತ್ತು ಅದರ ಅನುಷ್ಠಾನಕ್ಕಾಗಿ ಅವರ ಕ್ರಿಯಾಶೀಲತೆ, ಇವು ನಿಜಲಿಂಗಪ್ಪನವರ ಮೂಲಭೂತ ಲಕ್ಷಣದ ದ್ಯೋತಕಗಳಾಗಿವೆ. ಈಚಿನ ವರ್ಷಗಳಲ್ಲಿ ದೇವಿಪ್ರಸಾದ ಚಟ್ಟೋಪಾಧ್ಯಾಯರ ''ದರ್ಶನ'' ಎಂಬ ಗ್ರಂಥವನ್ನು ಅವರು ಬಹುವಾಗಿ ಮೆಚ್ಚಿಕೊಂಡು ಅಂತಹ ದೃಷ್ಟಿಕೋನದ ಅಗತ್ಯವನ್ನು ಒತ್ತಿ ಹೇಳುತ್ತಿದ್ದರೆಂದು ಬೇರೆಯವರಿಂದ ಕೇಳಿದ್ದೇನೆ. ಶ್ರೀ ನಿಜಲಿಂಗಪ್ಪನವರನ್ನು ಈಚಿನ ದಿನಗಳಲ್ಲಿ ಹಾಡಿ ಹೊಗಳಿದ ನಮ್ಮ ರಾಜಕೀಯ ನಾಯಕರು ನಿಜಲಿಂಗಪ್ಪನವರ ವ್ಯಾಪಕ ಅಧ್ಯಯನದ ಶಿಸ್ತನ್ನಾದರೂ ತಮ್ಮದನ್ನಾಗಿಸಿಕೊಳ್ಳುವಂತಿದ್ದರೆ ಚೆನ್ನಾಗಿರುತ್ತಿತ್ತು.

ಇಷ್ಟೆಲ್ಲಾ ಘಟನೆಗಳು ನಡೆದರೂ ಕರ್ನಾಟಕವು ಸಂಪೂರ್ಣವಾಗಿ ಅದಕ್ಕೆ ಸ್ಪಂದಿಸಲು ಈ ತಿಂಗಳಲ್ಲಿ ಸಾಧ್ಯವಾಗಲಿಲ್ಲ, ಕಾರಣ, ಡಾ|| ರಾಜಕುಮಾರರ ಅಪಹರಣ. ಇದನ್ನು ಬರೆಯುತ್ತಿರುವಾಗ್ಗೆ ಗೋಪಾಲ್ ಇನ್ನೂ ಎರಡನೆಯ ಬಾರಿ ಕಾಡಿಗೆ ಪ್ರವೇಶಿಸುತ್ತಿದ್ದಾರೆ. ಪರಿಣಾಮವೇನಾಗುತ್ತದೋ ಎಂಬುದನ್ನು ಕರ್ನಾಟಕವು ಉತ್ಸುಕತೆಯಿಂದ ಕಾದು ನೋಡುತ್ತಿದೆ. ನರಹಂತಕ ದುರುಳ ವೀರಪ್ಪನ್‌ನನ್ನು ಹೀಗೆ ಇನ್ನೂ ಎಷ್ಟು ಕಾಲ ಸಹಿಸಬೇಕೋ ! —ಜಿ. ಆರ್




ಸಂಪುಟ-೨ ಸಂಚಿಕೆ - ೨ ಸೆಪ್ಟೆಂಬರ್ ೨೦೦೦



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

# ಡಾ॥ ರಾಜ್ ಅಪಹರಣ

ಶ್ರೀ ಎಸ್. ಎಮ್. ಕೃಷ್ಣ ಮತ್ತು ಡಾ॥ ರಾಜಕುಮಾರ್ ಅವರಿಬ್ಬರಿಗೂ ವಾಸ್ತುಶಾಸ್ತ್ರದಿಂದ ಪ್ರಯೋಜನವಾಗಿಲ್ಲ. ಗಾಜನೂರಿನ ಅವರ ಹೊಸ ಬಂಗಲೆಯಿಂದ ಡಾ॥ ರಾಜ್ ಅವರಿಗೆ ವೀರಪ್ಪನೆಂಬ ವಿಕೃತ ಕ್ರೂರ ಗ್ರಹದ ಗರ ಬಡಿಯಬಹುದೆಂದು ಯಾವ ಜ್ಯೋತಿಷಿಯೂ ಹೇಳಿರಲಿಲ್ಲ; ಕೃಷ್ಣ ಅವರು ಇಂತಹ ಪೇಚಿಗೆ ಸಿಲುಕಬಹುದೆಂದೂ ಜ್ಯೋತಿಷ್ಯ ಹೇಳಿದ್ದಿಲ್ಲ. ಇಡೀ ರಾಜ್ಯ ತಲ್ಲಣಕ್ಕೆ ಸಿಲುಕುವಂತಹ ಕಹಿ ಅನುಭವ ಮೂರು ವಾರಗಳಿಗೂ ಹೆಚ್ಚು ಕಾಲ ನಮ್ಮದಾಗಿದೆ. ''ವೀರಪ್ಪನವರೇ, ನಮಸ್ಕಾರ,'' ಎಂದು ಆಕಾಶವಾಣಿಯಲ್ಲಿ ಮತ್ತು ಧ್ವನಿಸುರಳಿಯಲ್ಲಿ ನಮ್ಮ ಮುಖ್ಯಮಂತ್ರಿಗಳು ಸಂಬೋಧಿಸಬೇಕಾದ ಸಂದರ್ಭವು ನಮ್ಮ ರಾಜ್ಯಕ್ಕೆ ಅತ್ಯಂತ ಅವಮಾನಕರವಾದ್ದು. ಒಬ್ಬ ಕೊಲೆಗಡುಕ-ದರೋಡೆಕೋರನನ್ನು ಹಾಗೆ ಸಂಬೋಧಿಸಿದಾಗ ಮುಖ್ಯಮಂತ್ರಿಗಳಿಗೆ ಎಂತಹ ಸಂಕೋಚವಾಗಿರಬೇಕೆಂಬುದನ್ನು ಊಹಿಸಬಹುದು. ಆದರೆ ಅವರ ಮೇಲಿನ ಒತ್ತಡ ಅಂಥದ್ದೆಂದು ಜನತೆಗೆ ತಿಳಿದಿದೆ ಮತ್ತು ಜನತೆ ಸಹಾನುಭೂತಿ ವ್ಯಕ್ತಪಡಿಸಿದೆ. ಯಾರು ಏನೇ ಹೇಳಿದರೂ ಈ ಪ್ರಸಂಗದಲ್ಲಿ ಅವರೆಷ್ಟು ನೊಂದಿದ್ದಾರೆ ಮತ್ತು ಎಚ್ಚರದಿಂದ ನಡೆದಿದ್ದಾರೆಂಬುದನ್ನು ಜನರು ಗ್ರಹಿಸಿದ್ದಾರೆ. ವೀರಪ್ಪನಿಗೆ ಹಣ ನೀಡಲಾಗಿದೆಯೆ, ಹಾಗಿದ್ದರೆ ಎಷ್ಟು, ಅದನ್ನು ನೀಡಿದವರಾರು, ಹೇಗೆ ನೀಡಲಾಯಿತು ಎಂಬಿತ್ಯಾದಿ ಪ್ರಶ್ನೆಗಳು ಅಪ್ರಸ್ತುತವಲ್ಲ. ಅದರ ಬಗ್ಗೆ ಹೆಚ್ಚು ಮುಕ್ತತೆಯನ್ನು ಕೃಷ್ಣ ತೋರ್ಪಡಿಸಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಹಾಗೆ ಮಾಡದಿರಲು ಅವರ ಮೇಲೆ ಬೇರಿನ್ನೆಷ್ಟು ಒತ್ತಡಗಳಿವೆಯೋ ತಿಳಿದವರಾರು !

ಡಾ॥ ರಾಜಕುಮಾರ್ ತೋರಿರುವ ಸಹನೆ ಕೂಡ ಅದ್ಭುತವಾದ್ದು. ಗೋಪಾಲ್ ಮೂಲಕ ಅವರು ಕಳಿಸಿದ್ದ ಸಂದೇಶದಲ್ಲಿ ಇದು ವ್ಯಕ್ತವಾಗಿದೆ. ಶಾಂತಿ ಕಾಪಾಡಿಕೊಳ್ಳಬೇಕು, ಯಾವ ಭಾಷೆಯ ಜನರ ಮೇಲೂ ಹಿಂಸಾಚಾರ ಸಲ್ಲದು, ಎಂಬ ಅವರ ಅಮೂಲ್ಯ ಮಾತುಗಳನ್ನು ಅವರ ಅಭಿಮಾನಿಗಳು ವಿಶೇಷವಾಗಿ ಗ್ರಹಿಸಬೇಕು ಮತ್ತು ಮಾನ್ಯ ಮಾಡಬೇಕು. ಹುಟ್ಟೂರಿನ ಮೇಲಿನ ಅವರ ಪ್ರೀತಿಯನ್ನು ವ್ಯಾಮೋಹವೆಂದರೂ ಸರಿಯೆ, ಅವರು ಆ ಊರನ್ನು ಯಾವಾಗಲೂ ಆರಾಧಿಸುತ್ತಲೇ ಬಂದಿದ್ದಾರೆ. ಅಲ್ಲಿನ ಅವರ ಹೂವಿನ ತೋಟದ ಕಂಪನ್ನು ಇಡೀ ರಾಜ್ಯಕ್ಕೆ ಪಸರಿಸುವ ಸಾಮರ್ಥ್ಯವುಳ್ಳ ಡಾ॥ ರಾಜ್ ಎಂತಹ ಪಶ್ಚಾತ್ತಾಪಕ್ಕೆ ಗುರಿಯಾಗಿದ್ದಾರೆಂದು ಭಾವಿಸಿಕೊಂಡರೆ ಅವರ ನೋವನ್ನು ಸ್ವಲ್ಪಮಟ್ಟಿಗೆ ಜನರೆಲ್ಲಾ ಹಂಚಿಕೊಳ್ಳಲು ಸಾಧ್ಯ. ರಕ್ಷಣೆ ಪಡೆಯದೆ ಆ ಊರಿಗೆ ತೆರಳಿದ ರಾಜಣ್ಣನವರ ಬಗ್ಗೆ ಕೋಪ ಪ್ರದರ್ಶಿಸುವುದಕ್ಕಿಂತ ಅವರ ತಾಪವನ್ನು ತಮ್ಮದೇ ಎಂದು ಭಾವಿಸಿರುವ ಜನರನ್ನು ಕಂಡರೆ ರಾಜ್ ಅವರ ಅಸಾಧಾರಣ ವ್ಯಕ್ತಿತ್ವದ ಪರಿಚಯವಾಗುತ್ತದೆ. ರಾಜ್ ಹೇಳಿದ್ದಂತೆ ಅವರ ಆಸ್ತಿ ಕೇವಲ ಪಂಚೆ ಮತ್ತು ಅಂಗಿಯಲ್ಲ. ಹಾಗಿದ್ದಿದ್ದರೆ ಪಾಪಿ ವೀರಪ್ಪನ್‌ಗೆ ಅವನ್ನು ಕೊಟ್ಟುಬಿಡಬಹುದಿತ್ತು. ಇಡೀ ಕರ್ನಾಟಕವೇ ಅವರ ಆಸ್ತಿಯೆಂಬುದು ಈಗ ಸಾಬೀತಾಗಿದೆ. ಮುಖ್ಯಮಂತ್ರಿಯವರು ಇಡೀ ಜನತೆಯ ಭಾವನೆಯನ್ನು ಪ್ರತಿಫಲಿಸಿ ''ರಾಜ್ ಕರ್ನಾಟಕದ ದೊಡ್ಡ ಆಸ್ತಿ'' ಎಂದಿರುವುದು ಸಹಜವಾಗಿದೆ. ಅಂತಹವರನ್ನು ಬಿಡಿಸಿಕೊಳ್ಳಲು ರಾಜಕೀಯ ಚಾಕಚಕ್ಯತೆ ಬೇಕು, ಅಸಹನೆಯಲ್ಲ.

ಚಲನಚಿತ್ರದ ಜಗತ್ತಿಗೂ ವ್ಯಾವಹಾರಿಕ ಜಗತ್ತಿಗೂ ಎಷ್ಟು ಅಂತರವಿದೆಯೆಂಬುದು ನಮಗೆಲ್ಲಾ ಹಿಂದೆಂದಿಗಿಂತಲೂ ಹೆಚ್ಚು ಸ್ಪಷ್ಟವಾಗಿ ತಿಳಿಯುವಂತಾದ್ದು ಸ್ವಾರಸ್ಯದ ಸಂಗತಿ. ಢಿಶುಂ-ಢಿಶುಂ ವೈಭವೀಕರಣ ಪರದೆಗೆ ಮಾತ್ರ ಸೀಮಿತವಾಗಿದೆ. ನಿಜ ಜೀವನದಲ್ಲಿ ದಯನೀಯ ಪರಿಸ್ಥಿತಿಯೇ. ವೀರಪ್ಪನನ್ನು ಅಂಗುಲಿಮಾಲನ ಪಟ್ಟಕ್ಕೇರಿಸಿದವರಿದ್ದಾರೆ. ರಾಜ್ ಅವರನ್ನು ಚಂಬಲ್ ಡಕಾಯಿತರ ಮನವೊಲಿಸಿದ ಮಾನ್ಯ ಜೆ. ಪಿ. ಅವರೊಡನೆ ಹೋಲಿಸಿದವರಿದ್ದಾರೆ. ಆ ಡಕಾಯಿತರಲ್ಲಿ ಶೇಕಡ ೯೦ರಷ್ಟು ಮಂದಿ ತಮ್ಮ ಹಳೆಯ ಉದ್ಯೋಗಕ್ಕೆ ಮರಳಿದರೆಂಬುದನ್ನು ಮರೆಯಬಾರದು. ರಾಜ್ ಅವರ ಸಂಸರ್ಗದಿಂದ ವೀರಪ್ಪ ಬೇರೆಯವನಾಗುತ್ತಾನೆಂಬುದು ಅನೂಹ್ಯ. ಆದರೆ ಸಂತೋಷದಿಂದ ಸ್ವಾಗತಿಸೋಣ. ಇತ್ತ ದೇವರ ಮೊರೆಹೊಕ್ಕ ಜನ ತಮ್ಮ ದುಗುಡವನ್ನು ಮುಚ್ಚಿಟ್ಟು ಸ್ವಲ್ಪ ಸಾಂತ್ವನ ಹೊಂದಲು ಬೇಕಾದಷ್ಟು ವಿಧಗಳಲ್ಲಿ ಶ್ರಮಿಸಿದ್ದಾರೆ, ಸವೆದಿದ್ದಾರೆ. ಪೂಜೆ, ಮಂಗಳಾರತಿ, ಪ್ರಸಾದ, ಉರುಳುಸೇವೆ ಇವುಗಳಿಂದ ತಮ್ಮ ಮನಸ್ಸುಗಳಿಗೆ ಧೈರ್ಯ ಹೇಳಿಕೊಂಡದ್ದು ಸ್ವಾಗತಾರ್ಹ. ಅದನ್ನೇ ಆಶ್ರಯಿಸಿ ಸುಮ್ಮನೆ ಕೂತಿರದೆ ಧೃತಿಯಿಂದ ನೇರವಾಗಿ ಕಾರ್ಯಪ್ರವೃತ್ತರಾದ ಕೃಷ್ಣ ಸಹ ಶ್ಲಾಘನೀಯರು. ಹಾಗೆ ನೋಡಿದರೆ ರಾಜಣ್ಣನವರನ್ನು ಕಾಡಿಗೆ ಕೊಂಡುಹೋದವನೂ ದೇವರೇ ಅಲ್ಲವೆ ! ಅವರನ್ನು ಹಿಂದಕ್ಕೆ ಪಡೆಯಲು ಚಾತುರ್ಯ ಬೇಕು, ಕೃಷ್ಣ - ಕರುಣಾನಿಧಿ - ಗೋಪಾಲ್ ಎಲ್ಲರೂ ಬೇಕು. ರಾಜ್ ಅವರ ಕುಟುಂಬದೊಡನೆ ಸಮೀಕರಿಸಿಕೊಂಡು, ಹಿಂಸಾಚಾರಕ್ಕೆ ಇಳಿಯದೆ, ಕಾತುರತೆಯಿಂದ ಡಾ॥ ರಾಜಕುಮಾರ್ ಅವರ ಬರುವಿಕೆಗೆ ಹಾತೊರೆಯುತ್ತಿರುವ ಜನ ಅಭಿನಂದನೀಯರು. ರಾಜ್ ಅವರು ಹಿಂದಿರುಗಿದ ಮೇಲೂ ಈ ಲಕ್ಷಣವನ್ನು ಉಳಿಸಿಕೊಳ್ಳಬೇಕಾದ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ವೀರಪ್ಪನ್ ತಮಿಳರ ಪ್ರತಿನಿಧಿಯೆಂದು ಭಾವಿಸುವುದು ಬೇಡ. ಅವನೊಬ್ಬ ಹಂತಕ, ಅಷ್ಟೆ.

ರಾಷ್ಟ್ರಾಧ್ಯಕ್ಷರು ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ಕೊಟ್ಟ ಎಚ್ಚರವನ್ನು ನಾವೆಲ್ಲಾ ಗಂಭೀರವಾಗಿ ಪರಿಗಣಿಸಬೇಕು. ಅಯೋಗ್ಯ ಅಪರಾಧಿಗಳಿಗೆ ಗೌರವದ ಸ್ಥಾನಗಳು ಪ್ರಾಪ್ತಿಯಾಗುವ ನಮ್ಮ ಇಂದಿನ ಸನ್ನಿವೇಶವನ್ನು ವಿವೇಚಿಸಬೇಕೆಂದು ಅವರು ಕರೆಯಿತ್ತಿದ್ದಾರೆ. ಕೊಲೆಗಡುಕರು ಬೇರೆ ವ್ಯಕ್ತಿತ್ವ ಬೆಳೆಸಿಕೊಂಡರೆ ಒಳ್ಳೆಯದು, ಆದರೆ ಅವರ ಪಾತಕಗಳು ಇಲ್ಲವಾಗುವುದಿಲ್ಲ. ಅವರು ಕರುಣಾಮಯಿಗಳಲ್ಲ, ಹೀರೋಗಳಲ್ಲ. ಅಂತಹವರನ್ನು ತಣಿಸುತ್ತಲೇ ಇದ್ದರೆ ಅಕ್ರಮಗಳ ಸರಮಾಲೆ ಬೆಳೆಯುತ್ತಲೇ ಇರುತ್ತದೆ. ಇಂದು ರಾಜ್, ನಾಳೆ ಇನ್ನಾರದೋ ಸರದಿ. ಆದರೆ ಆಗ ಇಡೀ ರಾಜ್ಯ ತುದಿಗಾಲ ಮೇಲೆ ನಿಂತು ಅವರನ್ನು ಬಿಡಿಸಿಕೊಳ್ಳಲು ತಹತಹಿಸುವುದಿಲ್ಲ. ಏಕೆಂದರೆ, ನಮಗಿರುವುದು ಒಬ್ಬರೇ ರಾಜಕುಮಾರ್. ಆದ್ದರಿಂದ ವೀರಪ್ಪನನ್ನು ಪರ್ಯಾಯ ಕ್ರಮಗಳಿಂದ ಕಾನೂನಿನ ಚೌಕಟ್ಟಿಗೆ ಒಳಪಡಿಸುವ ಪ್ರಯತ್ನವನ್ನು ಬಿಡುವಂತಿಲ್ಲ. ಅವನನ್ನು ಹಿಡಿಯಲು ಸಾಧ್ಯವಿಲ್ಲವೆಂಬ ಮಾತನ್ನು ಯಾರೂ ನಂಬಿಲ್ಲ. ಹಿಡಿಯದಿರಲು ಏನೋ ಒಳಸಂಚಿದೆ ಎಂಬುದು ಜನಜನಿತವಾದ ಅಭಿಪ್ರಾಯ. ಎಷ್ಟೋ ರಾಜಕಾರಣಿಗಳು ಅವನೊಡನೆ ಉಂಡಿದ್ದಾರೆ, ಒಂದು ರೀತಿಯ ಉಂಬಳಿ ಪಡೆದಿದ್ದಾರೆ. ವೀರಪ್ಪನ್ ಜೊತೆಯಲ್ಲಿ ಅವರಿಗೆಲ್ಲಾ ಶಾಸ್ತಿ ಆಗಬೇಕಾಗಿದೆ.

ವೀರಪ್ಪನ್ ಕೇವಲ ಚೋರನಲ್ಲ. ಇಂದು ಅವನ ಕರಾಳ ಛಾಯೆಯು ಬೇರೆಬೇರೆ ಭಾಷಿಕರ ನಡುವೆ ವೈಮನಸ್ಯ ಉಂಟುಮಾಡುವಂಥದ್ದು , ಅಸಾಧ್ಯ ಹಿಂಸೆಗೆ ಎಡೆಮಾಡಿಕೊಡುವಂಥದ್ದು. ಇಂದು ಅವನ ಬೇಡಿಕೆಗಳ ಹಿಂದೆ ತುಚ್ಛ ರಾಜಕೀಯ ವಾಸನೆಯಿದೆ, ವಿಚ್ಛಿದ್ರಕಾರಿ ಪಾತಕಿಗಳಿದ್ದಾರೆ, ಮಾನವನ ಜೀವಕ್ಕೆ ಬೆಲೆ ಕೊಡದಿರುವ ಮೃಗೀಯ ವರ್ತನೆ ಇದೆ. ಈಗಾಗಲೇ ಕಶ್ಮಲಗೊಂಡಿರುವ ಸಾಮಾಜಿಕ ರಾಜಕೀಯ ವಾತಾವರಣದಲ್ಲಿ ಅವೂ ನಾಳೆ ಹೊರಬಂದು ವಿಜೃಂಭಿಸಲಾರಂಭಿಸಿದರೆ ನಮ್ಮ ರಾಜ್ಯಗಳ

ಸಂಕಟ ಎಷ್ಟು ಘೋರವಾಗಿರುತ್ತದೆ ಎಂಬ ಅರಿವಿರಲಿ. ವೀರಪ್ಪನನ್ನು ಉಳಿಸಿ, ಬೆಳೆಸಿ, ಪೋಷಿಸಿದ ಜನಕ್ಕೆ ಇದೆಲ್ಲ ಅಪ್ರಾಸಂಗಿಕ ; ಆದರೆ ಕರ್ನಾಟಕ - ತಮಿಳುನಾಡಿನ ಜನಕ್ಕೆ ಇದು ಅಳಿವು - ಉಳಿವಿನ ಪ್ರಶ್ನೆ. ನಮ್ಮೆರಡು ರಾಜ್ಯಗಳ ಸರ್ಕಾರಗಳು ಎರಡು ದಶಕಗಳ ಕಾಲ ನೂರಾರು ಜನರನ್ನು ಬಲಿತೆಗೆದುಕೊಂಡ ವೀರಪ್ಪನನ್ನು ಹಿಡಿಯಲಿಲ್ಲವೆಂಬುದು ಅಸಾಮರ್ಥ್ಯದ ಕುರುಹಲ್ಲ, ಅನಿಚ್ಛೆಯ ಕುರುಹು. ಕಾಡಿನ ಸಂಪತ್ತನ್ನು ಲೂಟಿ ಮಾಡಿದ ವೀರಪ್ಪ ಅದನ್ನು ವಿಲೇವಾರಿ ಮಾಡಿದ್ದು ನಾಡಿನಲ್ಲಿ ಅಲ್ಲವೆ ? ಅದಕ್ಕೆ ಎಷ್ಟು ಕುಮ್ಮಕ್ಕು ಬೇಕಾಗಿತ್ತು ! ಅವನ ಎಂಜಲಿಂದ ಕೊಬ್ಬಿದವರು ನಮ್ಮೆರಡು ರಾಜ್ಯಗಳಲ್ಲೂ ಇದ್ದಾರೆ, ದೊಡ್ಡ ಸ್ಥಾನಗಳನ್ನಲಂಕರಿಸಿದ್ದಾರೆ. ಅವರಿಂದಲೇ ಇಂದು ವೀರಪ್ಪ ಡಾ|| ರಾಜ್‌ರ ಅಪಹರಣಕಾರನಾಗಲು ಸಾಧ್ಯವಾಗಿದ್ದು, ನಮ್ಮ ರಾಜ್ಯವನ್ನು ಮಂಡಿಯೂರುವಂತೆ ಮಾಡಲಾಗಿದ್ದು. ಅವನೀಗ ವಿಚ್ಛಿದ್ರಕಾರಿ ತೀವ್ರಗಾಮಿ ಆತಂಕಕಾರಿಗಳ ಬಣವನ್ನೂ ತನ್ನೊಡನೆ ಸೇರಿಸಿಕೊಂಡಿದ್ದಾನೆ. ರಾಜ್ ಅವರನ್ನು ಹಿಂದಕ್ಕೆ ಪಡೆದ ನಂತರವಾದರೂ ಆ ಹಂತಕನನ್ನು ಹಿಡಿಯದಿದ್ದರೆ ನಮ್ಮ ಭವಿಷ್ಯ ನೆಟ್ಟಗಿರುವುದಿಲ್ಲ. ಅವನ ಕೈಯಲ್ಲಿ ಅಷ್ಟು ಜನ ಸತ್ತಿದ್ದಾರೆ, ಇನ್ನೂ ಎಷ್ಟು ಜನರನ್ನು ಸಾಯಗೊಡುತ್ತೇವೆ ? ಇಂದು ಚಿತ್ರೋದ್ಯಮಕ್ಕೆ ತಟ್ಟಿರುವ ಭೀತಿ ಮತ್ತು ನಷ್ಟ ಬೇರೆ ಕ್ಷೇತ್ರಗಳಿಗೂ ತಟ್ಟಲು ಬಿಡಬಾರದು. ಈ ಉದ್ಯಮದ ಕೂಲಿಗಾರರ ಪಾಡು ಕಳೆದ ಮೂರು ವಾರಗಳಲ್ಲಿ ಹೇಗಾಗಿದೆ ! ಉದ್ಯಮಪತಿಗಳು ಕಣ್ಣೀರು ಸುರಿಸುತ್ತಾರೆ, ಆದರೆ ಜೀವನ ದುರ್ಭರವಾಗುವುದು ಕೂಲಿಗಾರರಿಗೆ. ''ರಾಜ್ ಅವರನ್ನು ಬಿಡಿಸಿಕೊಳ್ಳಲು ಹಣ ಬೇಕಾದರೆ ನಾವು ಕೊಡುತ್ತೇವೆ, ಆಮೇಲೆ ಬೇಕಾದರೆ ತೆರಿಗೆ ವಿನಾಯಿತಿ ತೆಗೆದು ಹಾಕಿ,'' ಎಂದರು ಉದ್ಯಮಪತಿಗಳ ಅಧ್ಯಕ್ಷರು. ಅಂದರೆ ಅದಕ್ಕೂ ಅವರು ಹಣ ಬಿಚ್ಚುವುದಿಲ್ಲ ; ಅದೂ ಸಾರ್ವಜನಿಕರ ಮೇಲೇ ಬೀಳಬೇಕು, ಎಂದರ್ಥ. ಸಂತ್ರಸ್ತ ಕೂಲಿಯಾಳುಗಳಿಗೆ ಈ ರೀತಿಯ ಮಾತುಗಳಿಂದ ಹೊಟ್ಟೆ ತುಂಬುವುದಿಲ್ಲ. ವೀರಪ್ಪ ಮತ್ತು ಅವನ ಗುಪ್ತ ಸಹಚರರಿಂದಾಗಿ ನಾಳೆ ಬೇರೆ ಕ್ಷೇತ್ರಗಳವರಿಗೂ ಹಾನಿ ಉಂಟಾಗಬಾರದು. ಆದ್ದರಿಂದ ರಾಜ್ ಬಿಡುಗಡೆಯೊಂದಿಗೆ ಈ ಪ್ರಕರಣ ಮುಗಿಯುವಂತಿಲ್ಲ.

ಡಾ|| ರಾಜಕುಮಾರ್ ಅವರು ಹಾಗೂ ಅವರೊಂದಿಗೆ ಅಪಹೃತರಾಗಿರುವ ಮೂರು ಮಂದಿ ವೀರಪ್ಪನ ಕಟ್ಟಕಡೆಯ ಒತ್ತೆಯಾಳುಗಳಾಗಬೇಕು. ವೀರಪ್ಪನನ್ನು ಹಿಡಿದು ತರಬೇಕು. ವಿವಿಧ ಭಾಷಿಕರ ನಡುವೆ ಸಾಮರಸ್ಯ ಉಳಿಯಬೇಕು. ನಮ್ಮೆರಡು ರಾಜ್ಯಗಳ ಸಂಬಂಧವನ್ನು ತೀರ್ಮಾನಿಸಬೇಕಾದ್ದು ವೀರಪ್ಪನಲ್ಲ, ಅದನ್ನು ಮಾಡಬೇಕಾದ್ದು ರಾಜ್ಯಗಳ ಜನತೆ. ಜನತೆಯ ಪ್ರತಿನಿಧಿಗಳೆನಿಸಿಕೊಂಡಿರುವ ಸರ್ಕಾರಗಳ ಜವಾಬ್ದಾರಿ ಸ್ಪಷ್ಟವಾಗಿದೆ. ಮುಂದೆಯೂ ಮೀನ - ಮೇಷ ಎಣಿಸುತ್ತಾ ಕೂತರೆ ಡಾ|| ರಾಜ್ ಅವರ ನೇತೃತ್ವದಲ್ಲೇ ಚಳುವಳಿ ಹೂಡಬೇಕಾದೀತು. ಇದನ್ನು ಬರೆಯುವಾಗ್ಗೆ ನಮ್ಮ ಹಿರಿಯ ಕಲಾವಿದ ರಾಜ್ ಅವರು ಇನ್ನೂ ಮರಳಿ ಬಂದಿಲ್ಲ. 'ಹೊಸತು'ವಿನ ಓದುಗರಿಗೆ ಇದು ಮುಟ್ಟುವ ವೇಳೆಗೆ ಅವರು ಕ್ಷೇಮವಾಗಿ ಹಿಂದಿರುಗಿ ಬಂದಿದ್ದು ರಾಜ್ಯದಲ್ಲಿ ಹರ್ಷದ ಮಳೆ ಸುರಿಯುತ್ತಿರಲೆಂದು ಆಶಿಸುತ್ತೇವೆ. ಕೃಷ್ಣರಾಜಸಾಗರ ತುಂಬುವಂತೆ ಜನಸಾಗರದ ಹೃದಯವೂ ತುಂಬಿಬಂದು ಶಾಂತಿ ನೆಲೆಸಲಿ.

## ದಿಕ್ಕುಗೆಟ್ಟ ಶಿಕ್ಷಣ ನೀತಿ

ಸೆಪ್ಟೆಂಬರ್ ೫ ಶಿಕ್ಷಕರ ದಿನ. **ಶಿಕ್ಷಣದ** ದಿನ ಎಂದಿದ್ದರೆ ಉತ್ತಮವಿರುತ್ತಿತ್ತು. ಕೋಟ್ಯಾಧೀಶರಾಗಲು ದುರ್ದರ್ಶನದಲ್ಲಿ ಪೈಪೋಟಿ ನಡೆಸುವ ಎಷ್ಟೋ ಯುವಕರಿಗೆ ಡಾ|| ಎಸ್. ರಾಧಾಕೃಷ್ಣನ್ ಹೆಸರೇ ಗೊತ್ತಿಲ್ಲ. ಗೊತ್ತಿರುವ ಮಂದಿಯಲ್ಲಿ ಕೇಂದ್ರ ಶಿಕ್ಷಣ ಸಚಿವರು, ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಧ್ಯಕ್ಷರು, ಮಹಾನ್ ಪಂಡಿತರು ಇದ್ದಾರೆ. ಆದರೆ ಅವರು ನಿರ್ಮಿಸುವ ಪರಿಸರವು ಶಿಕ್ಷಣವನ್ನು ಕೊಲ್ಲುವಂಥದು. ''ಜ್ಯೋತಿಷ ವಿಜ್ಞಾನದ ವಿಶ್ವವಿದ್ಯಾಲಯ ತೆರೆಯಿರಿ, ಹಣ ಕೊಡುತ್ತೇವೆ, ಬಿಹಾರದಲ್ಲಿ ಒಂದು ತೆರೆದಾಗಿದೆ'', ಎನ್ನುವ ಯು.ಜಿ.ಸಿ. ಅಧ್ಯಕ್ಷರಿಗೆ ಯಜಮಾನನಾಗಿ ಡಾ|| ಮುರಳಿ ಮನೋಹರ ಜೋಶಿ ಇದ್ದಾರೆ. ಜ್ಯೋತಿಷ್ಯಕ್ಕಾಗಿ ಶಾಲೆ ತೆರೆದರೆ ಅದಕ್ಕೆ ''ಡೀಮ್ಡ್ ಯೂನಿವರ್ಸಿಟಿ'' ಸ್ಥಾನ ಕೊಡುವುದಾಗಿ ಅವರ ಆಶ್ವಾಸನೆ. ಅಂದರೆ, ಇತರ ವಿಶ್ವವಿದ್ಯಾಲಯಗಳು ''ಡೂಮ್ಡ್'' ಸ್ಥಾನ ಪಡೆಯಬೇಕೆಂದರ್ಥ. ಅವರ ನೇತೃತ್ವದಲ್ಲಿ ಇದು ತ್ವರಿತವಾಗಿ ನಡೆಯುತ್ತಿದೆ.

ಶಿಕ್ಷಣವೆಂದರೆ ಗಣಕಯಂತ್ರವೆಂದಷ್ಟೇ ನಮ್ಮ ಹಲವು ಶಿಕ್ಷಣವೇತ್ತರ, ನಾಯಕರ ಅಭಿಪ್ರಾಯ. ಬೆಂಗಳೂರು ವಿಶ್ವವಿದ್ಯಾಲಯದ ಎಲ್ಲ ಸ್ನಾತಕೋತ್ತರ ವಿದ್ಯಾರ್ಥಿಗಳಿಗೂ ಅದೀಗ ಕಡ್ಡಾಯ. ಹೇಳಿಕೊಡುವವರಿಗೇ ಇನ್ನೂ ತರಬೇತಿ ಇಲ್ಲ! ಹೇಳಿಕೊಡಲಾಗುವ ಪಠ್ಯ ಕ್ರಮವಂತೂ ಅಡುಗೂಲಜ್ಜಿ ಕಾಲದ ಕಂಪ್ಯೂಟರ್‌ಗೆ ಅಳವಡಿಸಿದ್ದುದು. ರಾಷ್ಟ್ರಮಟ್ಟದಲ್ಲಿ ನೋಡಿದರೆ ಭಾರತೀಯ ಇತಿಹಾಸ ಸಂಶೋಧನಾ ಸಂಸ್ಥೆಯ ಕತೆ ಸಾಲದೆಂಬಂತೆ ಈಗ ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆಗೂ ಗರ ಬಡಿದಿದೆ. ಅದರ ಕಲ್ಕತ್ತೆಯ ಕೇಂದ್ರದ ನಿರ್ದೇಶಕರು ಎಂ. ಎಲ್. ಸೋಂಧಿಯವರ ಬಾಲಿಶ ಪಾಂಡಿತ್ಯಕ್ಕೆ ಬೇಸತ್ತು ರಾಜಿನಾಮೆ ನೀಡಿದ್ದಾರೆ. ಇನ್ನು ಉತ್ಖನನ ಸರ್ವೇಕ್ಷಣದ ಅಧ್ಯಕ್ಷರನ್ನು ನೋಡಿದರೆ ಫತೇಪುರ ಸಿಕ್ರಿಯಡಿ ಜೈನ ದೇವಾಲಯವಿತ್ತೆಂದು ಹೋರಾಟ ನಡೆಸುತ್ತಾರೆ. ಅಲ್ಲದೆ ಭಾರತದಲ್ಲಿ ಆದಿವಾಸಿಗಳು ಯಾರೂ ಇಲ್ಲ, ತಾನೂ ಒಬ್ಬ ಆದಿವಾಸಿಯೇ, ಎಂದು ಹೇಳುತ್ತಾರೆ. ಶಿಕ್ಷಣದಲ್ಲಿ ಅವಿವೇಕದ ಪರಮಾವಧಿ ಇದು.

ವಿಜ್ಞಾನದ ಶಿಕ್ಷಣವನ್ನು ಮೂಲೆಗುಂಪಾಗಿಸಿರುವುದು ಕರ್ನಾಟಕದ ವೈಶಿಷ್ಟ್ಯ. ಏಕೆಂದರೆ, ಇಲ್ಲಿ ಎಲ್ಲರೂ ಇಂಜಿನಿಯರುಗಳು. ನಾಳೆ ಶಾಲಾ-ಕಾಲೇಜುಗಳಲ್ಲಿ ವಿಜ್ಞಾನ ಬೋಧಿಸಲು ಬೇರೆ ರಾಜ್ಯಗಳಿಂದ ಅಧ್ಯಾಪಕರನ್ನು ತರಬೇಕೇನೋ! ಯು.ಜಿ.ಸಿ. ಅಧ್ಯಕ್ಷರು ಪುರೋಹಿತರನ್ನು ತಯಾರು ಮಾಡಲು ವಿಶ್ವವಿದ್ಯಾಲಯಗಳಿಗೆ ಹಣ ನೀಡುತ್ತಾರಂತೆ. ಅವರ ಅವಶ್ಯಕತೆ ವಿದೇಶಗಳಲ್ಲಿದೆ, ವಿದೇಶಿ ಹಣ ಬರುತ್ತದೆ ಎಂಬುದು ಅವರ ಸಮರ್ಥನೆ. ಯಾವ ದೇವರಿಗೆ ಪೂಜಾರಿಗಳಾಗುತ್ತಾರೆ ಇವರು? ಮಾರಮ್ಮ, ಯಲ್ಲಮ್ಮ, ಖಂಡೋಬಾ ಇತ್ಯಾದಿಗಳ ಪೂಜಾರಿಗಳೂ ಉಂಟೆ? ಸ್ತ್ರೀಯರು ಮತ್ತು ಅಸ್ಪೃಶ್ಯರಾಗಿದ್ದವರಿಗೂ ಅವಕಾಶವುಂಟೆ? ಇದೆಲ್ಲಾ ಇಂದಿನ ನಮ್ಮ ಶಿಕ್ಷಣ ನೀತಿಯು ಎಷ್ಟು ಮೂರ್ಖತನದ್ದೆಂಬುದನ್ನು ತೋರಿಸುತ್ತದೆ. ಒಂದು ಕಡೆ ಕಂಪ್ಯೂಟರ್, ಇನ್ನೊಂದು ಕಡೆ ಮಧ್ಯಕಾಲೀನ ಅಂಧಯುಗದ ಮೌಲ್ಯಗಳು! ದೇಶದ ವ್ಯಕ್ತಿತ್ವವನ್ನು ನಾಶಮಾಡಲು ಹೊರಟಿದೆ ನಮ್ಮ ಕೇಂದ್ರ ಶಿಕ್ಷಣ ನೀತಿ.

ವಿಶ್ವವಿದ್ಯಾಲಯಗಳಲ್ಲಿ ಲಕ್ಷಗಟ್ಟಲೆ ಹಣ ಕೊಟ್ಟು ಪ್ರವೇಶ ಪಡೆಯುವ ಸೌಲಭ್ಯ, ಮಾಹಿತಿ ತಂತ್ರಜ್ಞಾನಕ್ಕೆಂದು ರಾಜ್ಯದಲ್ಲಿ ಇನ್ನೂ ೨೫೦೦ ಸ್ಥಾನಗಳು, ಬೇರೆ ವಿಷಯಗಳ ಬಗ್ಗೆ ಔದಾಸೀನ್ಯ, -ಇವು ನಮ್ಮ ನೀತಿಯಾದರೆ ನಾಳಿನ ಪರಿಸ್ಥಿತಿ ಏನು? ಬೇರೆ ತಂತ್ರಜ್ಞಾನ ಶಾಖೆಗಳನ್ನು ತೊರೆದು ಕೇವಲ ಮಾಹಿತಿ ತಂತ್ರಜ್ಞಾನದಿಂದ ದೇಶವನ್ನು ಕಟ್ಟುತ್ತೇವೆಯೆ? ಕೇಂದ್ರ ಸಮ್ಮಿಶ್ರ ಸರ್ಕಾರದ ಮಿತ್ರಪಕ್ಷಗಳು ಇದನ್ನೆಲ್ಲಾ ಕಣ್ಣುಮುಚ್ಚಿ ಸಹಿಸಿದರೆ ದೇಶವು ಪರತಂತ್ರಕ್ಕೆ ಸಿಲುಕಿ ನಲುಗಿಹೋಗುತ್ತದೆ. ಈ ಅನೀತಿಯನ್ನು ಹಿಮ್ಮೆಟ್ಟಿಸಲು ನಾವೆಲ್ಲಾ ಒಂದಾಗಬೇಕಾದ ಅನಿವಾರ್ಯತೆ ಇಂದಿನದು. ಶಿಕ್ಷಣದ ದಿನದಂದು ಇದರ ಬಗ್ಗೆ ಆಲೋಚನೆ ಮಾಡಿ ಕ್ರಿಯಾಶೀಲರಾಗೋಣ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎: ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ರಾಕ್ಷಸರು ಯಜ್ಞಕುಂಡದಲ್ಲೇ......

ಕಂನಾಡಿಗಾ ನಾರಾಯಣ ಅವರ ಅರೆಬೆಂದ ಲೇಖನದಲ್ಲಿ ಹಲವಾರು ಸ್ವಾರಸ್ಯಕರ ವಿಷಯಗಳ ಸ್ಯಾಂಪಲುಗಳು ದೊರೆಯುತ್ತವೆ.

ಮಂಗನಿಂದ ಮಾನವ ಬಂದಿದ್ದು, ಒಂದು ಕಾಲದಲ್ಲಿ ಎಲ್ಲರೂ ಕಾಡಿನಲ್ಲಿ ಇದ್ದದ್ದು ವೈಜ್ಞಾನಿಕ ಸತ್ಯ. ರಾಮಾಯಣ, ಮಹಾಭಾರತ ಮತ್ತು ಅದಕ್ಕಿಂತ ಮುಂಚೆ ಆರ್ಯರು ನಡೆಸುತ್ತಿದ್ದ ಯಾಗ ಯಜ್ಞಗಳಲ್ಲಿ ನೂರಾರು ಪ್ರಾಣಿಗಳನ್ನು ಬಲಿಕೊಡುತ್ತಿದ್ದು, ಯಥೇಚ್ಛವಾಗಿ ಭಕ್ಷಿಸುತ್ತಿದ್ದರು. ಆರ್ಯರು ಮತ್ತು ನಾಗರಿಕರೆ ಯಜ್ಞಗಳಲ್ಲಿ ಪ್ರಾಣಿಗಳನ್ನು ಬಲಿ ಕೊಟ್ಟು ಬೇಯಿಸಿ ಭಕ್ಷಿಸುತ್ತಿದ್ದಾಗ, ರಾಕ್ಷಸರು ಮರೆಯಲ್ಲಿ ನಿಂತು ಪ್ರಾಣಿಗಳನ್ನು ಯಜ್ಞಕುಂಡಗಳಿಗೆ ಎಸೆಯುವ ಪ್ರಮೇಯವೇ ಬರುತ್ತಿರಲಿಲ್ಲ. ಇದನ್ನು ವಿರೋಧಿಸಿದ ಬುದ್ಧ ಮತ್ತು ಅವನ ಮಾನವ ಪ್ರೀತಿ, ಅಹಿಂಸೆಯ ಸಂದೇಶದಿಂದ ಸಮಾಜದಲ್ಲಿ ವೈದಿಕ ಧರ್ಮದ ಬೇರುಗಳು ಅಲ್ಲಾಡಲು ಪ್ರಾರಂಭವಾದ ಮೇಲೆ ಮೊದಲಿಗೆ ಗೋಹತ್ಯೆ ನಿಲ್ಲಿಸಿದ ಆರ್ಯರು ಅನಂತರ ಗೋಪೂಜೆ ಮಾಡತೊಡಗಿದರು.

ಆರ್ಯ ಮತ್ತು ದ್ರಾವಿಡರ ಮಧ್ಯೆ ನಡೆಯುತ್ತಿದ್ದ ಸಾಮಾಜಿಕ ಸಂಘರ್ಷದ ಕಾಲದಲ್ಲಿ ಆರ್ಯರ ಯಾಗ, ಯಜ್ಞಗಳನ್ನು ವಿರೋಧಿಸಿ ಅಡಚಣೆ ಮಾಡುತ್ತಿದ್ದ ದ್ರಾವಿಡರನ್ನು ರಾಕ್ಷಸರೆಂದು ಅಣಕಿಸಿದ್ದು, ಈ ನೆಲದ ಮೂಲಸ್ಥರಾದ ದ್ರಾವಿಡರೆಲ್ಲ ಶೂದ್ರರಾಗಿದ್ದ ಸತ್ಯ ಸಂಗತಿಯಾಗಿದೆ. ಇದೇ ವಿಷಯವನ್ನು ಸುತ್ತಿ ಬಳಸಿ ಹೇಳಿರುವ ಕಂನಾಡಿಗರು 'ದೇವ'ರುಗಳು ತಮ್ಮ ಸುರಕ್ಷತೆಗಾಗಿ ಹಿಮಾಲಯ ಸೇರಿದ್ದರು ಎಂದಿದ್ದಾರೆ. ಆರ್ಯರಲ್ಲಿ ಪುರೋಹಿತ ವರ್ಗ ಮತ್ತು 'ದೇವ'ರುಗಳೆಂಬ ವರ್ಗಗಳಿದ್ದವೆ ? ಈ 'ದೇವ'ರುಗಳೆಂದರೆ ಯಾರು....?

ಇನ್ನು ಈ 'ದೇವ'ರುಗಳನ್ನು ನಾಗರಿಕರು ಒಲಿಸಿಕೊಳ್ಳಲು ಪುರೋಹಿತರ ಮೂಲಕ ಯಾಗ, ಯಜ್ಞಗಳನ್ನು ನಡೆಸುತ್ತಿದ್ದರು ಎನ್ನುತ್ತಾರೆ. ಇವರು ಯಾಗ, ಯಜ್ಞಗಳನ್ನು ನಡೆಸಲು ಅನಾಗರಿಕರಿರುವ ಕಾಡುಗಳಿಗೆ ಏಕೆ ಹೋಗುತ್ತಿದ್ದರು....? ಬೆಂಕಿ ಹೊತ್ತಿಸಲು ನಾಗರಿಕರಿಗೆ ಮತ್ತು ಪುರೋಹಿತರಿಗೆ ಮಾತ್ರ ಗೊತ್ತಿತ್ತೆ......? ಮೂಲವಾಗಿ ಬೆಂಕಿ ಹುಟ್ಟಿದ್ದೇ ಕಾಡಿನಲ್ಲಿ ಅಲ್ಲವೆ....? ಒಟ್ಟಿನಲ್ಲಿ ಈ ಲೇಖನ ಯಜ್ಞಕುಂಡದಲ್ಲಿ ಅರೆಬೆಂದ ಲೇಖನವಾಗಿದ್ದು ಮೌಲ್ಯಗಳನ್ನೇ ಎತ್ತಿ ಹಿಡಿಯುವ 'ಹೊಸತು' ಪತ್ರಿಕೆಯಲ್ಲಿ ಕಣ್ಣು ತಪ್ಪಿಸಿ ನುಸುಳಿಕೊಂಡಿದೆ ಎಂಬೋಣವೆ ?

*ಬೆಂಗಳೂರು* — ***ಎಂ. ವೆಂಕಟಸ್ವಾಮಿ***

### ಕ್ಷಮೆಗೆ ಅರ್ಹರಲ್ಲ

ಆಗಸ್ಟ್ ತಿಂಗಳ ಸಂಚಿಕೆಯೊಂದಿಗೆ 'ಹೊಸತು' ಎರಡನೇ ವರ್ಷಕ್ಕೆ ಕಾಲಿಡುತ್ತಿರುವುದು ಬಹಳ ಸಂತಸದ ವಿಷಯ. ವಿಭಿನ್ನ ಲೇಖನಗಳನ್ನೊಳಗೊಂಡು ಬರುತ್ತಿರುವ 'ಹೊಸತು'ವನ್ನು ನೋಡಲು ತುಂಬಾ ಸಂತೋಷವಾಗುತ್ತದೆ. ಹಂಗರಹಳ್ಳಿಯ ಜೀತ ಮುಕ್ತರ ಅಳಲು ಲೇಖನ ಉತ್ತಮವಾಗಿತ್ತು. ಪುಟ್ಟಸ್ವಾಮಿಯಂತಹ ಧೂರ್ತರು ಇಂದು ಜೈಲು ಸೇರಿದರೆ ತನ್ನ ಜನಬಲ, ಧನಬಲದಿಂದ ನಾಳೆ ಜೈಲಿನಿಂದ ಹೊರಬಂದು ಪುನಃ ಅಟ್ಟಹಾಸದಿಂದ ಮೆರೆಯುತ್ತಾರೆ. ಈತನಂಥವರು ಯಾವ ಕಾರಣಕ್ಕೂ ಕ್ಷಮಿಸಲನರ್ಹರು. ಈತನ ಅಟ್ಟಹಾಸ ಮುರಿದ ರೈತ ಸಂಘದ ಬಂಧುಗಳಿಗೆ ನನ್ನ ಅಭಿನಂದನೆಗಳು.

*ಬೈಕಂಪಾಡಿ* — ***ಆಶಾ.ಜಿ***

ಆಗಸ್ಟ್ ತಿಂಗಳ 'ಹೊಸತು'ವಿನ ಪ್ರಸ್ತುತದಲ್ಲಿ ಪ್ರಕಟವಾದ ಶ್ರೀರಂಗಪಟ್ಟಣ ತಾಲ್ಲೂಕು ಹಂಗರಹಳ್ಳಿಯಲ್ಲಿ ಕಾನೂನನ್ನೇ ಕಾಲ ಕಸ ಮಾಡಿದ್ದ ಪುಟ್ಟಸ್ವಾಮಿ ಮತ್ತು ಶ್ರೀನಿವಾಸ್‌ಗೆ ಜೈಲುವಾಸ ಆಗಿದೆ ಎಂದು ಓದಿ ತುಂಬಾ ಸಂತೋಷವಾಯಿತು. ಹೀಗೆ ಅಸಹಾಯಕ ಜನರಿಗೆ ನ್ಯಾಯ ದೊರಕಿಸಿಕೊಟ್ಟ ರೈತ ಸಂಘದ ಕಾರ್ಯಕರ್ತರಿಗೆ ತುಂಬಾ ಧನ್ಯವಾದಗಳು.

*ಕೊಡಿಯಾಲ್ ಬೈಲ್* — ***ಮಣಿಮಾಲ ಶೆಟ್ಟಿ***




### ಗಮನ ಸೆಳೆದ ಲೇಖನಗಳು

ಆಗಸ್ಟ್ ೨೦೦೦ದ 'ಹೊಸತು' ಪತ್ರಿಕೆಯು ಹೊತ್ತು ತಂದ ಮುಖಪುಟ, ಲೇಖನಗಳು ಆಕರ್ಷಕವಾಗಿದ್ದು, ಡಾ॥ ರಂಗರಾಜ ವನದುರ್ಗರ 'ಹಗಲು ವೇಷ'ದ ಆಶಯ ಎಂಬ ಜಾನಪದ ಕಳಕಳಿಯ ಚಲನಚಿತ್ರದ ಬಗ್ಗೆ ಲೇಖನ ಓದುತ್ತಿದ್ದಂತೆ ಗಮನ ಸೆಳೆಯಿತು.

ಸ್ವಾತಂತ್ರ್ಯಪೂರ್ವದ ಘಟನೆಯನ್ನು ಚಿತ್ರದ ಮೂಲಕ ಎತ್ತಿ ತೋರಿಸಿದ ಬರಗೂರರ ಸಾಧನೆ ಮೆಚ್ಚಲೇ ಬೇಕು. ಅಲೆಮಾರಿ ಜನಾಂಗದ ಸುತ್ತ ಹೆಣೆದ ಕಥೆಯು ಸೊಗಸಾಗಿ ಮೂಡಿಬಂದಿದ್ದರೂ, ಜನರ ಮನಮುಟ್ಟುವಲ್ಲಿ ವಿಫಲವಾದದ್ದು ದೌರ್ಭಾಗ್ಯವೇ ಸರಿ. ಪರಂಗಿಯರ ಮೇಲೆ ಬಂಡೇಳುವ ಸರಳ ಕಥೆಯ ಈ ಚಿತ್ರ ನಾವು ನೋಡುತ್ತಿದ್ದಂತೆ ಬೇರೆ ಪರಿಸರದ ಕಡೆ ಸುಳಿದಂತಾಯಿತು.

*ರಬಕವಿ* — ***ಚಿದಾನಂದ ಹೊ. ಪಾಗಾದ***

ಆಗಸ್ಟ್ ಸಂಚಿಕೆಯಲ್ಲಿನ 'ಅಣು ಸಂಸ್ಕೃತಿಯ ಅಪಾಯಗಳು' ಲೇಖನ ಪ್ರಸಕ್ತ ಸನ್ನಿವೇಶದಲ್ಲಿ ತೀರಾ ಪ್ರಸ್ತುತವೆನಿಸಿಕೊಳ್ಳುತ್ತದೆ. ಮನುಕುಲದ ಇತಿಹಾಸದಲ್ಲಿ 'ಮಾನವ ಬದುಕಿನ ನಡೆ'ಯನ್ನು ಪರಿಸರ, ಸಂಸ್ಕೃತಿ ಮತ್ತು ಶಕ್ತಿಯ ಆವಿಷ್ಕಾರಗಳೊಂದಿಗೆ ಸಂಬಂಧಿಸಿ ನಂಗಲಿಯವರು ಸೃಷ್ಟಿಸಿರುವ 'ಪ್ರಾಕೃತಿಕ ಶಕ್ತಿ', 'ಸಂಸ್ಕೃತ ಶಕ್ತಿ' ಹಾಗೂ 'ವಿಕೃತ ಶಕ್ತಿ'ಗಳ ಅರ್ಥವ್ಯಾಪ್ತಿ ಬಹಳ ದೊಡ್ಡದು. ಇಡೀ ಮನುಕುಲದ ಬದುಕಿನ ಕ್ರೋಡೀಕೃತ ಮಾಹಿತಿ ಈ ಮೂರು ಮಾತುಗಳಲ್ಲಡಗಿದೆ. ಈಗಂತೂ ಈ 'ಅಣು ಸಂಸ್ಕೃತಿಯ' ಅಪಾಯಗಳನ್ನು ಪ್ರತಿಯೊಬ್ಬರೂ ಎಚ್ಚರಿಕೆಯಿಂದ ಅರಿಯಬೇಕಾದ ಅನಿವಾರ್ಯತೆಯಿದೆ. ಲೇಖಕರಿಗೆ ಧನ್ಯವಾದಗಳು.

*ಕೋಲಾರ* — ***ಹೆಚ್ ಎ. ಪುರುಷೋತ್ತಮರಾವ್***

ಆಗಸ್ಟ್ ೨೦೦೦ - ಸಂಚಿಕೆಯಲ್ಲಿ 'ಪ್ರಾದೇಶಿಕ ವಿಭಿನ್ನತೆಗಳು' ಲೇಖನವನ್ನು ಓದಿದೆ. ವಿಡಂಬನೆ, ಹರಟೆಯಾಗಿದ್ದರೆ ಪ್ರತಿಕ್ರಿಯಿಸುವ ಅಗತ್ಯವಿರಲಿಲ್ಲ. ಲೇಖನದಲ್ಲಿ 'ಹೆಂಗಸು' ಎಂದರೆ ಸೂಳೆ, ರಂಡೆ ಎಂಬ ಅರ್ಥಗಳಿವೆ ಎಂದು ಬರೆಯಲಾಗಿದೆ. ನಾನು ರಾಯಚೂರು ಜಿಲ್ಲೆಯವನು. 'ಹೆಂಗಸು' ಎಂಬುದಕ್ಕೆ ಮೇಲಿನ ಅರ್ಥಗಳಿರುವುದನ್ನು ನಾನು ಕೇಳಿಲ್ಲ, ಕಂಡಿಲ್ಲ. ಹೆಂಗಸು-ಹೆಂಗಸರು ಎಂದು ಸರ್ವೇಸಾಮಾನ್ಯರು ಬಳಸುತ್ತಾರೆ. 'ಖೂನ್' ಎನ್ನುವುದಿಲ್ಲ. 'ಕೂನ' ಎನ್ನುತ್ತಾರೆ. ಇದು ಗುಣವಾಚಕವಲ್ಲ. 'ಗೊತ್ತಿರುವ' (ಪರಿಚಯವಿರುವ) ಎಂಬ ಅರ್ಥ ಕೊಡುತ್ತದೆ. ಬೆರಕಿ (ಬೆರಕೆ-ಅಲ್ಲ) ಎಂದರೆ 'ಕಿತಾಪತಿ' ಮಾಡುವ ವ್ಯಕ್ತಿಗೆ ಹೇಳುವ ಪದವಿದು. 'ಬ್ಯಾಳೆ' ಅನ್ನುತ್ತಾರೆಯೇ ಹೊರತು 'ಬೇಳೆ' ಅನ್ನುವುದು ಅಪರೂಪ. ನಮ್ಮ ಭಾಗದವರು ಬ್ಯಾಳೆ, ಬ್ಯಾಡ ಅಂದಂತೆ ಬೆಂಗಳೂರು, ಮೈಸೂರು ಭಾಗದವರಿಗೆ ಅನ್ನಲು ಬರುವುದಿಲ್ಲ. 'ಬಾ'ಕ್ಕೆ ಇರುವ 'ಯ'ದ ಒತ್ತನ್ನು ಅನ್ನುವಾಗ ನಮ್ಮವರು ಭಾರ ಹಾಕಿ ಅನ್ನುವುದಿಲ್ಲ. ಹೇಳುತ್ತ ಹೋದರೆ ಇದೂ ಲೇಖನವಾಗುವ ಸಾಧ್ಯತೆಯಿದೆ. ಇಂಥ ಲೇಖನ ಪ್ರಕಟಿಸುವಾಗ ಯೋಚಿಸುವುದು ಒಳ್ಳೆಯದು.

*ಕನ್ನಡ ವಿಶ್ವವಿದ್ಯಾಲಯ, ಹಂಪಿ* — ***ಎನ್. ಅಮರೇಶ***

'ಹೊಸತು' ಪತ್ರಿಕೆ ಕಳೆದೊಂದು ವರ್ಷದಿಂದ ಓದುಗರಲ್ಲಿ ವಿಚಾರಶಕ್ತಿ ಚಿಂತನೆಯನ್ನು ಬೆಳೆಸಲು ಶಕ್ಯವಾಗಿದೆ. ಪುರಾಣ, ಚರಿತ್ರೆ, ವರ್ತಮಾನದ ಸಂಗತಿಗಳು, ಭವಿಷ್ಯದ ಕನ್ನೋಟಗಳು ಬಗೆಗಿನ ಲೇಖನಗಳು ಓದುಗ ವರ್ಗದಲ್ಲಿ ಹೊಸತೊಂದು ಪ್ರಜ್ಞೆ ಬೆಳೆಸುತ್ತಿದ್ದು ಹೀಗೆಯೇ ಮುಂದುವರಿಯಲಿ.

*ಕಾಸರಗೋಡು* — ***ಶ್ರೀಧರಭಟ್ ಪೈವಳಿಕೆ***

ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ''ನಾನು ಅಮೆರಿಕೆಯ ಬೇಹುಗಾರಳಾಗಬೇಕೆ?'' ತನು ಮೆಹ್ತಾ ತಿವಾರಿಯವರ ಅನುಭವ ಲೇಖನ, ಅಮೆರಿಕೆಯು ಬಂಡವಾಳಶಾಹಿ ನೀತಿಗೆ ಒತ್ತು ನೀಡುತ್ತಿರುವುದರ ಹಿಂದಿರುವ ಗೂಢಾರ್ಥ ಏನೆಂಬುದು ಸ್ಪಷ್ಟಪಡಿಸಿತು.

ಓದುಗರನ್ನು ''ಚಿಂತನೆಗೆ'' ಹಚ್ಚುವ ''ಹೊಸತು''ವಿನ ಭಾಷೆ ಕಠಿಣವಾದರೂ ಅದು ಅನಿವಾರ್ಯವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

*ಹೊನ್ನಹಮ್ಮಿಗಿ* — ***- ರವಿ ಸೋ. ದೇವರೆಡ್ಡಿ***

ಅಗಲಿದ ರಾಷ್ಟ್ರನಾಯಕರಿಗೆ ಅರ್ಪಿಸುವ ಚರಮ ಕಹಳೆ ಈಗಷ್ಟೆ ಮೊಳಗಿ ನಿಶ್ಶಬ್ದವಾಯಿತು ! ರಾಷ್ಟ್ರಗೌರವ ಅರ್ಪಿಸಲಿಕ್ಕಾಗಿಯೆ ಚಿತ್ರದುರ್ಗಕ್ಕೆ ಬಂದಿದ್ದ ಉಪ ರಾಷ್ಟ್ರಪತಿ ಕೃಷ್ಣಕಾಂತ್, ರಾಜ್ಯಪಾಲೆ ಶ್ರೀಮತಿ ರಮಾದೇವಿ ಅಂತ್ಯ ದರ್ಶನ ಪಡೆದು ನಿರ್ಗಮಿಸಿದರು. ನಿಜಲಿಂಗಪ್ಪನವರ ಕಳೇಬರಕ್ಕೆ ಯಥಾವತ್ತಾಗಿ ಧಾರ್ಮಿಕ ಸಂಸ್ಕಾರ ವಿಧಿ ಪ್ರಾರಂಭ ವಾಯಿತು. ಅದರೊಡನೆಯೇ ಜನರ ನೂಕು ನುಗ್ಗಲೂ ಪ್ರಾರಂಭವಾಯಿತು. ಮೂರು ಹಿಡಿ ಮಣ್ಣು ಕೊಟ್ಟು ಋಣ ತೀರಿಸಲಿಕ್ಕಾಗಿಯೇ ದೂರ ದೂರದಿಂದ ಬಂದಿದ್ದವರು ಒಬ್ಬರ ಮೇಲೊಬ್ಬರು ಬಿದ್ದು ನುಗ್ಗುತ್ತಿದ್ದರು. ನುಗ್ಗಲಾರದವರು ದೂರದಲ್ಲಿ ನಿಂತಿದ್ದರು. ಹಾಗೆ ನಿಂತಿದ್ದವರಲ್ಲಿ ನಿಜಲಿಂಗಪ್ಪನವರ ಹಿರಿಯ ಮಗಳು ಪಾರ್ವತಮ್ಮ ಮತ್ತು ಸೋದರಿಯರು!

'ಅಂತ್ಯ ದರ್ಶನ ಆಯಿತೆ? ಮಣ್ಣು ಕೊಟ್ಟಿರಾ?' ಎಂದೆ.

'ಇಲ್ಲ . ಬಿಡಲೊಲ್ಲರು!' ಎಂದರು ಪಾರ್ವತಮ್ಮ ಸಣ್ಣ ಮುಖ ಮಾಡಿಕೊಂಡು, ಕಣ್ಣಲ್ಲಿ ನೀರು ತಂದು.

'ಎಲ್ಲಿಯಾದರೂ ಉಂಟೆ ? ಎಲ್ಲರೂ ಇದ್ದೀರಾ? ' ನಾನು ದಿಗಿಲಿನಿಂದ ಕೇಳಿದೆ. 'ಬನ್ನಿ, ಹೋಗೋಣ' ಎಂದು ನಾಲ್ಕು ಹೆಜ್ಜೆ ಆ ನೂಕು ನುಗ್ಗಲಿನಲ್ಲಿ ನುಗ್ಗಿದೆ.



# ಸಂನ್ಯಾಸಿಯಂತಿದ್ದ ಸಂಸಾರಿ ಎಸ್.ಎನ್.

ಜನರೂ ಮುನ್ನುಗ್ಗುತ್ತಿದ್ದರು. ಅಲ್ಲಿದ್ದ ಪೊಲೀಸರು ಎಲ್ಲರನ್ನೂ ಹಿಂದಕ್ಕೆ ದಬ್ಬುತ್ತಿದ್ದರು. ನಮ್ಮೊಡನಿದ್ದ ವರೊಬ್ಬರು ಪೊಲೀಸರಿಗೆ 'ಇವರು ನಿಜಲಿಂಗಪ್ಪನವರ ರಿಲೇಷನ್ಸ್' ಎಂದರು.

ಆ ಪೊಲೀಸ್ ಅಧಿಕಾರಿ : 'ಅವರಿಗೆ ಎಲ್ಲರೂ ರಿಲೇಷನ್ಸೇ !' ಎಂದು ಲಾಠಿಯಿಂದ ಅಡ್ಡಗಟ್ಟಿದ.

ನಾನು : 'ನಿಜ, ಆದರೆ ಇವರು ಅವರ ಮಕ್ಕಳು' ಎಂದೆ. ಆ ಪೊಲೀಸ್ ಅಧಿಕಾರಿ ಕೂಡಲೇ ಸೆಟೆದು ನಿಂತು ತನ್ನ ತೋಳುಗಳನ್ನು ಚಾಚಿ ದಾರಿ ಮಾಡಿಕೊಟ್ಟ. ಇತರ ಪೊಲೀಸರೊಡನೆ ನಮ್ಮನ್ನು ಸಮಾಧಿಯತ್ತ ಕರೆದೊಯ್ದ. ಪಾರ್ವತಮ್ಮ ಅವರ ಸೋದರಿಯರು ಕೊನೆಗೂ ಅಂತ್ಯದರ್ಶನ ಮಾಡಿದರು !

ಅಲ್ಲಿ ಅಂದು ನಡೆದ ಈ ಘಟನೆ, ಬಹುಶಃ ನಿಜಲಿಂಗಪ್ಪನವರ ಇಡೀ ಜೀವನದ ಒಂದು ಸಜೀವ ವ್ಯಾಖ್ಯಾನ; ಸಾಂಕೇತಿಕ ವಿಮರ್ಶೆ ಎನ್ನುವ ಭಾವನೆ ನನ್ನ ಮನದಲ್ಲಿ ಹೊಳೆಯಿತು. ಹೌದು, ನಿಜಲಿಂಗಪ್ಪನವರಿಗೆ ಯಾರು 'ರಿಲೇಷನ್' (ಸಂಬಂಧಿ) ಅಲ್ಲ ? ಇಡೀ ಕರ್ನಾಟಕದಲ್ಲಿ ಅಥಣಿ, ನಿಪ್ಪಾಣಿ, ಬೀದರ್‌ನಿಂದ ಹಿಡಿದು ದಕ್ಷಿಣದ ಕಾಸರಗೋಡಿನವರೆಗೆ ಅವರ ಬಂಧುಗಳೇ! ಮುಖ್ಯಮಂತ್ರಿಗಳಾಗಿದ್ದರೆಂಬ ಅರ್ಥದಲ್ಲಿ ಪ್ರಜೆಗಳೆಲ್ಲರೂ ಅವರ ಬಂಧುಗಳೇ ಎಂಬ ಆಲಂಕಾರಿಕ ಅರ್ಥದಲ್ಲಿಯೆ ಮಾತ್ರವಲ್ಲದೆ, ವಾಸ್ತವವಾಗಿಯೂ ಅವರು ಎಲ್ಲರ ಬಂಧುಗಳಾಗಿದ್ದರು. ದಸರಾ ದೊಂಬಿಯಲ್ಲಿ ಆಗಲಿ, ನಾಯ್ಕನ ಹಟ್ಟಿ ಜಾತ್ರೆಯಲ್ಲಿ ಆಗಲಿ, ಕಾಂಗ್ರೆಸ್ ಅಧಿವೇಶನದಲ್ಲಿ ಆಗಲಿ, ಏಕೀಕರಣ ಮಹಾಧಿವೇಶನದಲ್ಲಿ ಆಗಲಿ...... ಎಲ್ಲಿಯೋ ಯಾವಾಗಲೋ ಒಮ್ಮೆ ಅವರನ್ನು ಕಂಡು ಮಾತನಾಡಿಸಿದ್ದವರನ್ನು ಅವರು ಮರೆಯುತ್ತಲೇ ಇರಲಿಲ್ಲ ! ಅವರ ಹೆಸರು ಊರು ಉದ್ಯೋಗ ಎಲ್ಲವನ್ನೂ ನೆನಪಿಟ್ಟುಕೊಂಡು ಕೇಳುತ್ತಿದ್ದರು ! ಇಂಥ ಆತ್ಮೀಯತೆ ಅವರನ್ನು ಎಲ್ಲರ ಬಂಧುವಾಗಿಸಿತ್ತು. ಆ ಪೊಲೀಸ್ ಅಧಿಕಾರಿ 'ಅವರಿಗೆ ಎಲ್ಲರೂ ರಿಲೇಷನ್ಸೇ' ಎಂದ ಮಾತು ಸತ್ಯ.

ಆದರೆ ಹೊಟ್ಟೆಯ ಮಕ್ಕಳು ದೂರ ನಿಂತಿದ್ದರು!! ಹೌದು, ನಿಜ ಜೀವನದಲ್ಲೂ ನಿಜಲಿಂಗಪ್ಪನವರಿಂದ ಅವರ ಮಕ್ಕಳು ದೂರ, ಬಹುದೂರ ಇರುತ್ತಿದ್ದರು. ಅವರ ಒಂಭತ್ತು ಮಕ್ಕಳಲ್ಲಿ ಯಾರೊಬ್ಬರೂ ಅವರ ಹತ್ತಿರ - ಅಂದರೆ ಅಧಿಕಾರದ ಹತ್ತಿರ ಸುಳಿಯುತ್ತಿದ್ದಿಲ್ಲ. ಅವರು ಮುಖ್ಯಮಂತ್ರಿಗಳಾಗಿದ್ದಾಗ ಅಧಿಕೃತ ನಿವಾಸಗಳಾಗಿದ್ದ 'ಕುಮಾರ ಕೃಪಾ'ದಲ್ಲಿ ಆಗಲಿ, 'ಬಾಲಬ್ರೂಯಿ' ಅಲ್ಲಿ ಆಗಲಿ ಆ ಮಕ್ಕಳು ಒಬ್ಬಾನೊಬ್ಬರೂ ಸುಳಿಯುತ್ತಿದ್ದಿಲ್ಲ. ಅವರು ಮಡದಿ ಮಕ್ಕಳೊಡನೆ ಕಳೆಯುತ್ತಿದ್ದ ಕಾಲ ಎಂದರೆ ಊಟದ ಸಮಯದಲ್ಲಿ; ಇಲ್ಲವೆ ತಮ್ಮ ಮಕ್ಕಳ ಮೊಮ್ಮಕ್ಕಳ ಮದುವೆ ಮುಂತಾದ ಸಮಾರಂಭಗಳಲ್ಲಿ. ಯಾವ ಸಾರ್ವಜನಿಕ ಸಮಾರಂಭಗಳಲ್ಲೂ ಅವರ ಮಕ್ಕಳು ಮಡದಿ ಅವರ ಎಡಬಲ ಕಾಣಿಸಿಕೊಳ್ಳುತ್ತಿರಲಿಲ್ಲ ! ಅವರ ಈ ನಡತೆಯಲ್ಲಿ ರಾಜ್ಯಾಧಿಕಾರ ತಮ್ಮ ಖಾಸಗೀ ಆಸ್ತಿಯಲ್ಲ; ಅದರಲ್ಲಿ ತಮ್ಮ ಸಂಬಂಧಿಗಳ ಪಾಲು ಏನೂ ಇಲ್ಲ ಎಂಬ ಪ್ರಜಾಸತ್ತೆಯ ಮೂಲಸಿದ್ಧಾಂತವನ್ನೇ ಆಚರಣೆಯಲ್ಲಿ ತೋರಿಸಿದರು. ಅವರ ಅಂತ್ಯ ಸಂಸ್ಕಾರದ ದಿನವೂ ಅವರ ಮಕ್ಕಳು ದೂರ ನಿಂತುಕೊಂಡದ್ದು ಅವರ ಜೀವನ ಸಿದ್ಧಾಂತದ ಸಾಂಕೇತಿಕ ಮಕುಟಮಣಿ. ಇದಕ್ಕಿಂತ ಉತ್ತಮ ರೀತಿಯಲ್ಲಿ ಆ ತಂದೆಗೆ ಈ ಮಕ್ಕಳು ಗೌರವ ತೋರಲಾರರು !!

ನಿಜಲಿಂಗಪ್ಪನವರು ಜನರಿಗೆ ಹತ್ತಿರವಾದರು. ಮನೆಯವರಿಗೆ ದೂರವಾದರು. ಅಂದರೆ ಮಕ್ಕಳನ್ನು ಅನಾದರ ಮಾಡಿದರು ಎಂದಲ್ಲ. ಆದರೆ ರಾಜಕೀಯ ಜೀವನ ಸಾಂಸಾರಿಕ ಜೀವನದಿಂದ ದೂರ ಮಾಡಿತು. ಅದು ಅವರಿಗೆ ಲಾಭದಾಯಕ ವೃತ್ತಿ ಆಗಿರಲಿಲ್ಲ. ಅವರು ರಾಜಕೀಯದಲ್ಲಿ ಕಾಲಿರಿಸಿದಾಗ ಅವರ ಸ್ವಂತ ವಕೀಲಿ ವೃತ್ತಿ ವರಮಾನ ಸಾಕಷ್ಟಿತ್ತು. ಆ ವೃತ್ತಿಲಾಭವನ್ನು ನಷ್ಟ ಮಾಡಿಕೊಂಡು ಕಠಿಣ ಜೀವನ ಆರಿಸಿಕೊಂಡರು! ಅಧಿಕಾರ ಬಂದ ಮೇಲೂ ಅವರು ಆಗಿದ್ದ ನಷ್ಟವನ್ನು ತುಂಬಿಕೊಳ್ಳಲಿಲ್ಲ . ಅಧಿಕಾರ ಇದ್ದಾಗ ಅವಕಾಶ ಸಿಕ್ಕಾಗ ಕೋಟಿ ಹೊಡೆಯಲಿಲ್ಲ ! ಲಕ್ಷ ಕೂಡಿಡಲಿಲ್ಲ. ಹಾಗೆ ಹೊಡೆಯುವುದೂ, ಕೂಡಿಡುವುದೂ ನ್ಯಾಯವೆಂದೇ ಸಾಧಿಸುವ ಭ್ರಷ್ಟ ರಾಜಕಾರಣಿಗಳನ್ನು ನೋಡುವ ಈ ಕಾಲದಲ್ಲಿ ಅಂಥ ಜೀವನ ನಡೆಸಿದ ಆ ವ್ಯಕ್ತಿ ಯಾವ ಸಂನ್ಯಾಸಿಗಿಂತ ಕಡಿಮೆ! ಅವಕಾಶವಿದ್ದರೂ ಸತ್ಯಪಥದಿಂದ ವಿಚಲಿತರಾಗದಿರುವ ಗಟ್ಟಿ ಮನಸ್ಸು ಎಷ್ಟು ಜನರಿಗಿದೆ!

ಹೋಗಲಿ, ಆಸ್ತಿ ಹಣ...... ಬೇಡವೆಂದು ದೂರ ಸರಿದವರು ಇದ್ದರೂ ಇರಬಹುದು. ಅಧಿಕಾರವನ್ನೂ ದೂರ ಸರಿಸಿದವರು ಎಷ್ಟು ಜನ! ಸಂನ್ಯಾಸಿಗಿರುವ ಕೊಟ್ಟ ಕೊನೆ ದೌರ್ಬಲ್ಯ ಕೀರ್ತಿಕಾಮನೆ ಎನ್ನುತ್ತಾರೆ. ಅವರು ಮುಖ್ಯಮಂತ್ರಿಗಳಾಗಿದ್ದು ಅಧಿಕಾರ ಪಡೆದಿದ್ದರಲ್ಲವೆ? ಆದರೆ ಅದಕ್ಕಿಂತಲೂ ಹೆಚ್ಚಿಗೆ ಅಧಿಕಾರ ಬಂದಾಗಲೂ ಅವರು ಅದಕ್ಕೆ ಬಲಿಯಾಗಲಿಲ್ಲ. ಅವರು ಮೊದಲನೆ ಲೋಕಸಭೆಯ ಸದಸ್ಯರಾಗಿದ್ದಾಗ ಪ್ರಧಾನಿ ನೆಹರೂ, ಅವರಿಗೆ ಪತ್ರ ಬರೆದು ಒಂದು ರಾಜ್ಯದ ರಾಜ್ಯಪಾಲರಾಗಿ ಹೋಗಬೇಕೆಂದು ಸೂಚನಾಪೂರ್ವಕ ವಿನಂತಿ ಮಾಡಿದ್ದರು (ಆ ಪತ್ರವನ್ನು ನಾನು ನೋಡಿದ್ದೆ).

**ಕೋ. ಚೆನ್ನಬಸಪ್ಪ**

ನಿಜಲಿಂಗಪ್ಪನವರು ರಾಜ್ಯಪಾಲ ಹುದ್ದೆ ಬೇಡವೆಂದರು. ಮುಂದೆ ಮುಖ್ಯಮಂತ್ರಿಗಳಾಗಬೇಕೆಂದೇ ರಾಜ್ಯಪಾಲ ಹುದ್ದೆ ಬಿಟ್ಟರೆಂದು ಬುದ್ಧಿವಂತರು ವ್ಯಾಖ್ಯಾನ ಮಾಡಿದರೆ ಅದಕ್ಕೆ ನನ್ನಲ್ಲಿ ಉತ್ತರವಿಲ್ಲ!

೧೯೭೭ರಲ್ಲಿ ಪ್ರಥಮ ಬಾರಿ ಕೇಂದ್ರದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ರಾಷ್ಟ್ರಪತಿ ಸ್ಥಾನಕ್ಕೆ ನಿಜಲಿಂಗಪ್ಪನವರ ಹೆಸರನ್ನು ಸೂಚಿಸಿದಾಗ ಅವರು 'ನನಗೆ ಬೇಡ. ಸಂಜೀವ ರೆಡ್ಡಿಯವರನ್ನೇ ಮಾಡಿ' ಎಂದು ಆ ಉನ್ನತ ಹುದ್ದೆಯನ್ನೂ ಬಿಟ್ಟುಕೊಟ್ಟರು. ಅವರ ಹೇಳಿಕೆ ಪತ್ರಿಕೆಗಳಲ್ಲಿ ಬಂದಾಗ ನಾನು ಅವರಿಗೆ ಪತ್ರ ಬರೆದು 'ದಯವಿಟ್ಟು ಒಪ್ಪಿಕೊಳ್ಳಿ' ಎಂದು ವಿನಂತಿ ಮಾಡಿದೆ. ಆಗ ಅವರು ನನಗೆ ಉತ್ತರಿಸಿ : 'ಹಿಂದೆ ಶ್ರೀ ಸಂಜೀವ ರೆಡ್ಡಿಯವರು ಸೋಲು ಅನುಭವಿಸಿದ್ದಾರೆ. ಅವರಿಗೇ ಸಲ್ಲಬೇಕು' ಎಂದು ತಿಳಿಸಿದರು (ಆ ಕಾರ್ಡು ಈಗಲೂ ನನ್ನಲ್ಲಿರಬೇಕು). ಅಂದರೆ ಇದಕ್ಕೆ ಏನು ಹೇಳಬೇಕು? ಆಗಲೇ ೭೫ ತುಂಬಿದ್ದ ಅವರು ತಮಗಿಂತ ಕಿರಿಯರಾಗಿದ್ದ ಶ್ರೀ ರೆಡ್ಡಿ ಅವರಿಗೆ ಬಿಟ್ಟುಕೊಡಬೇಕಾದರೆ ಅವರನ್ನು 'ಸಂನ್ಯಾಸಿ' ಎನ್ನಬೇಕೊ ಇನ್ನೇನು ಎನ್ನಬೇಕೋ?

ಅಂದರೆ ಅವರ ಕಾಲದಲ್ಲಿ, ಅವರ ಜೀವನದಲ್ಲಿ ಯಾವ ಕಳಂಕವೂ ನಡೆಯಲಿಲ್ಲವೆ? ತೀರಿದವರ ಬಗ್ಗೆ ಕೆಟ್ಟದ್ದನ್ನಾಡಬಾರದೆಂಬ ನಮ್ಮ ದೇಶದ ಧಾರ್ಮಿಕ ನಂಬಿಕೆಯಂತೆ ಸತ್ತವರೆಲ್ಲರೂ ಸಚ್ಚಾರಿತ್ರ್ಯದವರೇ? ಏಡ್ಸ್ ರೋಗದಿಂದ ಸತ್ತ ರಾಜಕೀಯ ಮುಖಂಡನೂ ಸತ್ಯಸಂಧನೇ ನಮ್ಮ ದೇಶದಲ್ಲಿ! ಆದ್ದರಿಂದ ಅಂಥ ಸತ್ತ ರಾಜಕಾರಣಿಯ ಸಾವು ತುಂಬಲಾರದ ನಷ್ಟ! ಈ ಹಿನ್ನೆಲೆಯಲ್ಲಿ ಶ್ರೀ ನಿಜಲಿಂಗಪ್ಪನವರ ಆಡಳಿತೆಯ ಕಾಲದಲ್ಲಿ ಎದ್ದಿದ್ದ 'ಶರಾವತಿ ಹಗರಣ'ವನ್ನು ಪ್ರಸ್ತಾಪಿಸಲೇಬೇಕು. ಇದರಿಂದ ಅವರಿಗೆ ಯಾವ ಅಪಚಾರವೂ ಆಗುವುದಿಲ್ಲವೆಂದೂ, ನನಗೆ ಮತ್ತು ನಮ್ಮ ಜನರಿಗೆ ಅವರ ಬಗ್ಗೆ ಇರುವ ಗೌರವ ಕಿಂಚಿತ್ತೂ ಕಡಿಮೆ ಆಗಲಾರದೆಂದೂ ಬಗೆಯುತ್ತೇನೆ. ಶರಾವತಿ ಯೋಜನೆ ಕಾರ್ಯಗತವಾಗುತ್ತಿದ್ದಾಗ ಕಾಮಗಾರಿಯ ಸಾಮಗ್ರಿಯಲ್ಲಿ ದುರುಪಯೋಗವಾಯಿತೆಂಬ ಹುಯಿಲೆದ್ದಿತು. ದುರುಪಯೋಗವಾಗಿರಲೂಬಹುದು! ಆ ಆರೋಪ ಮಾಡಿದಾಗ ಶ್ರೀ ನಿಜಲಿಂಗಪ್ಪನವರು ಕಾಂಟ್ರಾಕ್ಟರ್ ಕಡೆಯಿಂದ ಪ್ರತಿಫಲ ಏನನ್ನೋ ಪಡೆದರೆಂದು ಅವರ ಶತ್ರುಗಳೂ ಆಪಾದಿಸಲಿಲ್ಲ. ದುರುಪಯೋಗದ ಆಪಾದನೆಯನ್ನು ಅವರು ಹೇಗೆ ಎದುರಿಸಿದರು ? ಇದು ಮುಖ್ಯ. ಈ ಪ್ರಸಂಗದಲ್ಲಿ, ಆಗ ವಿಧಾನಪರಿಷತ್ತಿನ ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ಎಂ. ಪಿ. ಈಶ್ವರಪ್ಪನವರು ಹೇಳಿದ ಮಾತನ್ನು ಕೇಳಿದ್ದೇನೆ. ಈಶ್ವರಪ್ಪನವರು ಆಪಾದನೆ ಮಾಡಿ ಭಾಷಣ ಮುಗಿಸಿ ಕುಳಿತಾಗ ಮುಖ್ಯಮಂತ್ರಿ ನಿಜಲಿಂಗಪ್ಪನವರು ಎದ್ದು ಬಂದು, ಕಣ್ಣೀರು ತಂದು : ''ಕೂಲಂಕಷ ವಿಚಾರಣೆ ಮಾಡೋಣ. ಆಯೋಗ ನೇಮಿಸೋಣ. ನಾನು ತಪ್ಪಿತಸ್ಥನೆಂದು ಕಂಡುಬಂದರೆ ಶಿಕ್ಷೆ ಅನುಭವಿಸುತ್ತೇನೆ'' ಎಂದು ಖಿನ್ನರಾದರಂತೆ. ಆಡಳಿತೆ ನಡೆಸುವಾಗ ಭ್ರಷ್ಟಾಚಾರಗಳು ಆಗುವುದು ಅಸಂಭವವಲ್ಲ. ಆದರೆ ಆಳುವವರು ಅದರಿಂದ ಲಾಭ ಮಾಡಿಕೊಂಡರೆ? ಅದಕ್ಕೆ ಅವರು ಬೆಂಬಲ ಕೊಟ್ಟರೆ? ಈ ಮಾಪಕದಿಂದ ನಿಜಲಿಂಗಪ್ಪನವರ ಆಡಳಿತ ವೈಖರಿಯನ್ನು ನೋಡಬೇಕು.

ಇನ್ನು ಅವರ ಸಜ್ಜನಿಕೆ ಉನ್ನತ ಸಂಸ್ಕೃತಿಯನ್ನು ಕುರಿತು ಒಂದು ಮಾತು ಹೇಳಬೇಕು. ಅವರಿಗೆ ಸಾಹಿತ್ಯ, ಸಾಹಿತಿ, ಸಂಸ್ಕೃತಿಯ ಬಗ್ಗೆ ಅಪಾರ ಗೌರವ. ಕುವೆಂಪು ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಾಗ ಭದ್ರಾವತಿಯಲ್ಲಿ ಅವರಿಗೆ ಒಂದು ಸತ್ಕಾರ ಸಮಾರಂಭ ಏರ್ಪಟ್ಟಿತ್ತು. ಅದಕ್ಕೆ ನಾನು ಬಳ್ಳಾರಿಯಿಂದ ಹೋಗಿದ್ದೆ. ಸಭೆ ಮುಗಿದ ಮೇಲೆ ಶಿವಮೊಗ್ಗೆಯಲ್ಲಿ ಅವರೊಡನೆ ಮಾತನಾಡುತ್ತಿದ್ದಾಗ ಮಾತಿಗೆ ಮಾತು ಬಂದು : ''ಈ ರಾಜ್ಯದ ಹೆಸರು ಇನ್ನೂ ಮೈಸೂರು ಆಗಿಯೇ ಉಳಿದಿದೆ... ಎಲ್ಲಿಯವರೆಗೆ ಮಹಾರಾಜರು ಈ ರಾಜ್ಯದಲ್ಲಿ ಅರಸೊತ್ತಿಗೆಯ ಲಾಂಛನವಾಗಿ ಮುಂದುವರಿಯುವರೋ ಅಲ್ಲಿಯವರೆಗೆ ನಮ್ಮಲ್ಲಿ ಪ್ರಜಾಸತ್ತೆ ಬೇರೂರುವುದೇ ಇಲ್ಲ'' ಎಂದು ಕುವೆಂಪು ಹೇಳಿದರು. ಅದಕ್ಕೆ ನಾನು, ''ಇದನ್ನು ನಿಜಲಿಂಗಪ್ಪನವರ ಕಿವಿಯ ಮೇಲೆ ಹಾಕಿದರೆ ಪ್ರಯೋಜನ ಆಗಬಹುದು. ಅವರು ಇವೊತ್ತು ಇಲ್ಲೇ ಇದ್ದಾರೆ. ನೀವು ಮಾತನಾಡಲು ಇಚ್ಛಿಸಿದರೆ ತಿಳಿಸುತ್ತೇನೆ ಎಂದೆ. 'ತಿಳಿಸಿ, ಮಾತನಾಡುತ್ತೇನೆ' ಎಂದರು. ನಾನು ನಿಜಲಿಂಗಪ್ಪನವರೊಡನೆ ಮಾತನಾಡಿದೆ. ಅವರು, 'ಪುಟ್ಟಪ್ಪನವರು ಎಲ್ಲಿ ಉಳಿದುಕೊಂಡಿದ್ದಾರೆ ? ನಾನೇ ಹೋಗಿ ಮಾತನಾಡುತ್ತೇನೆ. ಮಹಾಕವಿ ರಾಜಕಾರಣಿಗಳ ಮನೆ ಬಾಗಿಲಿಗೆ ಬರಬಾರದು. ರಾಜಕಾರಣಿ ಅವರಲ್ಲಿಗೆ ಹೋಗಬೇಕು' ಎಂದು, ದೇವಂಗಿ ಅವರ ಮನೆಗೆ ಮುಖ್ಯಮಂತ್ರಿಗಳು ಹೋಗಿ ಒಂದು ಘಂಟೆ ಮಾತನಾಡಿದರು. ಈ ಸಂದರ್ಶನವಾದ ಒಂದೆರಡು ಮೂರು ತಿಂಗಳಲ್ಲಿ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಮದ್ರಾಸಿನ ರಾಜ್ಯಪಾಲರಾಗಿ ಹೋದರು !

ಶ್ರೀ ನಿಜಲಿಂಗಪ್ಪನವರಿಗೆ ಸಾಹಿತ್ಯದಲ್ಲಿ ಅಪಾರ ಆಸಕ್ತಿ. ಆಗಿನ ಕಾಲದಲ್ಲಿ ಕಾಲೇಜಿನಲ್ಲಿ ಓದಿದವರಿಗೆ ನಮ್ಮ ಸಾಹಿತ್ಯದ ಸ್ಥೂಲ ಪರಿಚಯವಾದರೂ ಇರುತ್ತಿತ್ತು. ಅವರಿಗೆ ಪಂಪನಿಂದ ಹಿಡಿದು ಬಸವಪ್ಪ ಶಾಸ್ತ್ರಿಗಳವರೆಗೆ ಸ್ವಲ್ಪ ಸ್ವಲ್ಪ ತಕ್ಕಮಟ್ಟಿಗೆ ಪರಿಚಯವಿತ್ತು. ಸಮಕಾಲೀನ ಸಾಹಿತಿಗಳ ಪರಿಚಯವೂ ಇತ್ತು. ಅವರ ಬಗ್ಗೆ ಅಪಾರ ಆದರ, ಗೌರವ. ಶ್ರೀ ಹನುಮಂತಯ್ಯನವರು ಜಾರಿಗೆ ತಂದಿದ್ದ ಸಾಹಿತ್ಯ ಸಂಸ್ಕೃತಿ ಪ್ರಚಾರ ಇಲಾಖೆಯನ್ನು ಶ್ರೀ ನಿಜಲಿಂಗಪ್ಪನವರ ಸರ್ಕಾರ ಮುಚ್ಚಿದಾಗ ನಾನು ಅವರ ಸರ್ಕಾರದ ಅಕ್ರಮವನ್ನು ಖಂಡಿಸಿ ಅವರಿಗೆ ಸ್ಪಷ್ಟವಾಗಿ ಹೇಳಿದೆ. ''ಹಾಗಾದರೆ ಪ್ರಚಾರ ಮಾಡುವುದು ಅಗತ್ಯವೆನ್ನುತ್ತೀರಾ?'' ಎಂದು ನಸು ನಕ್ಕರು. ''ಶರಾವತಿ ವಿದ್ಯುದಾಗರ ಕಟ್ಟಿಸಿ ಮನೆಮನೆಗೂ ಬೆಳಕು ಕೊಟ್ಟರೆ ಸಾಲದು, ಸಾಹಿತ್ಯ ಸಂಸ್ಕೃತಿ ಇಲಾಖೆ ಮನಮನಕ್ಕೂ ಬೆಳಕು ಕೊಡುವ ಯೋಜನೆ'' ಎಂದೆ. ಈ ಮಾತನ್ನು ಅವರು ಒಪ್ಪಿದರು. ಆದರೆ ಪ್ರಚಾರ ಕಾರ್ಯ ಮತ್ತೆ ಜಾರಿಯಲ್ಲಿ ಬರಲಿಲ್ಲ. ಬೇರೆ ರೀತಿಯಲ್ಲಿ ಆ ಕಾರ್ಯ ತಿರುವು ಪಡೆಯಿತು. ಹನುಮಂತಯ್ಯನವರ ವಿರೋಧಿಗಳನ್ನು ಎದುರುಹಾಕಿಕೊಳ್ಳಲು ಹಿಂಜರಿದರು.




ಅಂದು ಅಂತ್ಯ ಸಂಸ್ಕಾರ ನಡೆಯುತ್ತಿತ್ತು. ''ಶಿವನ ಆಜ್ಞೆಯಿಂದ ಮರ್ತ್ಯಕ್ಕೆ ಬಂದು...... ಮರ್ತ್ಯದೊಳು ಕರ್ತವ್ಯ ಮುಗಿಸಿ, ಮತ್ತೆ ಶಿವನ ಪಾದದಲ್ಲಿ.....'' ಈ ವಿಧಿ ನಡೆಯುತ್ತಿದ್ದಾಗ ಜನ ಅಲ್ಲಿಂದ ಮೆಲ್ಲನೆ ಹಿಂದಿರುಗುತ್ತಿದ್ದರು; ಅವರವರೇ ಮಾತನಾಡಿಕೊಳ್ಳುತ್ತಿದ್ದರು:

'ಇನ್ನು ಅವರ ಕಾಲ ಮುಗಿಯಿತು.' ಸಾಧಾರಣ ಜನರಾಡಿಕೊಳ್ಳುತ್ತಿದ್ದ ಕಿವಿಗೆ ಬಿದ್ದ ಮಾತು.

'ಅವರಂಥವರು ಇನ್ನು ಬರಲಾರರು.... ಯುಗಕ್ಕೊಮ್ಮೆ ಯಾವಾಗಲೋ ಹುಟ್ಟಿ ಬರುತ್ತಾರೆ.'

'ಒಂದು ಯುಗ ಮುಗಿಯಿತು. ಆ ಹಳೆಯ ಮೌಲ್ಯಗಳು ಇವರೊಡನೆಯೆ ಹೋದವು....'

'ಗಾಂಧಿಯನ್ನೇ ಮರೆತವರು ಇವರನ್ನು ನೆನಪಿಟ್ಟುಕೊಳ್ಳುತ್ತಾರೆಯೆ?'

**ಕೋ. ಚೆನ್ನಬಸಪ್ಪ**
ನಂ. ೧೨೭, ರಾಜಾಜಿನಗರ, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು- ೮೬

# ಕೆಲವು ಇಂಗ್ಲಿಷ್ ಪತ್ರಿಕೆಗಳ ಸ್ನ್ಯಾಕ್‌ಮಾರ್ಕೆಟ್ ಪ್ರಜಾಪ್ರಭುತ್ವ

**ಈ** ವರ್ಷದ ಜೂನ್ 25ರ ಆಜು ಬಾಜಿನ ಒಂದು ವಾರ ನಮ್ಮ ದೇಶದ ಇಂಗ್ಲಿಷ್ ಪತ್ರಿಕೆಗಳಲ್ಲಿ, ''ತುರ್ತು ಪರಿಸ್ಥಿತಿ'' ಘೋಷಣೆಯ ೨೫ ನೇ ವರ್ಷವನ್ನು ನೆನಪಿಸುವ ಸಲುವಾಗಿ ಲೇಖನ, ಸಂಪಾದಕೀಯಗಳು ಪ್ರಕಟವಾದವು. ಈ ಬರಹಗಳು ಎರಡು ವರ್ಷಗಳ ಕಾಲ 'ಪ್ರಜಾಪ್ರಭುತ್ವವನ್ನು ಖೈದು' ಮಾಡಿದ ಶ್ರೀಮತಿ ಇಂದಿರಾ ಗಾಂಧಿಯವರ ಆಡಳಿತ ಹಾಗೂ ವ್ಯಕ್ತಿತ್ವಗಳ ಬಗ್ಗೆ ಅಪಾರ ನೈತಿಕ ಸಿಟ್ಟು, 'ಪ್ರಜಾಪ್ರಭುತ್ವದ ಮೌಲ್ಯಗಳ' ಬಗ್ಗೆ ಆಣೆ, ಪ್ರಮಾಣಗಳಿಂದ ತುಂಬಿದ ಪ್ರೀತಿಯನ್ನು ಧಾರಾಳವಾಗಿ ಪ್ರದರ್ಶಿಸಿದವು. ತುರ್ತುಪರಿಸ್ಥಿತಿಯನ್ನು ವಿರೋಧಿಸಿದ 'ವೀರರ' ಬಗ್ಗೆ ಮೆಚ್ಚುಗೆ, ಬೆಂಬಲಿಸದ ಜನರ ಕುರಿತು ಟೀಕೆಗಳು ಜೂನ್ ೨೩ರ ಸಾಪ್ತಾಹಿಕ ಪುರವಣಿಗಳಲ್ಲಿ, ರಂಗು ರಂಗಾಗಿ, ವ್ಯಕ್ತವಾದವು. ಈ ಬರಹಗಳನ್ನು ಬರೆದ ಲೇಖಕರು, ಸಂಪಾದಕರು, ಖಂಡಿತ ಒಂದೇ ನಮೂನೆಯ ವಿಚಾರ ಉಳ್ಳವರೇನೂ ಆಗಿರಲಿಲ್ಲ. ಆದರೆ ಮುಕ್ಕಾಲು ವಾಸಿ ಬರಹಗಳಲ್ಲಿ ಎರಡು ಗುಣಗಳು ಸಾಮಾನ್ಯವಾಗಿ ಇದ್ದವು.

ಅ) ದೇಶದಲ್ಲಿ ಪ್ರಜಾಪ್ರಭುತ್ವಕ್ಕೆ ಗಂಡಾಂತರ ಬಂದದ್ದು ತುರ್ತುಪರಿಸ್ಥಿತಿಯ ಎರಡು ವರ್ಷಗಳಲ್ಲಿ ಮಾತ್ರ. ೧೯೭೭ರ ಚುನಾವಣೆಗಳಲ್ಲಿ ಕಾಂಗ್ರೆಸ್‌ನ ಭಾರಿ ಸೋಲು ಹಾಗೂ ಸಂಜಯ್ ಗಾಂಧಿಯ ಆಕಸ್ಮಿಕ ಮರಣದ ಮೂಲಕ ಪೀಡೆ ತೊಲಗಿತು. ಈ 'ಕರಾಳ ಚರಿತ್ರೆ'ಗೆ ಕಾರಣಗಳನ್ನು ನಾವು ಇಂದಿರಾ ಗಾಂಧಿ-ಸಂಜಯ್ ಗಾಂಧಿಯವರ ಸರ್ವಾಧಿಕಾರಿ ದುಷ್ಟತನ ಮತ್ತು ಕಾಂಗ್ರೆಸ್‌ನ ಉಳಿದ ನಾಯಕರ ಮುಖಹೀನ ಬಾಲಬಡುಕತನದಲ್ಲಿ ಮಾತ್ರ ಹುಡುಕಬೇಕು.

ಆ) ೧೯೭೭ರ ನಂತರದ ಸಂಘಪರಿವಾರದ ರಾಜಕೀಯದ ಪರಿಣಾಮವಾಗಿ ಇವತ್ತು ಪ್ರಜಾಪ್ರಭುತ್ವಕ್ಕೆ ಬಂದಿರುವ ಕುತ್ತು ಯಾವುದು ? ೨೩ ವರ್ಷಗಳಲ್ಲಿ ಆಗಿರುವ ರಾಜಕೀಯ ಬದಲಾವಣೆಗಳನ್ನು ತುರ್ತು ಪರಿಸ್ಥಿತಿಯ ರಾಜಕೀಯದ ಜೊತೆ ಇಟ್ಟು ನೋಡಿದರೆ, ಸದ್ಯದ ರಾಜಕೀಯದ ರೋಗಲಕ್ಷಣಗಳು ಏನಾದರೂ ಕಾಣುತ್ತವೆಯೋ ? ಎನ್ನುವ ಪ್ರಶ್ನೆಗಳನ್ನು, ಕಳಕಳಿಯಿಂದ ಬಿಡಿ, ಕುತೋಹಲಕ್ಕಾದರೂ ಈ ಬರಹಗಳು ಎತ್ತಲಿಲ್ಲ (ಕುತೋಹಲ ಎಂದು ಹೇಳಿದ್ದು ಯಾಕೆಂದರೆ, ಪ್ರಿಯಾಂಕ ಗಾಂಧಿಯ ಸೀರೆ, ಹಣೆಗೆ ಹಚ್ಚಿಕೊಂಡ ತಿಲಕಗಳಿಗೆ ರಾಜಕೀಯ ಅರ್ಥ ಹುಡುಕುವುದರಲ್ಲಿ ಇಂಗ್ಲಿಷ್ ಪತ್ರಿಕೆಗಳ ಕುತೋಹಲ ನಿಸ್ಸೀಮವಾದುದು).

ತುರ್ತು ಪರಿಸ್ಥಿತಿಯ ಕಾಲದಲ್ಲಿ ಇಂದಿರಾ ಗಾಂಧಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ರದ್ದು ಮಾಡಿದರು; ದಮನಕಾರಿ ಕಾಯ್ದೆಗಳನ್ನು ಜಾರಿ ಮಾಡಿ ವಿರೋಧಿಗಳನ್ನು ಜೈಲಿಗೆ ಹಾಕಿದರು; ಸರ್ಕಾರದ ಕಾರ್ಯಕ್ರಮಗಳನ್ನು ಸಂವಿಧಾನ ಬಾಹಿರ ಸಂಸ್ಥೆಗಳ ಮೂಲಕ ನಾಗರಿಕರ ಮೇಲೆ ಬಲವಂತವಾಗಿ ಹೇರಿದರು. ಇವೆಲ್ಲವೂ ಪ್ರಜಾಪ್ರಭುತ್ವ ವಿರೋಧಿಯಾದ ಸರ್ವಾಧಿಕಾರಿ ಕೃತ್ಯಗಳು; ಇವುಗಳನ್ನು ಸಕಾರಣವಾಗಿಯೇ ವಿರೋಧಿಸಬೇಕು. ಆದರೆ ಈ ರಾಜಕೀಯ ಪ್ರಾರಂಭವಾದದ್ದು ೧೯೭೫ರಲ್ಲಿ ಅಲ್ಲ. ಭಾರತ ಸ್ವತಂತ್ರ ರಾಷ್ಟ್ರವಾಗುತ್ತಿದ್ದ ಹಾಗೆಯೇ ನ್ಯಾಯಯುತ ಬೇಡಿಕೆಗಳನ್ನು ಇಟ್ಟುಕೊಂಡು ಹೋರಾಟ ಮಾಡುತ್ತಿದ್ದ ತೆಲಂಗಾಣ ಭೂಹೀನ ರೈತರನ್ನು ಸೈನ್ಯ ಕಳಿಸಿ ಹೊಡೆದುಹಾಕಲಾಯಿತು. ಕಾನೂನು ಬದ್ಧ ಚುನಾವಣೆಗಳ ಮೂಲಕ ಆಡಳಿತಕ್ಕೆ ಬಂದಿದ್ದ ಇ. ಎಂ. ಎಸ್. ನಂಬೂದಿರಿಪಾದ್‌ರ ಸರ್ಕಾರವನ್ನು ಬರಖಾಸ್ತು ಗೊಳಿಸಲಾಯಿತು. ಬಾಂಬೆಯ ಕಾರ್ಖಾನೆ ಕಾರ್ಮಿಕರ ಮಧ್ಯೆ ಪ್ರಭಾವಶಾಲಿಯಾಗಿದ್ದು ಕಾಂಗ್ರೆಸ್ ಸರ್ಕಾರಕ್ಕೆ ಸವಾಲಾಗಿದ್ದ ಕಮ್ಯುನಿಸ್ಟರನ್ನು ದಮನ ಮಾಡಲು ಶಿವಸೇನೆಯ ಗೂಂಡಾ ರಾಜಕೀಯವನ್ನು ಹುಟ್ಟು ಹಾಕಲಾಯಿತು. ಪಶ್ಚಿಮ ಬಂಗಾಳದಲ್ಲಿ ಕಾಂಗ್ರೆಸ್‌ನವರು ಮನೆಮನೆಗೆ ನುಗ್ಗಿ ಕಮ್ಯುನಿಸ್ಟ್ ಪಕ್ಷದವರನ್ನು ಹೊಡೆದು ಕೊಂದರು; ಬಲಾತ್ಕಾರದಿಂದ ಮತಗಟ್ಟೆಗಳನ್ನು

> ***ತುರ್ತುಪರಿಸ್ಥಿತಿಯ ಹೇರಿಕೆ ೨೫ ವರ್ಷಗಳ ಹಿಂದಿನ ಘಟನೆ. ಅಂದಿನ ಸನ್ನಿವೇಶವನ್ನು ಮೆಲುಕು ಹಾಕಿ ವಿಶ್ಲೇಷಿಸುವಾಗ ಇಂದಿನ ಬೆಳವಣಿಗೆಗಳನ್ನು ಉಪೇಕ್ಷೆ ಮಾಡುವಂತಿಲ್ಲ. ''ಅಂದು ಸಂಪೂರ್ಣ ಕ್ರಾಂತಿ, ಇಂದು ಸ್ಯಾಫ್ರನ್ ಅಥವಾ ಕೇಸರಿ ಕ್ರಾಂತಿ'' ಎಂದು ಆಗುತ್ತಿರುವುದನ್ನೆಲ್ಲಾ ಸಮರ್ಥಿಸಬಹುದೆ?***

ವಶಪಡಿಸಿಕೊಂಡು ಕಮ್ಯುನಿಸ್ಟರು ಆಡಳಿತಕ್ಕೆ ಬರದಂತೆ ವ್ಯವಸ್ಥೆ ಮಾಡಲಾಯಿತು. ಅತಿದೊಡ್ಡ ರಾಜ್ಯಗಳಾದ ಬಿಹಾರ್, ಉತ್ತರ ಪ್ರದೇಶ ಮತ್ತು ಮಧ್ಯಪ್ರದೇಶಗಳಲ್ಲಿ ಬಂದೂಕು ಹಿಡಿದುಕೊಂಡು ಗೂಂಡಾಗಳು ದಲಿತರು ಮತದಾನ ಮಾಡದಂತೆ ಬಲಾತ್ಕಾರದಿಂದ ಕೇರಿಗಳಲ್ಲಿ ಬಂಧಿಸುತ್ತಿದ್ದರು. ೧೯೭೫ಕ್ಕೂ ಮೊದಲೇ ಕೋಮು ಗಲಭೆಗಳು ನಿತ್ಯದ ವ್ಯಾಪಾರ ಎನ್ನುವಷ್ಟು ಸಹಜವಾಗಿ ಬಿಟ್ಟಿದ್ದವು. ಸಂಘಪರಿವಾರದವರು ಸಂಘಟಿಸುತ್ತಿದ್ದ ಕೋಮುವಾದಿ ವೇದಿಕೆಗಳಲ್ಲಿ ಕಾಂಗ್ರೆಸ್ ಮತ್ತು ಬಲಪಂಥೀಯ ಪಕ್ಷಗಳ ಪ್ರಮುಖ ನಾಯಕರು ಸೇರಿಕೊಂಡು ಮುಸ್ಲಿಮರ ವಿರುದ್ಧ ಅಪಪ್ರಚಾರ ಮತ್ತು ಕೋಮುಗಲಭೆಗಳಿಗೆ ನೇರವಾಗಿ ಕಾರಣರಾಗುತ್ತಿದ್ದರು. ತಮ್ಮ ಕಣ್ಣ ಎದುರೇ ನಡೆಯುವ ಹಲ್ಲೆಗಳನ್ನು ಕೈಕಟ್ಟಿಕೊಂಡು ನೋಡುವುದು ಅಥವಾ ಸಕ್ರಿಯವಾಗಿ ಗಲಭೆಗಳಲ್ಲಿ ಪಾಲುಗೊಳ್ಳುವುದನ್ನು ಪೊಲೀಸರು ೧೯೭೫ಕ್ಕೆ ಮೊದಲೇ ರೂಢಿಸಿಕೊಂಡುಬಿಟ್ಟಿದ್ದರು. ಭೂಹೀನರು ಮತ್ತು ದಲಿತರು ತಮ್ಮ ಹಕ್ಕುಗಳನ್ನು ಚಲಾಯಿಸಿದರೆ ಭೂಮಾಲಿಕರು ಮತ್ತು ಮೇಲ್ಜಾತಿ ಜನರ ಖಾಸಗಿ ಗೂಂಡಾ ಸೇನೆಗಳು ಅವರನ್ನು ಹುಳುಗಳ ಹಾಗೆ ಹೊಸಕಿ ಹಾಕುವ 'ಕಾಡಿನ ನ್ಯಾಯ' ವ್ಯವಸ್ಥೆ ೧೯೭೫ರ ಮುಂಚೆಯೂ ಇತ್ತು, ೧೯೭೭ರ ನಂತರವೂ ಮುಂದುವರೆದಿದೆ. ಭೂಹೀನರು, ದಲಿತರು, ಹೆಂಗಸರು ಮತ್ತು ಅಸಂಘಟಿತ ಕಾರ್ಮಿಕರನ್ನು ಒಟ್ಟು ಸೇರಿಸಿದರೆ ಅದು ದೇಶದ ಜನಸಂಖ್ಯೆಯ ಮುಕ್ಕಾಲು ಪಾಲು ಆಗುತ್ತದೆ; ಇಷ್ಟು ದೊಡ್ಡ ಸಂಖ್ಯೆಯ ಜನ ಪ್ರಜಾಪ್ರಭುತ್ವ ಹಕ್ಕುಗಳು ಮತ್ತು ಕಾನೂನಿನ ಆಳ್ವಿಕೆಯ ಅಂಚಿನಲ್ಲಿ ಬದುಕುತ್ತಿದ್ದಾರೆ; ಇವರ ಮೇಲೆ ನಡೆಯುವ ಹಲ್ಲೆ ಮತ್ತು ಹಿಂಸೆಗಳಿಗೆ, ಎಡಪಕ್ಷಗಳನ್ನು ಹೊರತುಪಡಿಸಿ, ಎಲ್ಲಾ ರಾಜಕೀಯ ಪಕ್ಷಗಳು ಹಾಗೂ ಅಧಿಕಾರಸ್ಥರ ಬೆಂಬಲ ಇದೆ. ಈ ಹಿಂಸೆಗಳು ಮತ್ತು ಇವುಗಳಿಗೆ ಕಾರಣವಾದವರ ವಿವರಗಳು ನ್ಯೂಕ್ಲಿಯರ್ ಬಾಂಬ್‌ನ ಹಾಗೆ 'ಗುಪ್ತ ಮಾಹಿತಿ' ಏನೂ ಅಲ್ಲ, ಇವು ಹಾಡ ಹಗಲೇ ನಡೆಯುತ್ತವೆ; ಎಷ್ಟೇ ತಿರುಚಿದರೂ ಮುಚ್ಚಿಡ ಲಾಗದಷ್ಟು ವ್ಯಾಪಕವಾಗಿರುವುದರಿಂದ ಪತ್ರಿಕೆಗಳು ಈ ಘಟನೆಗಳನ್ನು ವರದಿ ಮಾಡಿವೆ; ಕೇಂದ್ರ ಮತ್ತು ರಾಜ್ಯಗಳ ಗೃಹಖಾತೆಯ ಅಧಿಕೃತ ದಾಖಲೆಗಳಲ್ಲಿ ಇಂತಹ ಘಟನೆಗಳು ನಮೂದಾಗಿವೆ. ಒಂದೇ ಒಂದು ಸಮಸ್ಯೆ ಎಂದರೆ, ಇವುಗಳನ್ನೆಲ್ಲಾ ಭೂಮಾಲಿಕರು, ಬಂಡವಾಳಶಾಹಿಗಳು ಮತ್ತು ಮೇಲ್ಜಾತಿ ಜನರ ಫಾಯ್ದೆಗಾಗಿ ನಡೆಸಿರುವುದರಿಂದ, ಪ್ರಜಾಪ್ರಭುತ್ವ ಹಾಗೂ ಕಾನೂನಿನ ಆಳ್ವಿಕೆಯ ಉಲ್ಲಂಘನೆ ಎಂದು ಒಪ್ಪಿಕೊಳ್ಳಲಾಗುವುದಿಲ್ಲ! ತುರ್ತು ಪರಿಸ್ಥಿತಿಯ ಎರಡು ವರ್ಷಗಳಲ್ಲಿ, ಅಧಿಕಾರಸ್ಥರ ಬುಡಕ್ಕೆ ನೀರು ಬಂದಾಗ ಮಾತ್ರ, ''ಪ್ರಜಾಪ್ರಭುತ್ವದ ಕಗ್ಗೊಲೆ'' ಯಾಗುತ್ತದೆ.

೧೯೫೪-೯೩ರವರೆಗೆ ದೇಶದಲ್ಲಿ ಸರಾಸರಿ ೩೮೮ರ ಹಾಗೆ ೧೫,೫೨೪ ಕೋಮುಗಲಭೆಗಳು ನಡೆದಿರುವುದೇ 'ಹಿಂದು ಕೋಮುವಾದ'ದ ಕ್ರಿಮಿನಲ್ ರಾಜಕೀಯವು ಪ್ರಜಾಪ್ರಭುತ್ವ ಮತ್ತು ಕಾನೂನಿನ ಆಳ್ವಿಕೆಗಳನ್ನು ಚಿಂದಿ ಉಡಾಯಿಸಿರುವುದಕ್ಕೆ ಸಾಕ್ಷಿಯಾಗಿದೆ. ಇದರ ಜೊತೆಗೆ ತುರ್ತುಪರಿಸ್ಥಿತಿಯ ನಂತರದ ಎರಡು ದಶಕಗಳ ವಿದ್ಯಮಾನಗಳನ್ನು ಗಮನಿಸಿದರೆ ೧೯೮೩ರಲ್ಲಿ ನಡೆದ ಮೀಸಲಾತಿ ವಿರೋಧಿ ಹಿಂಸೆ, ೧೯೮೪ರಲ್ಲಿ ಸಿಖ್ಖರ ಮೇಲೆ ದೆಹಲಿಯಲ್ಲಿ ನಡೆದ ಹಿಂಸೆ, ೧೯೮೯ರಲ್ಲಿ ಮಂಡಲ ವರದಿಯ ಅನುಷ್ಠಾನವನ್ನು ವಿರೋಧಿಸುವ ನೆಪದಲ್ಲಿ ನಡೆದ ಹಿಂಸೆ, 'ಈ ದೇಶದಲ್ಲಿ ಹಿಂದುಗಳ ನಂಬಿಕೆಗೆ ಮಿಗಿಲಾದ ಯಾವ ಕಾನೂನು ಮತ್ತು ಸಂವಿಧಾನವನ್ನೂ ನಾವು ಗೌರವಿಸುವುದಿಲ್ಲ' ಎಂದು ಸಾರ್ವಜನಿಕವಾಗಿಯೇ ಘೋಷಿಸಿಕೊಂಡ, ರಾಮಜನ್ಮಭೂಮಿ ಚಳುವಳಿ ಅಂಗವಾಗಿ ನಡೆದ ಎಲ್. ಕೆ. ಅದ್ವಾನಿಯ ರಥ ಯಾತ್ರೆಯ ದಾರಿಯ ಉದ್ದಕ್ಕೂ ಯೋಜನಾ ಬದ್ಧವಾಗಿ ಜಾರಿಗೊಳಿಸಿದ ಕೋಮು ಹಿಂಸೆ, ಬಾಬ್ರಿ ಮಸೀದಿ ನಾಶ ಮತ್ತು ಅದರ

**ಕೆ. ಫಣಿರಾಜ್**

ಪರಿಣಾಮವಾಗಿ ನಡೆದ ಕೋಮು ಗಲಭೆಗಳು, ಕ್ರಿಶ್ಚಿಯನ್ನರ ಮತಾಚರಣೆಯ ಹಕ್ಕನ್ನೇ ಪ್ರಶ್ನಿಸಿ ೧೯೯೮ರಿಂದ ಈ ಸಮುದಾಯದ ಮೇಲೆ ಸಂಘ ಪರಿವಾರದ ಕುಮ್ಮಕ್ಕಿನಿಂದ ನಡೆಯುತ್ತಿರುವ ಹಲ್ಲೆಗಳು ಅನಾಯಾಸವಾಗಿ ಕಣ್ಣೆದುರು ಬರುತ್ತವೆ. ಈ ಹಿಂಸೆಯನ್ನು ಬಹಿರಂಗವಾಗಿ ಬೆಂಬಲಿಸಿ, ಈ ಕೃತ್ಯಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ ರಾಜಕೀಯ ಪಕ್ಷಗಳೇ ಕೇಂದ್ರ ಮತ್ತು ರಾಜ್ಯಗಳಲ್ಲಿ ಆಡಳಿತ/ವಿರೋಧ ಪಕ್ಷಗಳಾಗಿವೆ. ಈ ಎರಡು ದಶಕಗಳಲ್ಲಿಯೇ ಭಾರತದ ಪ್ರಜಾಪ್ರಭುತ್ವ ರಾಜಕೀಯದಲ್ಲಿ 'ಸೆಕ್ಯುಲರದ್ದೇ ಬಲ' (ಮೆಜಾರಿಟೇರಿಯನಿಸಂ) ಎಂಬ ವಾದಕ್ಕೆ ಮಣೆಹಾಕಲಾಯಿತು. ಬಂಡವಾಳಶಾಹಿಗಳು, ಭೂಮಾಲಿಕರು ಮತ್ತು ಬಿಳಿ ಕಾಲರಿನ ಸುಶಿಕ್ಷಿತರಿಗೆ ಲಾಭದಾಯಕವಾಗುವಂತಹ ಉತ್ಪಾದನೆ ಮತ್ತು ವಿತರಣ ವ್ಯವಸ್ಥೆಯನ್ನು ಬೆಂಬಲಿಸುವ, ಸರ್ಕಾರದ ಬೊಕ್ಕಸದಲ್ಲಿರುವ ಬಹುಪಾಲು ಹಣವನ್ನು ಶ್ರೀಮಂತರಿಗೆ ಅನುಕೂಲವಾಗುವ ಸೌಕರ್ಯಗಳಿಗೆ ವಿನಿಯೋಗಿಸುವ, ಬಡವರು ಮತ್ತು ಕೆಳವರ್ಗಗಳ ಏಳ್ಗೆಗೆ ಸಹಾಯ ಮಾಡುವುದು ಸರ್ಕಾರದ ಜವಾಬ್ದಾರಿ ಎಂದು ತಾತ್ವಿಕವಾಗಿ ಒಪ್ಪಿಕೊಂಡು ಬೊಕ್ಕಸದ ಸಣ್ಣ ಪಾಲನ್ನು ಕಲ್ಯಾಣ ಕ್ರಮದಲ್ಲಿ ತೊಡಗಿಸುವ ರಾಜಕೀಯ ತತ್ವವನ್ನು 'ಮಧ್ಯಮ ಮಾರ್ಗದ ರಾಜಕೀಯ' ಎನ್ನುತ್ತಾರೆ. ೮೦ರ ದಶಕದವರೆಗೆ ಭಾರತದ ಎಲ್ಲಾ ರಾಜಕೀಯ ಪಕ್ಷಗಳು (ಎಡಪಂಥವನ್ನು ಬಿಟ್ಟು ಎಂದು ಬೇರೆ ಹೇಳಬೇಕಿಲ್ಲ) ಈ ಮಧ್ಯಮ ಮಾರ್ಗದ ರಾಜಕೀಯವನ್ನು ನಂಬಿಕೊಂಡಿದ್ದವು. ಆದರೆ ೮೦ರ ನಂತರದ ಎರಡು ದಶಕಗಳಲ್ಲಿ ತ್ವರಿತಗತಿಯಲ್ಲಿ ಮಧ್ಯಮ ಮಾರ್ಗದ ರಾಜಕೀಯ ನಾಶವಾಗಿ ಸಂಪೂರ್ಣ ಬಲಪಂಥದ ರಾಜಕಾರಣದ ಪಾರುಪತ್ಯ ಸ್ಥಾಪನೆಯಾಗಿಬಿಟ್ಟಿದೆ. ಬಲಪಂಥದ ಎಲ್ಲಾ ಪ್ರಜಾಪ್ರಭುತ್ವಗಳು ಮಿಲಿಟರಿ ಶಕ್ತಿಯಲ್ಲಿ ಅಪಾರ ನಂಬಿಕೆ ಇಟ್ಟುಕೊಂಡಿರುವ, ಸೆಕ್ಯುಲರ್‌ವಾದ ಮತ್ತು ಭಿನ್ನ ಮತೀಯ ವಾದಿಗಳನ್ನು 'ದೇಶದ್ರೋಹಿ'ಗಳು ಎಂದು ಪರಿಗಣಿಸುವ, ಶ್ರೀಮಂತರ ಸಂಪತ್ತಿನ ರಕ್ಷಣೆಗಾಗಿ ಬಡವರನ್ನು ನಿರ್ದಾಕ್ಷಿಣ್ಯವಾಗಿ ತುಳಿಯುವ ಕಾರ್ಯಕ್ರಮಗಳನ್ನು ಉಳ್ಳ ಪ್ರಭುತ್ವಗಳು. ಭಾರತ ಇವತ್ತು ಎರಡನೆ ದರ್ಜೆಯ ಇಸ್ರೇಲ್ ಅಥವಾ ಮೊದಲನೆ ದರ್ಜೆಯ ಕೊಲಂಬಿಯ ಆಗುವ ಎಲ್ಲಾ ತಯಾರಿಯನ್ನು ನಡೆಸಿದೆ. ವಸಾಹತುಶಾಹಿಯಿಂದ ವಿಮುಕ್ತಿ ಪಡೆದ ರಾಷ್ಟ್ರಗಳಿಗೆಲ್ಲಾ ಮಾದರಿಯಾಗಬಲ್ಲ ಪ್ರಜಾಪ್ರಭುತ್ವದಿಂದ, ಇಸ್ರೇಲ್ ಅಥವಾ ಕೊಲಂಬಿಯ ಮಾದರಿ ಪ್ರತಿಗಾಮಿ ಪ್ರಜಾಪ್ರಭುತ್ವದ ಕಡೆ ಸಂಪೂರ್ಣವಾಗಿ ತಿರುಗಿಕೊಳ್ಳುವುದು ಬಡವರು ನಂಬಿಕೊಂಡ 'ಪ್ರಜಾಪ್ರಭುತ್ವದ ಕಗ್ಗೊಲೆ'ಯೇ ಆಗಿದೆ.

ಭಾರತದ ಇಂಗ್ಲಿಷ್ ಪತ್ರಿಕೆಗಳು (ಮತ್ತು ಇಂತಹ ಪತ್ರಿಕೆಗಳ 'ಸೃಷ್ಟಿ'ಗಳಾಗಿರುವ ಕನ್ನಡದ 'ಗೌರವಾನ್ವಿತ' ಪತ್ರಿಕೆಗಳು) ತಮ್ಮ ಶ್ರೀಮಂತ ಧಣಿಗಳ ಹಿತಾಸಕ್ತಿಯನ್ನು ಕಾಪಾಡಬೇಕಾದದ್ದು ಸಹಜ. ಧಣಿಗಳ ವ್ಯಾಪಾರ ಮತ್ತು ಲಾಭಗಳು ಸುಗಮವಾಗಿ ನಡೆದುಕೊಂಡು ಹೋಗುವಷ್ಟು ಮಟ್ಟಿಗಿನ ಪ್ರಜಾಪ್ರಭುತ್ವವನ್ನು ಈ ಪತ್ರಿಕೆಗಳು ಎತ್ತಿ ಹಿಡಿಯುತ್ತವೆ; ತುರ್ತುಪರಿಸ್ಥಿತಿಯನ್ನು ಕುರಿತ ಬರಹಗಳು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಎತ್ತಿ ಹಿಡಿದದ್ದು ಇಷ್ಟರಮಟ್ಟಿಗೆ ಮಾತ್ರ.

ಇದು ಹೇಳಿ ಕೇಳಿ ಸಂಘ ಪರಿವಾರದ ಆಟಾಟೋಪ ದಿನೇದಿನೇ ಹೆಚ್ಚಾಗುತ್ತಿರುವ ಕಾಲ. ಈ ಹೊತ್ತಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ, ಕಾನೂನಿನ ಆಳ್ವಿಕೆಗಳನ್ನು ಯಾವುದೇ ಅರ್ಥದಲ್ಲಿ ಯಾರೇ ಎತ್ತಿ ಹಿಡಿದರೂ ಎಲ್ಲಾ ಪ್ರಜೆಗಳಿಗೂ ಉಪಯೋಗವಾಗುತ್ತದೆ ಎನ್ನುವ ಸಣ್ಣ ಆಸೆ ಹುಟ್ಟುವುದು ಸಹಜ. ಆದರೆ ಇಂತಹ ಆಸೆಯ ಗುಳ್ಳೆಗಳನ್ನು ಬಹಳ ಕಾಲ ಇಂಗ್ಲಿಷ್ ಪತ್ರಿಕೆಗಳು ಉಳಿಸಲಿಲ್ಲ. ತುರ್ತು ಪರಿಸ್ಥಿತಿಯ ಬಗ್ಗೆ ಬರಹಗಳು ಪ್ರಕಟವಾದ ಮೂರು ವಾರದ ಒಳಗೇ ಬಾಳ್ ಠಾಕ್ರೆಯನ್ನು ಬಂಧಿಸುವ ಪ್ರಕರಣ ಬಂದಿತು.

ಠಾಕ್ರೆ ಮತ್ತು ಶಿವಸೈನಿಕರು ಮಾಡಿದ ಅಪರಾಧಗಳ ಬಗ್ಗೆ ಸ್ವತಃ ಅವರಿಗೇ ಅನುಮಾನಗಳಿಲ್ಲ. ೧೯೯೨-೯೩ರ ಮುಂಬೈ ಗಲಭೆಗಳಲ್ಲಿ ಶಿವಸೈನಿಕರು ಮಾಡಿದ ಅಪರಾಧಗಳಿಗೆ ಸಾಕ್ಷಿಗಳು ದೊರಕದೇ ಹೋಗಬಹುದು ಎನ್ನುವ ಅನುಮಾನ ತನಿಖೆ ನಡೆಸಿದ ನ್ಯಾಯಮೂರ್ತಿ ಶ್ರೀಕೃಷ್ಣ ಅವರಿಗೂ ಇತ್ತು. ಆದರೆ ಠಾಕ್ರೆಯ ಅಪರಾಧದ ಬಗ್ಗೆ ಸಾಕ್ಷಿಗಳ ಸಮಸ್ಯೆ ಇರಲಿಲ್ಲ; 'ಸಾಮ್ನಾ'ದಲ್ಲಿ ಪ್ರಕಟವಾದ ಬರಹಗಳೇ ಅಪರಾಧವನ್ನು ಸಾಬೀತು ಮಾಡಲಿಕ್ಕೆ ಸಾಕಾಗಿತ್ತು. ಇಷ್ಟೆಲ್ಲಾ ಇದ್ದರೂ, ಠಾಕ್ರೆಯನ್ನು ಬಂಧಿಸುವುದು ಎಂದರೆ ಯಾವುದೇ ಸರ್ಕಾರಕ್ಕೂ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡ ಹಾಗೆಯೇ. ಮುಂಬೈ ಪೊಲೀಸರ ನ್ಯಾಯವಂತಿಕೆ ಎಂತಹುದು ಎನ್ನುವುದು ಮುಂಬೈ ಗಲಭೆಗಳಲ್ಲಿಯೇ ಗೊತ್ತಾಗಿಹೋಗಿತ್ತು. ಇನ್ನೊಂದಿಷ್ಟು ಮುಸ್ಲಿಮರ ಹೆಣ ಬಿದ್ದರೂ ಸರಿ, ಠಾಕ್ರೆಯನ್ನು ಬಂಧಿಸಿಯೇ ತೋರಿಸುತ್ತೇವೆ ಎಂದು ಯಾವ ಸರ್ಕಾರವೂ ಭಂಡಧೈರ್ಯ ಪ್ರದರ್ಶಿಸುವ ಹಾಗಿಲ್ಲ; ಹಾಗೆಂದು ಅಪಾರಾಧಿಯೊಬ್ಬನ ಎದುರು ಕೈಕಟ್ಟಿ ಕೂಡುವ ಹಾಗೂ ಇಲ್ಲ. ಆದರೆ ಈ ಇಕ್ಕಟ್ಟನ್ನು ದೊಡ್ಡದು ಮಾಡುವ ಅವಶ್ಯಕತೆಯಿಲ್ಲ; ಇಂತಹ ಇಕ್ಕಟ್ಟಿನ ಪರಿಸ್ಥಿತಿಯನ್ನು ನಿರ್ಮಿಸಿಕೊಂಡಿದ್ದು ಕೂಡ ಕಾಂಗ್ರೆಸ್ ಪಕ್ಷವೇ. ಅದೇನೇ ಇದ್ದರೂ ಜುಲೈ ೧೫ರಂದು ಮಹಾರಾಷ್ಟ್ರದ ಡೆಮಾಕ್ರಟಿಕ್ ಫ್ರಂಟ್ ಸರ್ಕಾರ ಬಾಳ್ ಠಾಕ್ರೆಯನ್ನು ಬಂಧಿಸಿ ಕಾನೂನು ಕ್ರಮ ಜರುಗಿಸಲು ಅನುಮತಿ ಕೊಡುವುದಕ್ಕೆ ನಿರ್ಧರಿಸಿತು. ಪತ್ರಿಕೆಗಳು, ಮಹಾರಾಷ್ಟ್ರದ ಮಂತ್ರಿ ಚಗನ್ ಭುಜಬಲ ತನ್ನ ಮಾಜಿ ಉಸ್ತಾದನ ಮೇಲೆ ಸೇಡು ತೀರಿಸಿಕೊಳ್ಳಲು ಈ ಕ್ರಮ ಕೈಗೊಂಡಿದ್ದಾರೆ ಎಂದವು. ತನ್ನನ್ನು ಬಂಧಿಸಿದರೆ ದೇಶವೇ ಹತ್ತಿ ಉರಿದೀತು; ಹಾಗೇನಾದರೂ ಆದರೆ ಮಹಾರಾಷ್ಟ್ರದ ಸರ್ಕಾರವೇ ಅದಕ್ಕೆ ಜವಾಬ್ದಾರಿ ಎಂದು ಠಾಕ್ರೆ ಗದರಿದ; ಬಿಜೆಪಿ - ಶಿವಸೇನೆಗಳ ನಾಯಕರು ಸರ್ಕಾರದ ಈ ಕ್ರಮಕ್ಕೆ - ವಿಧಾನಸಭೆ ಅಥವಾ ಕಾನೂನಿನ ಪ್ರಕಾರ ಅಲ್ಲ - ಬೀದಿಯಲ್ಲಿ ಉತ್ತರ ಕೊಡುತ್ತೇವೆ ಎಂದು ಧಮಕಿ ಹಾಕಿದರು. ಠಾಕ್ರೆ ಮಹಾರಾಷ್ಟ್ರ ಸರ್ಕಾರವನ್ನು ೩೫೬ನೇ ವಿಧಿಯ ಪ್ರಕಾರ ಬರಖಾಸ್ತು ಮಾಡಿ ಎಂದು ಪ್ರಧಾನ ಮಂತ್ರಿಗಳಿಗೆ ಫರ್ಮಾನು ಹೊರಡಿಸಿದ; ಶಿವಸೈನಿಕರು ಬೀದಿಗೆ ಇಳಿದು ತಮ್ಮ ತಾಲೀಮು ಪ್ರದರ್ಶಿಸಿದರು. ಪತ್ರಿಕೆಗಳಿಗೆ ಇದು ಬಿಸಿ ತುಪ್ಪ ಬಾಯಲ್ಲಿ ಇಟ್ಟುಕೊಂಡ ಹಾಗೆ ಆಗಿತ್ತು; ಸೇಡಿನ ರಾಜಕೀಯದಿಂದ ಮುಂಬೈ ಅಪಾಯಕ್ಕೆ ಸಿಲುಕಿದೆ ಎಂದು ಗೊಣಗಾಡತೊಡಗಿದವು. ಜುಲೈ ೨೫ರಂದು ಭೋಯಿವಾಡ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್ 'ಕೇಸಿನಲ್ಲಿ ದಮ್ಮಿಲ್ಲ' ಎಂದು ಠಾಕ್ರೆಯನ್ನು ಖುಲಾಸೆ ಮಾಡಿದ ತಕ್ಷಣ ಇಂಗ್ಲಿಷ್ ಪತ್ರಿಕೆಗಳ ಆನಂದದ ಕಟ್ಟೆ ಒಡೆದುಹೋಯಿತು. 'ಟೈಮ್ಸ್ ಆಫ್ ಇಂಡಿಯಾ'ದ ಸಂಪಾದಕೀಯ ''ಠಾಕ್ರೆ ಪುಟಿದೆದ್ದು ಬಂದ,'' ''ಮಹಾರಾಷ್ಟ್ರ ಸರ್ಕಾರ ಕಸಿವಿಸಿಯಿಂದ ಕೈ ಹೊಸೆದುಕೊಳ್ಳುವಂತಾಗಿದೆ'' ಎಂದು ಪಂದ್ಯ ಗೆದ್ದ ಉತ್ಸಾಹದಲ್ಲಿ ಹೇಳಿದರೆ, ಅದೇ ಪತ್ರಿಕೆಯ ವರದಿಗಾರ ಠಾಕ್ರೆ ''೧೯೯೩ರಲ್ಲಿ ಖಳನಾಯಕನಾಗಿದ್ದವನು ೨೦೦೦ದಲ್ಲಿ ಹೀರೋ ಆದ'' ಎಂದು ಹೊಗಳಿ, ''ಮಹಾರಾಷ್ಟ್ರ ಸರ್ಕಾರ ಪೊಲೀಸ್ ಬಂದೋಬಸ್ತಿಗಾಗಿ ದಿನಕ್ಕೆ ೧ಕೋಟಿ ಖರ್ಚು ಮಾಡಿದೆ; ಸರ್ಕಾರದ ಈ ಕ್ರಮದಿಂದಾಗಿ ೨೧,೦೦೦ಕೋಟಿ ರೂಪಾಯಿಗಳಷ್ಟು ಬಂಡವಾಳ ಚಲಾವಣೆಯಾಗದೆ ಅಪಾರ ನಷ್ಟವಾಗಿದೆ. ಇದೆಲ್ಲಾ ಯಾವ ಪುರುಷಾರ್ಥಕ್ಕಾಗಿ'' ಎಂದು ದಬಾಯಿಸಿದ. 'ಇಂಡಿಯನ್ ಎಕ್ಸ್‌ಪ್ರೆಸ್'ನ ಅಂಕಣಕಾರ ಶೇಖರ್ ಗುಪ್ತ ಇದೆಲ್ಲಾ ಭುಜಬಲನ ಹಟದಿಂದ ಆದದ್ದು; ಮಂತ್ರಿ ಮಂಡಳದ ಸಭೆಯಲ್ಲಿ ಉಳಿದ ಮಂತ್ರಿಗಳು ಈ ಕೇಸಿನ ಬಗ್ಗೆ ಅರೆ ಮನಸ್ಸು ತೋರಿಸಿದಾಗ ಭುಜಬಲ 'ನಾವೇನು ಕೈಗೆ ಬಳೆ ತೊಟ್ಟುಕೊಂಡಿಲ್ಲ' ಎಂದು ಹಾರಾಡಿದ್ದ; ಈಗ ಭುಜಬಲ ಬಳೆತೊಟ್ಟು ಕೊಳ್ಳಲಿ ಎಂದು ಲೇವಡಿ ಮಾಡಿದ. ಎರಡೂ ಪತ್ರಿಕೆಗಳೂ, ಕೇಸನ್ನು ಮುಂಬೈ ಹೈಕೋರ್ಟ್‌ಗೆ ಒಯ್ಯುವುದು ಬರೀ ಒಂದು ತಾಂತ್ರಿಕ ವಿಷಯ ಅಷ್ಟೇ; ಈ ಘಟನೆಯಲ್ಲಿ ಠಾಕ್ರೆ ಗೆದ್ದ, ಮಹಾರಾಷ್ಟ್ರ ಸರ್ಕಾರ ಮಣ್ಣು ಮುಕ್ಕಿತು - ಅಲ್ಲಿಗೆ ಆಟ ಮುಗಿಯಿತು ! ಎಂದು ಸಾರಿದವು. ಮೆಟ್ರೊಪಾಲಿಟನ್ ಕೋರ್ಟ್‌ನ ತೀರ್ಪಿನ ಬಗ್ಗೆ ಆತಂಕ ವ್ಯಕ್ತಪಡಿಸಿದ್ದು 'ದಿ ಹಿಂದು' ಮತ್ತು 'ಡೆಕ್ಕನ್ ಹೆರಾಲ್ಡ್' ಮಾತ್ರ.

'ಶುಭ್ರ ಶ್ವೇತ ವಸ್ತ್ರಧರಿಸಿದ' ಕಾನೂನು ಪರಿಪಾಲಕನ ಅವತಾರದಲ್ಲಿ ಕೋರ್ಟ್‌ನಿಂದ ಹೊರಗೆ ಬಂದ ಠಾಕ್ರೆಯನ್ನು ಪತ್ರಿಕೆಗಳು ಚಿತ್ರವತ್ತಾಗಿ ವರ್ಣಿಸಿದವು. ಠಾಕ್ರೆ ಕೋರ್ಟಿನ ಒಳಗೆ ಹೋಗುವುದಕ್ಕೆ ಮುಂಚೆ ''(ಜನರಲ್ಲಿ ಮೂಡಿರುವ) ಭಯ ಮತ್ತು ಆತಂಕಗಳಿಗೆ ತೆರೆ ಎಳೆಯುವುದಕ್ಕಾಗಿ ನಾನೇ ಪೊಲೀಸರಿಗೆ ಶರಣಾಗಿದ್ದೇನೆ. ನನ್ನ ಅಮರನಾಥ ಯಾತ್ರೆ, ಜೈಲು ಯಾತ್ರೆ, ಆಗುತ್ತದೋ ಏನೋ ನೋಡಿಯೇ ಬಿಡೋಣ'' ಎಂದು 'ಶಾಂತ ಚಿತ್ತ'ದಿಂದ ಹೇಳಿದಾಗಲೇ ವರದಿಗಾರರು ಪುಳಕಿತರಾಗಿರುವಂತೆ ಕಾಣುತ್ತದೆ; ಮಸಲ, ಕೇಸು ಠಾಕ್ರೆ ವಿರುದ್ಧವಾಗಿದ್ದರೂ ಆತನೇ '೨೦೦೦ದ ಹೀರೋ' ಎಂದು ಪತ್ರಿಕೆಗಳು ತೀರ್ಪು ಕೊಡುತ್ತಿದ್ದವು. ಸ್ಟಾಕ್ ಮಾರ್ಕೆಟ್‌ನಲ್ಲಿ ಆತಂಕ ಮೂಡಿಸಿ ಪಾಯಿಂಟ್‌ಗಳು ಗೋತಾ ಹೊಡೆಯುವಂತೆ ಮಾಡುವವರು ಕೇಡಿಗಳು; ಕಾನೂನು ರೀತಿಯಲ್ಲೇ ಆಗಲಿ, ಕಾನೂನು ಬಾಹಿರವಾಗಿಯೇ ಆಗಲಿ, ಪಾಯಿಂಟ್‌ಗಳು ಗಗನಕ್ಕೇರುವಂತೆ ಮಾಡುವ ವರ್ಚಸ್ಸಿರುವ ಠಾಕ್ರೆ ಹೀರೋ. ಇದು ನಮ್ಮ ಇಂಗ್ಲಿಷ್ ಪತ್ರಿಕೆಗಳ ಸ್ಟಾಕ್ ಮಾರ್ಕೆಟ್ ಪ್ರಜಾಪ್ರಭುತ್ವ.

**ಕೆ. ಫಣಿರಾಜ್**
ಸಿ-೧ (ಎ), ಕೈಲಾಸ್ ಕ್ವಾರ್ಟರ್ಸ್, ಮಣಿಪಾಲ - ೫೭೬ ೧೧೯

# ಕನ್ನಡ ಮಾತು ತಲೆಯೆತ್ತುವ ಬಗೆ

ದಿನೇಶ್ ಕುಮಾರ್

**ಬಾ**ಗಲಕೋಟೆಯಲ್ಲಿ ವಾರ್ಷಿಕ ಕನ್ನಡ ಸಾಹಿತ್ಯ ಸಮ್ಮೇಳನ ಶುರುವಾಗುವ ಸಮಯದಲ್ಲಿ ಧಾರವಾಡ-ಹುಬ್ಬಳ್ಳಿಯಲ್ಲಿ ನ್ಯಾಯಪೀಠವೊಂದನ್ನು ಸ್ಥಾಪಿಸುವ ಅಗತ್ಯ ಏನಿಲ್ಲ ಅನ್ನುವ ತೀರ್ಮಾನ ಮಾಡಿದ ಐವರು ಕಾನೂನು ತಜ್ಞರ ಪಾಂಡಿತ್ಯಕ್ಕೆ ಎಣೆಯಿಲ್ಲ. ಅಧಿಕಾರಶಾಹಿಗೆ ಪ್ರಜಾಸತ್ತೆಯ ಆಕಾಂಕ್ಷೆಗಳಿಗೆ ಅರ್ಥಪೂರ್ಣವಾಗಿ ಸ್ಪಂದಿಸುವ ಶಿಸ್ತು ಇಲ್ಲ ಅನ್ನುವ ಸಿದ್ಧಾಂತಕ್ಕೆ ಈ ಸಂಗತಿ ಮತ್ತು ವಲಯ 'ರೈಲ್ವೇ ಕಛೇರಿಯನ್ನು ಉತ್ತರ ಕರ್ನಾಟಕಕ್ಕೆ ಕೊಡಲು ನಿರಾಕರಿಸಿದ್ದು ನಿದರ್ಶನಗಳು. ಜತೆಗೆ ಜಾತಿಯ ನೆಲಗಟ್ಟಿನ ಮೇಲೆ ಕಟ್ಟಿದ ರಾಜ್ಯವೊಂದನ್ನು ಭಾಷೆಯ ಮೂಲಕ ಮಾತ್ರ ಒಂದುಗೂಡಿಸುವುದು ಅಸಾಧ್ಯ ಅನ್ನುವುದು ನಮಗೀಗ ಅರ್ಥವಾಗಬೇಕು. ಆರ್ಥಿಕ ನೆಮ್ಮದಿ ಇದ್ದರೆ ಮಾತ್ರ ಬೇರೆಲ್ಲ ಕಾರ್ಯಗಳನ್ನು ಮಾಡಲು ಸಾಧ್ಯ. ಕರ್ನಾಟಕ ಇತಿಹಾಸದಲ್ಲಿ ಈಗೊಂದು ಮಹಾ ಸಮಸ್ಯೆ ಎದ್ದಿದೆ. ಹಿಂದಿನ ಕಾಲದಲ್ಲಿದ್ದ ಪ್ರಶ್ನೆ ಈ ರಾಜನ, ಆ ಪಾಳೆಗಾರನ ಊಳಿಗೆಯದ್ದು. ಈಗಿನ ಪ್ರಶ್ನೆ ಕನ್ನಡ ಮಾತು ಎಲ್ಲಿಯವರೆಗೆ ಕ್ಷೇಮ ಅನ್ನುವುದು. ಕನ್ನಡ ಉಳಿಯಬೇಕಾದರೆ, ಶ್ರೀಮಂತವಾಗಬೇಕಿದ್ದರೆ, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ವಿಕಟಾಟ್ಟಹಾಸದ ಒಡ್ಡೋಲಗ ನೆಲ ಕಚ್ಚಬೇಕು. ನಾವು ಅಕ್ಕಪಕ್ಕದ ನಾಡುಗಳ ಪಾಮರರಂತೆ ದುರಭಿಮಾನಿಗಳಲ್ಲ, ಸದಭಿಮಾನಿ ಕನ್ನಡ ಪ್ರಿಯರು ಅನ್ನುವ ಬಂಡವಾಳವಿಲ್ಲದ ಬಡಾಯಿಯನ್ನು ನಿಲ್ಲಿಸಬೇಕು. ಸಂಸ್ಕೃತಿಯನ್ನು ಹೊಗಳುವ ಕ್ರಮದಲ್ಲಿ, ಆನೆಗಳ ಮೇಲೆ ಪುಸ್ತಕಗಳ ಸವಾರಿ ಮಾಡಿಸುವುದು, ಲೇಖಕರಿಗೆ ಪಂಪ ಇತ್ಯಾದಿಗಳ ಹೆಸರಿನ ಪದಕ ಕೊಟ್ಟು ಶಾಲು ಹೊದೆಸಿದ ಮಟ್ಟಿಗೆ ಕನ್ನಡದ ಶಕ್ತಿಗೆ ಇಂಬು ಕೊಡುತ್ತೇವೆ ಎಂದು ಭಾವಿಸುವುದು ಉಪಯೋಗವಿಲ್ಲದ ಕಸರತ್ತು.

ಹಿಂದಿಗೆ ನಾವು ಸಾಷ್ಟಾಂಗ ಮಾಡುವ ರೀತಿಯನ್ನು ಗಮನಿಸಿ. ಲೋಕಸಭೆಯ ಒಂದಾದರೂ ಸಮಾವೇಶ ಬೆಂಗಳೂರಿನಲ್ಲಿ ನಡೆಯಲಿ, ಎಷ್ಟು ಖರ್ಚಾದರೂ ಕನ್ನಡಿಗರು ಅದನ್ನು ಭಾವೈಕ್ಯತೆಯ ಆಸೆಯಿಂದ ಹೊರಬಲ್ಲರೆಂದು ದಿಲ್ಲಿಗೆ ಡೊಗ್ಗು ಸಲಾಮು ಹಾಕಿದ ಸರ್ಕಾರಗಳ ಪಟ್ಟಿ ಸಾಕಷ್ಟು ದೊಡ್ಡದು. ೧೯೯೯ರ ಮಹಾಚುನಾವಣೆಯಲ್ಲಿ ಅರ್ಹರು ಯಾರೂ ಇಲ್ಲ ಅಂದು ಲೋಕಸಭೆಯ ಪದವಿಗೆ ಯಾರಿಗೂ ವೋಟ್ ಮಾಡದಿದ್ದ ಮಹಾ ಮುತ್ಸದ್ದಿ ಶ್ರೀ ನಿಜಲಿಂಗಪ್ಪನವರು ಲೋಕಸಭೆ ಬೆಂಗಳೂರಿಗೆ ಬರಲಿ ಅನ್ನುವ ಭಿಕ್ಷಾಟನೆಗೆ ರಾಜಧಾನಿಯಲ್ಲಿ ಒಂದು ಹಿಂದಿ ವಿಶ್ವವಿದ್ಯಾಲಯದ ರಚನೆ ಮಾಡುವ ಹುಮ್ಮಸ್ಸು ತೋರಿದ್ದರು. ಆ ವ್ಯಕ್ತಿ ಸ್ವಂತ ಹೊಸದುರ್ಗದಲ್ಲಿ ಸೋಲು ಅನುಭವಿಸಿದರೂ, ದೂರದ ಬಾಗಲಕೋಟೆಯಲ್ಲಿ ಮುರನಾಳ ಎಂಬ ಅನಾಮಿಕರ ರಾಜಿನಾಮೆ ಪಡೆದು, ಆ ಜಾಗೆಯಿಂದ ವಿಧಾನಸಭೆಗೆ ಬಂದವರು. ಅವರು ತಮ್ಮ ದೇಶಭಕ್ತಿಯನ್ನು ಈ ಥರ ವ್ಯಕ್ತಪಡಿಸಿದಾಗ ಕನ್ನಡನಾಡಿನಲ್ಲಿ ಕನ್ನಡ ವಿಶ್ವವಿದ್ಯಾಲಯ ಇರಲಿ, ನಮ್ಮ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡ ಅಧ್ಯಯನ ವಿಭಾಗಗಳು ಇರಲಿಲ್ಲ. ನಾನು ಸಂಜೆವಾಣಿಯಲ್ಲಿ ಕೆಲವು ತಿಂಗಳ ಹಿಂದೆ ಓದಿದಂತೆ, ಹಾ. ಮಾ. ನಾಯಕರ ಪ್ರಕಾರ ಕನ್ನಡಕ್ಕೆ ರಾಜ್ಯದ ರಾಜಕಾರಣಿಗಳಿಂದ ಆದ ಅನ್ಯಾಯ ಅಳತೆ ಮಾಡುವುದು ಕಷ್ಟ. ಬೆಂಗಳೂರು ವಿಶ್ವವಿದ್ಯಾಲಯವನ್ನು ನಾಯಂಡಹಳ್ಳಿಗೆ ಒಯ್ದಾಗ ಸೆಂಟ್ರಲ್ ಕಾಲೇಜು ಮತ್ತು ಅದರ ಆಸುಪಾಸಿನಲ್ಲಿರುವ ಕಟ್ಟಡಗಳನ್ನು ಕನ್ನಡ ಸಂಸ್ಥೆಗಳ, ಸಂಸ್ಕೃತಿ ಇಲಾಖೆಯ, ಕನ್ನಡ ಸಾಹಿತ್ಯ ಪರಿಷತ್ತಿನ ಮನೆ ಮಾಡಬಹುದಿತ್ತು. ಒಂದು ದಕ್ಷವಾದ ಅಚ್ಚುಕೂಟವೊಂದನ್ನು ಅಲ್ಲಿ ಮಾಡಬಹುದಿತ್ತು (ಶ್ರೀ ಎಸ್. ಕೆ. ರಾಮಚಂದ್ರರಾಯರ ಪುರಂದರ ದಾಸರ ಕೃತಿಗಳು ಸಂಪಾದನೆ ಗುಣದಲ್ಲಿ ಯಾವ ಸಮಾನಕೃತಿಯ ಮುಂದೆಯೂ ನಿಲ್ಲಬಲ್ಲದು, ಆದರೆ ಅದರಲ್ಲಿರುವ ಮುದ್ರಣದ ಆಭಾಸಗಳು ಎಣಿಸಲಾರದಷ್ಟು). ಈ ಸಾಲುಗಳನ್ನು ನಾನು ಬರೆಯುತ್ತಿರುವಂತೆ, ಸರ್ಕಾರ ಈ ವರ್ಷ ಕನ್ನಡದ ಅಭಿವೃದ್ಧಿಗೆ ಮುಡುಪಿಟ್ಟ ದುಡ್ಡಿನಲ್ಲಿ ಒಂದು ಕೋಟಿ ಕಡಿತ ಮಾಡಿದೆ ಅನ್ನುವ ಸಂಗತಿಯನ್ನು ಕೊಂಚವೂ ಬೇಸರಿಕೆ ಇಲ್ಲದೆ, ಸಂಸ್ಕೃತಿ ಮಂತ್ರಿ ಶ್ರೀಮತಿ ರಾಣಿ ಸತೀಶರು ಪತ್ರಿಕಾಗೋಷ್ಠಿಯೊಂದರಲ್ಲಿ ತಿಳಿಸಿದ್ದಾರೆ. ಕನ್ನಡ ಬೆಳೆಯಬೇಕಾದರೆ ಖಾಸಗಿ ಮೂಲಗಳು ಸಹಾಯ ಮಾಡಲಿ ಎನ್ನುವ ಧೋರಣೆ ನಮ್ಮ ಕನ್ನಡ ಸರಕಾರದ್ದು. ಬಂಡವಾಳಶಾಹಿ ಮಾದರಿಯಲ್ಲಿ!

ಅಮೆರಿಕದಲ್ಲಿ ಬೇರೆ ಭಾಷೆಗಳು ಕಂಟಕ ಎಂದು ತೀರ್ಮಾನಿಸಿರುವ ಕೆಲವು ಆಂಗ್ಲ ಪ್ರಮುಖ ಸಂಸ್ಥೆಗಳು ಮತ್ತು ವ್ಯಕ್ತಿಗಳು ದ್ವಿಭಾಷೀಯತೆಯ ವಿರುದ್ಧವಾಗಿ ಇಂಗ್ಲಿಷ್ ಸ್ಪೀಕಿಂಗ್ ಯೂನಿಯನ್, ಇಂಗ್ಲಿಷ್ ಓನ್ಲಿ ಅನ್ನುವ ನಾಮಫಲಕ ಧರಿಸುವ ತಲೆಯಿಲ್ಲದ ಸಂಸ್ಥೆಗಳಿಗೆ ಕೋಟ್ಯಂತರ ರೂಪಾಯಿಗಳ ದಾನ ಮಾಡುತ್ತಾರೆ. (ಇದರಲ್ಲಿ ಒಂದು ತಲೆ ಕೆಡಿಸುವ ಸಂಗತಿ ಅಂದರೆ ಎಸ್. ಆಯ್. ಹಯಕಾವ ಅನ್ನೋ ಪ್ರಸಿದ್ಧ ಭಾಷಾ ಪಂಡಿತ, ಅವನ ಮೂಲ ಜಪಾನ್, ತಂದೆ ತಾಯಿ ಕೆನಡಾಗೆ ವಲಸೆ ಬಂದವರು, ಈ ಪಿತೂರಿಯ ಮುಖ್ಯ ಸಲಹೆಗಾರನಾಗಿದ್ದ). ಜಾಗತೀಕರಣದ ಮುಸುಕಿನಲ್ಲಿ ಕನ್ನಡನಾಡಿನ ಸಂಪತ್ತನ್ನು ಸೂರೆ ಮಾಡುತ್ತಿರುವ ಅನ್ಯಭಾಷೀಯರು, ಅವರು ಹಿಂದಿ ಮಾತಾಡಲಿ, ಇಂಗ್ಲಿಷ್ ಮಾತಾಡಲಿ, ಕನ್ನಡದ ಉದ್ಧಾರಕ್ಕೆ ಏಕೆ ಕಾಸು ಕೊಡಲು ಮುಂದಾಗುತ್ತಾರೆ ಅನ್ನುವ ಪ್ರಶ್ನೆ ಶ್ರೀಮತಿಯವರಿಗೆ ಹೊಳೆಯಲಿಲ್ಲ. ಸ್ವಾತಂತ್ರ್ಯ ಪಡೆದು ಐವತ್ತು ವರ್ಷದ ಮೇಲಾದರೂ ಬ್ರಿಟಿಷರಂತೆ ವರ್ತಿಸುವ ನಾವು ಆ ಬಿಳಿಜನಗಳು ಬ್ರಿಟಿಷ್ ಕೌನ್ಸಿಲ್ಲಿನಂತಹ ಪ್ರಾಪಗ್ಯಾಂಡಿಸ್ಟಿಕ್ ಇಲಾಖೆಗಳಿಗೆ ಎಷ್ಟು ಹಣ ಸುರಿಯುತ್ತಾರೆ ಅನ್ನುವುದನ್ನು ಅಭ್ಯಸಿಸುವುದು ಒಳಿತು. ಸ್ಥಿತಿವಂತರಾದ ಜನರಿಂದ ದುಡ್ಡಿನ ಅಪೇಕ್ಷೆ ಮಾಡಿದರೆ, ಅವರಿಗೆ ಕನ್ನಡದ ಕತೆ ಅಂಥ ಏನೂ ಸ್ವಾರಸ್ಯದ್ದಲ್ಲ.

ದೇಶದ ಐಕ್ಯತೆಯ ಹೆಸರಿನಲ್ಲಿ ನಮ್ಮ ಕನ್ನಡತನ ಮಾರಿಕೊಳ್ಳುತ್ತಿದ್ದೇವೆ ಎಂದು ಶ್ರೀ ಪಿ. ವಿ. ನಾರಾಯಣರು ಹೇಳಿರುವುದು ನಮ್ಮ ಕಣ್ತೆರೆಸಬೇಕು. ನಮ್ಮಲ್ಲಿ ಎಲ್ಲ ದೊಡ್ಡ



ಊರುಗಳಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಕಿಂಕರರಿದ್ದಾರೆ. ಕಾಸು ಕೇಳದೆ ಹಿಂದಿ ಕಲಿಸಲು ಅವರು ಸದಾ ಸಿದ್ಧ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಹಿಂದಿ ವಿಭಾಗಗಳಿವೆ. ವ್ಯಾಸಂಗಕ್ಕೆ ಯಾವ ಅಪವಾದ (ಎಕ್ಸೆಪ್ಷನ್) ಇರಬಾರದು ನಿಜ. ಆದರೆ ಹಿಂದಿ ವಾದಿಗಳು ಕನ್ನಡ ತಿಳಿಯದ ಹಿಂದಿ ವಾರಸುದಾರರಿಗೆ ಕನ್ನಡ ಕಲಿಸಲು ಏನು ಪ್ರಯತ್ನ ಮಾಡಿದ್ದಾರೆ ಅನ್ನುವ ಕುತೂಹಲ ನನಗೆ. ಮೈಸೂರು ವಿಶ್ವವಿದ್ಯಾನಿಲಯ ಹಿಂದೊಮ್ಮೆ ಕಾಶಿಯಲ್ಲಿ ಒಂದು ಶಾಖೆ ಸ್ಥಾಪಿಸಿತ್ತು. ಅದರ ಕತೆ ಈಗ ಏನಂತ ನನಗೆ ಗೊತ್ತಿಲ್ಲ.

ಕನ್ನಡ ಜನಕ್ಕೆ ತಮ್ಮ ಮಾತಿನ ಬಗ್ಗೆ ತಮಿಳರಿಗೆ ಇರುವಷ್ಟು ಪ್ರೀತಿ ಇಲ್ಲ ಎಂದು ಶ್ರೀಮತಿ ಶಾಂತಾ ಮಾಳವಾಡರು ಹಳೆಯ ಮಾತೊಂದನ್ನು ದುಃಖದಿಂದ ಮತ್ತೆ ಆಡಿದ್ದಾರೆ. ಎನ್ನಿಸಿಯ ಭಾಷೆ ಹಿಂದಿ ಆಗಬೇಕೆಂಬ ಕೇಂದ್ರ ಸರಕಾರದ ದಬ್ಬಾಳಿಕೆಯ ನೀತಿಯನ್ನು ಪ್ರತಿಭಟಿಸಿ ಗೆದ್ದ ಜನ ತಮಿಳರು. ಆ ಮಾತಿನ ಉಮೇದುವಾರರನ್ನು ಬೆಂಗಳೂರಿನಲ್ಲಿ, ಬಂಗಾರಪೇಟೆಯಲ್ಲಿ ಗೆಲ್ಲಿಸುವ ಜನ ತಮಿಳರು. ಭಾವೈಕ್ಯತೆಯ ಹೆಸರಿನಲ್ಲಿ ಸರ್ವಜ್ಞನ ಪ್ರತಿಮೆ ಮದರಾಸಿನಲ್ಲಿ ನಿಲ್ಲಿಸಲು ಬೇಡುವವರು ನಾವು.

ಈ ಸಂದರ್ಭದಲ್ಲಿ ಕನ್ನಡ ಮಾತನ್ನು ಉಳಿಸುವ ಕಾರ್ಯದಲ್ಲಿ ಪ್ರವೃತ್ತರಾಗಿರುವ ನಮ್ಮ ಹಿರಿಯರ ಕಾಳಜಿ ಬಗ್ಗೆ ನಾವು ಸ್ವಲ್ಪ ಯೋಚನೆ ಮಾಡಬೇಕು. ಮಾನ್ಯರಾದ ಚಿದಾನಂದ ಮೂರ್ತಿ, ಹಾ. ಮಾ. ನಾಯಕ್ ಮುಂತಾದವರು ಬೇಕೆನ್ನುವ ಕನ್ನಡ ಮಾತು ಸಾಹಿತ್ಯದ್ದು. ಕನ್ನಡದ ಉಳಿಕೆ ಬಳಕೆ ಸಾಹಿತ್ಯದ ಮೇಲೆ ಅವಲಂಬಿತವಾಗಿಲ್ಲ. ಅದನ್ನು ಮಾತಾಡುವುದರಲ್ಲಿ ಶೇಕಡಾವಾರು ಎಷ್ಟು ಇದೆ ಅನ್ನುವುದು ಮುಖ್ಯ. ಈಗ ನಮ್ಮ ನಾಲ್ಕುಕೋಟಿ ಕನ್ನಡಿಗರಲ್ಲಿ ಸ್ವಂತ ಇಚ್ಛೆಯಿಂದ ಸಾಹಿತ್ಯ ಅಭ್ಯಾಸ ಮಾಡುವ ಮಂದಿ ಎಷ್ಟು, ಕನ್ನಡ ಸುದ್ದಿಪತ್ರಿಕೆಗಳನ್ನು ಓದುವವರೆಷ್ಟು ಜನ ? ನಮ್ಮಲ್ಲಿ ಎಷ್ಟು ಮಂದಿ 'ಮಲೆಗಳಲ್ಲಿ ಮದುಮಗಳು'-ಅಥವಾ 'ಗ್ರಾಮಾಯಣ'ದಂತಹ ಕೃತಿಗಳ ಪರಿಚಯ ಪಡೆದಿದ್ದಾರೆ ? ಪುಟ್ಟಪ್ಪನವರ 'ರಾಮಾಯಣ ದರ್ಶನ'ವನ್ನು ಹಿಂದಿಗೆ ತದ್ರೂಪ ಮಾಡಲು ನಮ್ಮ ಸರಕಾರ ಐದು ಲಕ್ಷ ರೂಪಾಯಿಗಳ ಯೋಜನೆಯೊಂದನ್ನು ಹಾಕಿಕೊಂಡಿದೆ ಅಂತ ಶ್ರೀಮತಿ ರಾಣಿ ಸತೀಶರು ಹೇಳಿದ್ದಾರೆ. ಉತ್ತರ ಭಾರತದ ಗ್ರಂಥಾಲಯಗಳಲ್ಲಿ ಧೂಳು ತಿನ್ನಲಿರುವ ಭಾಷಾಂತರಗಳಿಂದ ದೈನಂದಿನ ಬದುಕಿನಲ್ಲಿ ನಾವು ಬಳಸುವ ಕನ್ನಡಕ್ಕೆ ಆಗುವ ಲಾಭ ಏನು ? ನನಗೆ ತೋರುವ ಮಟ್ಟಿಗೆ ಕನ್ನಡ ಬದುಕನ್ನು ಹಾಡುವ ಉಪಕರಣಗಳೆಂದರೆ ನಮ್ಮ ಮಸಾಲೆ ಕನ್ನಡ ಸಿನಿಮಾಗಳು.

ಕನ್ನಡಕ್ಕೆ ತುಂಬ ಏಟು ಬಿದ್ದ ಸಂಗತಿ ಎಂದರೆ ಕನ್ನಡ ಮೊದಲು ಅನ್ನುವ ಚಳುವಳಿಯ ನಾಯಕತ್ವ ವಹಿಸಿದವರು ಅ. ನ. ಕೃಷ್ಣರಾಯರಂತಹ ಸಾಹಿತಿಗಳು. ಬೆಂಗಳೂರಿನ ರಾಮೋತ್ಸವಗಳಲ್ಲಿ ಎಂ. ಎಸ್. ಸುಬ್ಬುಲಕ್ಷ್ಮಮ್ಮನಂತಹ ತಮಿಳರು, ಬಾಲಮುರಳಿಕೃಷ್ಣನಂತಹ ತೆಲುಗರು ಕನ್ನಡಿಗರಿಗಿಂತ ಪ್ರಾಶಸ್ತ್ಯ ಪಡೆಯಬಾರದು ಅನ್ನುವ ಅವರ ನೀತಿ ಭಾಷೆಗಿಂತ ಪ್ರತಿಭೆಗೆ ಸಂಬಂಧಿಸಿದ್ದು. (''ಜಗದೋದ್ಧಾರನ ಆಡಿಸಿದಳೆಶೋದೆ''ಯನ್ನು ಬಾಲಮುರಳಿಗಿಂತ, ''ಬಲಿಯ ಮನೆಗೆ ವಾಮನ ಬಂದಂತೆ'' ಅನ್ನು ಸುಬ್ಬಮ್ಮನಿಗಿಂತ, ''ಭಾಗ್ಯದ ಲಕ್ಷ್ಮಿ ಬಾರಮ್ಮಾ'' ಅನ್ನು ಕರ್ನಾಟಕ ಪದ್ಧತಿಯಲ್ಲಿ ವಸಂತಕುಮಾರಿಗಿಂತ ಶ್ರಾವ್ಯವಾಗಿ ಯಾರು ಹಾಡಿದ್ದಾರೆ? ಉತ್ತರ ಕರ್ನಾಟಕದ ಬಂಧುಗಳ ಬೇರೆ ರಾಜ್ಯ ಬೇಕು ಎನ್ನೋ ಕೂಗನ್ನು ವಿಶ್ಲೇಷಿಸುವಾಗ, ದಾಸರ ಪದಗಳನ್ನು ವಚನಗಳನ್ನು, ಲಕ್ಷಣವಾಗಿ ಉತ್ತರದ ಶೈಲಿಯಲ್ಲಿ ಹಾಡಿರುವವರೆಲ್ಲ ಕನ್ನಡಿಗರು ಎನ್ನುವುದನ್ನು ನೆನಪಿಸಿಕೊಳ್ಳಬೇಕು). ಅನಕೃ, ರಾಮಮೂರ್ತಿ ಮುಂತಾದವರಿಂದ ಕನ್ನಡ ಚಳುವಳಿಯನ್ನು ಕಿತ್ತುಕೊಂಡ ವಾಟಾಳು ನಾಗರಾಜರಿಗೆ, ಸಾಮಾನ್ಯ ಜನರ ಮಾತಿನ ಒಲವು ಇದ್ದರೂ, ಸಾಹಿತ್ಯದ, ಭಾಷಾ ವಿಜ್ಞಾನದ ಪರಿಚಯ ಇಲ್ಲದಿದ್ದರಿಂದ ಅವರ ಕನ್ನಡಪರ ಹೋರಾಟಕ್ಕೆ ಬೆಲೆ ಸಿಕ್ಕದೆ ಹೋಯಿತು. ಯಾವ ಕನ್ನಡ ನಾಯಕನಿಗೂ ದಿನದಿನದ ಭಾಷೆ ಮತ್ತು ಸಾಹಿತ್ಯದ ನಡುವೆ ಸೇತುವೆ ಕಟ್ಟುವ ಧೀಶಕ್ತಿ ಇರಬೇಕು. ಇಲ್ಲಿಯವರೆಗೆ, ಆ ರೀತಿಯ ಸಾಮರ್ಥ್ಯ ನಮ್ಮ ನಾಡಿನಲ್ಲಿ ಯಾರೂ ತೋರಿಲ್ಲ.

ನನಗೆ ಕೆಲವು ವರ್ಷಗಳ ಹಿಂದೆ ಬರೆದ ಕಾಗದವೊಂದರಲ್ಲಿ ಶ್ರೀ ಜಿ. ರಾಮಕೃಷ್ಣ ಕನ್ನಡ ಮಾತು ನೆಂಟರ ಇಷ್ಟರ ಮಾತು ಮಾತ್ರವೇ ಆಗುವಷ್ಟು ಕೆಳಗೆ ಬಿದ್ದಿದೆ ಅಂದಿದ್ದರು. ಅವರ ಹೇಳಿಕೆಯಲ್ಲಿ ಉತ್ಪ್ರೇಕ್ಷೆ ಇಲ್ಲ ಅನ್ನುವುದು ನೋವಿನ ಸಂಗತಿ. ಕನ್ನಡದ ಗತಿ ಹೀಗಾಗುತ್ತೆ ಎಂದು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಸುಮಾರು ನಲವತ್ತು ವರ್ಷಗಳ ಹಿಂದೆ ಹಿಂದಿಯ ಬಗ್ಗೆ ಮಾತಾಡುತ್ತ ಭವಿಷ್ಯ ನುಡಿದಿದ್ದರು ಎಂದು ಶ್ರೀ ನಾಯಕರು ಕನ್ನಡ ಕಟ್ಟುವ ಕೆಲಸದಲ್ಲಿ ಬರೆದಿದ್ದರು. ಕರ್ನಾಟಕ ಸರಕಾರದ ಮುಖ್ಯ ಕಾರ್ಯದರ್ಶಿ ಭಟ್ಟಾಚಾರ್ಯರ ಜೊತೆ ಚಿಕ್ಕಮಗಳೂರಿನಿಂದ ಯಾವ ಪುಢಾರಿಯ ನೆರವಿಲ್ಲದೆ ಎಪ್ಪತ್ತು ವರ್ಷದ ನಮ್ಮ ಅಮ್ಮ ಕನ್ನಡದಲ್ಲಿ ಸಂಭಾಷಿಸಲು ಸಾಧ್ಯವೇ? ಒಂದು ಸಮಯ ನಮ್ಮ ಪ್ರವರ್ಬಿಯಲ್ ಬೋರೇಗೌಡ ಹಗರಿಬೊಮ್ಮನ ಹಳ್ಳಿಯಿಂದ ಬಳ್ಳಾರಿಗೆ ಹೋಗಿ ಜಿಲ್ಲಾಧಿಕಾರಿ ಶ್ರೀ ರಾಜ ಕಮಲರೊಂದಿಗೆ ಕಾಲಕ್ಷೇಪ ಮಾಡಲು ಎಸಗಿದರೆ ಹೇಗೆ? ಬೇರೆ ರಾಜ್ಯಗಳಿಂದ ಕರ್ನಾಟಕಕ್ಕೆ ವಲಸೆ ಬರುವ ಐ. ಏ. ಎಸ್. ನ ಕನ್ನಡ ವಿರೋಧಿ ಕರ್ಮಚಾರಿಗಳಿಗೆ, ಅಂತರರಾಷ್ಟ್ರೀಯ ಖದೀಮ ವ್ಯಾಪಾರಿಗಳ ನೌಕರರಿಗೆ ಕನ್ನಡ ಕಲಿಯುವ ಅಗತ್ಯ ಏನಿದೆ?

*ಕರ್ನಾಟಕ ಸಂಸ್ಕೃತಿಯ ಕಂಪನ್ನು ಹರಡಲು ಒಂದಷ್ಟು ಕಲಾವಿದರನ್ನು ಬ್ರಿಟನ್ ಮತ್ತು ಅಮೆರಿಕಾಗಳಿಗೆ ಕಳಿಸಲು ಕೃಷ್ಣ ಸರ್ಕಾರ ತೀರ್ಮಾನಿಸಿದೆ. ರಾಜ್ಯ ಬೊಕ್ಕಸದಿಂದ ಒಂದು ಕೋಟಿ ರೂಪಾಯಿ ಖಾಲಿ ಆಗುವುದು ಖಚಿತ. ಆದರೆ ಅದರಿಂದ ಕನ್ನಡಕ್ಕೆ, ಕರ್ನಾಟಕಕ್ಕೆ ಏನು ಹಿರಿಮೆ ಸಿಗುತ್ತದೋ ತಿಳಿಯದು. ಕರ್ನಾಟಕದ ಹಳ್ಳಿಗಳಿಗೆ ಹೋಗಲು ಹಿಂಜರಿಯುವ ನಮ್ಮ ಕಲಾವಿದರು ಒಬ್ಬರ ಮೇಲೊಬ್ಬರು ಬಿದ್ದು ಕ್ಯೂ ನಿಂತಿದ್ದಾರೆ - ಅಮೆರಿಕಾಕ್ಕೆ ತೊಲಗಲು. ಅಲ್ಲಿಯ ಅನಿವಾಸಿ ಭಾರತೀಯರು. ಕೃಷ್ಣ ಸರ್ಕಾರಕ್ಕೆ ಸಹಾಯ ಮಾಡಲು ಕರ್ನಾಟಕದಲ್ಲಿ ಬಂಡವಾಳ ಹೂಡುತ್ತಾರೆಂಬ ಭ್ರಾಂತಿ ಸದ್ಯದಲ್ಲೇ ಬಹಿರಂಗವಾಗುತ್ತದೆ. ಆದರೂ ಕೃಷ್ಣ, ಮುದ್ದುಕೃಷ್ಣ, ಪೆದ್ದು ಕೃಷ್ಣ ಇತ್ಯಾದಿಗಳು ಹಾರಲು ಸಜ್ಜಾಗುತ್ತಿದ್ದಾರೆ. ಕನ್ನಡಕ್ಕೆ ಆಗಬೇಕಾದ ಕಾಯಕಲ್ಪ ಇದಲ್ಲ.*

ಪರದೇಶಿಗಳು ನಮ್ಮ ಮಾತಾಡುವುದಿಲ್ಲ ಎಂದು ಕೊರಗುವ ಮುನ್ನ, ಅವಶ್ಯಕತೆ ಇಲ್ಲದೆ ಯಾವ ಭಾಷೆಯೂ ಉಳಿಯುವುದಿಲ್ಲ ಅನ್ನುವ ಸತ್ಯವನ್ನು ನಾವು ಒಪ್ಪಿಕೊಳ್ಳಬೇಕು. ಆಯರ್ಲಂಡಿನ ದೇಶಿ ಭಾಷೆ ಗೇಲಿಕ್. ಅದು ಇಂಗ್ಲಿಷ್ ಭಾಷೆಯ ಸ್ವಾಮಿತ್ವದಡಿ ಹತ್ತೊಂಬತ್ತನೆಯ ಶತಮಾನದಲ್ಲಿ ನಿರ್ನಾಮವಾಯಿತು. ಅದಕ್ಕೆ ಕೃತಕ ಉಸಿರಾಟ ಕೊಡುವ ಯತ್ನ ಫಲಕಾರಿಯಾಗಿಲ್ಲ. ಇಸ್ರೇಲಿನಲ್ಲಿ ರಾಷ್ಟ್ರಭಾಷೆಯಾಗಿರುವ ಹೀಬ್ರೂ, ಅಲ್ಲಿ ಎಲ್ಲ ಜನರ ಮನೆ ಮಾತೇನಲ್ಲ. ವೇಲ್ಸ್‌ನಲ್ಲಿ ವೆಲ್ಷ್ ಕಲಿಯದೆ ಮುಂದುವರೆಯುವುದು ಅಸಾಧ್ಯದ ಮಾತೇನಲ್ಲ. ಕನ್ನಡ ಈ ಪರಿಸ್ಥಿತಿಗೆ ಇಳಿದಿರುವುದು ದೇಶ ಕಟ್ಟುವ ನೆಪದಲ್ಲಿ ನಮ್ಮ ರಾಜಕಾರಣಿಗಳು ಜವಾಹರಲಾಲ್ ನೆಹರು ಅವರ ವರ್ಚಸ್ಸಿಗೆ ಬೆದರಿ, ಅವರ ಮಾತಿನ ಮೋಡಿಗೆ ಬೆರಗಾಗಿ, ತ್ರಿಭಾಷಾಸೂತ್ರ ಎಂದು ಕರೆದು ಕೊಳ್ಳುವ - ಕರೆದು ಕೊಲ್ಲುವ - ಮೋಸಕ್ಕೆ ನಮ್ಮನ್ನೆಲ್ಲ ಗುರಿಮಾಡಿದ್ದು. ಮನೆಯ ಮಾತು ಕನ್ನಡ, ದೇಶಭಾಷೆ ಹಿಂದಿ, ವಿಶ್ವಭಾಷೆ ಇಂಗ್ಲಿಷ್! ದೇಶಪ್ರೇಮ ನಮಗಿದ್ದರೆ ಹಿಂದಿಯನ್ನು ಕಲೀಬೇಕು ಅನ್ನುವ ಹುಂಬುತನ ನಮ್ಮ ಕಷ್ಟಕ್ಕೆ ಕಾರಣ. ಹಿಂದಿ ಕಲಿಯದಿದ್ದರೆ ಕನ್ನಡನಾಡಿನಲ್ಲಿ ಜೀವಕ್ಕೇನೂ ಭಯವಿಲ್ಲ.

ಆದರೆ ಕನ್ನಡಿಗರಿಗೆ ತಮ್ಮ ನಾಡಿನಲ್ಲೇ ಉದ್ಯೋಗ ಸಿಕ್ಕದಿರುವಾಗ, ಆ ಭಾಷೆ ಕಲಿತು ಏನು ಪ್ರಯೋಜನ ? ಲಾಯ್ಕ್ ಎವ್ರಿಥಿಂಗ್ ಎಲ್ಸ್ ಕನ್ನಡ ಇಸ್ ಗ್ರೈಡೆಡ್ ಬಯ್ ದಿ ಇಕನಾಮಿಕ್ ರಿಯಾಲಿಟೀಸ್ ಆಫ್ ಲಾಯ್ಫ್. ಅದರ ಬಗ್ಗೆ ಉದಾರವಾದ ಸೆಂಟಿಮೆಂಟ್ ಇಟ್ಟುಕೊಳ್ಳುವುದರಿಂದ ಅದನ್ನು ಉಳಿಸಬಹುದು ಅನ್ನುವುದು ತೀರ ಕನಸಿನ ಮಾತು. ಹಿಂದಿ ಕಲಿತರೆ ಫರೀದಾಬಾದಿನಲ್ಲಿ, ಬೊಂಬಾಯಿಯಲ್ಲಿ, ಕೆಲಸ ಗಿಟ್ಟಿಸಿಕೊಳ್ಳಬಹುದು. ಇಂಗ್ಲಿಷ್ ಕಲಿತರೆ ಭಾರತದಲ್ಲೇ ಎಲ್ಲಾದ್ರೂ ಹೋಗಬಹುದು. ಇಲ್ಲ ಅಮೆರಿಕಕ್ಕೆ, ಆಸ್ಟ್ರೇಲಿಯಕ್ಕೆ ಹೋಗಬಹುದು. ಬರಿ ಕನ್ನಡದಲ್ಲಿ ಓದಿದರೆ ನಮ್ಮನ್ನು ಕ್ಯಾರೆ ಅಂತ ಯಾರಂತರೆ ? ದಕ್ಷಿಣದಿಂದ ಬಂದವರೆಲ್ಲ ಮದರಾಸಿಗಳು, ತಮಿಳರು, ಅನ್ನುವ ಧೋರಣೆಯ ಹಿಂದೀವಾಲಾಗಳು, ನಮ್ಮ ಭಾಷೆಗೆ ಯಾಕೆ ಮರ್ಯಾದೆ ತೋರುತ್ತಾರೆ? ಮುವ್ವತ್ತು ವರ್ಷಗಳ ಹಿಂದಿನ ಮಾತು: ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ಓದುತ್ತಿದ್ದಾಗ ವಸಂತನಗರ, ಶಿವಾಜಿನಗರ ಕಡೆಯಿಂದ ಬಂದ ನಮ್ಮ ಸಹಪಾಠಿಗಳಿಗೆ, ''ಕನ್ನಡ ಇಸ್ ಅ ಫಾರಿನ್ ಲ್ಯಾಂಗ್ವಿಜ್ ಟು ಮಿ'' ಅಂತಾ ಅನ್ನುವುದರಲ್ಲಿ ಭಲೆ ಖುಷಿ. ಮೇಷ್ಟ್ರು

ಮತ್ತೆ ಮೇಷ್ಟ್ರಿಣಿಗಳು ಕೂಡ ಕನ್ನಡ ಗೊತ್ತು ಅಂದರೆ ಅವಮಾನಾ ಅನ್ನೋ ಹಾಗೆ ನಟಿಸುತ್ತಿದ್ದರು. ಚಿಕ್ಕಮಗಳೂರು, ಶಿವಮೊಗ್ಗೆ, ಭದ್ರಾವತಿ, ಚಿತ್ರದುರ್ಗ ದಿಂದ ಬಂದಿದ್ದ ನನ್ನಂತಹ ದಸ್ಯುಗಳಿಗೆ ದಿವಂಗತ ಲಂಕೇಶ್ ರಾಜಾರೋಷವಾಗಿ ಡಿಪಾರ್ಟ್ಮೆಂಟ್ ಆಫೀಸಿನಲ್ಲಿ ಕನ್ನಡದಲ್ಲೇ ಮಾತಾಡಿ, ಕಾಫಿ ಕುಡಿಸಿ ಉತ್ತೇಜನ ಕೊಡದಿದ್ದರೆ ಆ ಕ್ಲಾಸಿನಲ್ಲಿದ್ದ ಕನ್ನಡ ಹುಡುಗರ ಗತಿ ಏನಾಗುತ್ತಿತ್ತೋ ದೇವರೇ ಬಲ್ಲ. ಅಮೆರಿಕೆಯಲ್ಲಿರುವ ಕನ್ನಡಿಗರು ಕೂಟ ಕಟ್ಟುತ್ತಾರೆ. ಸಮ್ಮೇಳನಗಳನ್ನು ಏರ್ಪಡಿಸುತ್ತಾರೆ. ಕರ್ನಾಟಕದ ಕಲಾವಿದರನ್ನು, ಲೇಖಕರನ್ನು ಗೌರವಿಸುತ್ತಾರೆ. ಆದರೆ ಅವರ ಮಕ್ಕಳಿಗೆ ಕನ್ನಡದ ಬಗ್ಗೆ ಅಂಥ ಪ್ರೀತಿ ಏನೂ ಇರೋಲ್ಲ. ಮಿಷಿಗನ್‌ನಲ್ಲಿ ವಾಸ ಮಾಡುವ ಕನ್ನಡಿಗರೊಬ್ಬರನ್ನು ಫೋನಲ್ಲಿ ಮಾತಾಡಿಸುವ ಪ್ರಮೇಯ ಒಂದು ಒದಗಿತ್ತು ನನಗೆ. ''ಏನ್ ಸಾರ್, ಹೇಗಿದ್ದೀರಿ'' ಅಂತ ಅಂದ್ರೆ ಆ ಮನುಷ್ಯ,. ''ಇಷ್ಟು ವರ್ಷ ಇಲ್ಲಿದ್ರೂ ಕನ್ನಡದಲ್ಲೇ ಮಾತಾಡ್ತೀರಾ'' ಅಂತ ಇಂಗ್ಲಿಷ್‌ನಲ್ಲಿ ಉದ್ಗಾರ ತೆಗೆದರು. ಕಾಲಾನುಕ್ರಮದಲ್ಲಿ ಅವರ ಮನೆಗೆ ಹೋದಾಗ ಅವರ ಮಕ್ಕಳ ಜೊತೆ ಕನ್ನಡದಲ್ಲಿ ಮಾತಾಡಿದಾಗ ಅವರು ''ದಯವಿಟ್ಟು ಅವರನ್ನ ಕನ್ನಡದಲ್ಲಿ ಮಾತಾಡಿಸಬೇಡಿ, ಅದರಿಂದ ಅವರ ಇಂಗ್ಲಿಷ್ ಉಚ್ಚಾರಣೆ ಕೆಟ್ಟದಾಗಿ ಬಿಡುತ್ತೆ'' ಅಂತ ಅವೈಜ್ಞಾನಿಕವಾಗಿ ವಿನಂತಿಸಿದರು. ಆ ವ್ಯಕ್ತಿ ಯಶಸ್ವಿ ದಲಾಲಿ, ಅವರ ಹೆಂಡತಿ ಉತ್ತರ ಕರ್ನಾಟಕ ದಿಂದ ಬಂದ ವೈದ್ಯರು. ವಯಸ್ಸಿಗೆ ಬಂದ ಕನ್ನಡಿಗರ ಮಕ್ಕಳ ಜೊತೆ ನಾನು ಕನ್ನಡದಲ್ಲಿ ವ್ಯವಹರಿಸಲು ಪ್ರಯತ್ನ ಪಟ್ಟಾಗಲೆಲ್ಲ ಅವರೆನ್ನುವುದು, ''ಮೆಯ್ ಪೇರೆಂಟ್ಸ್ ಸ್ಪೀಕ್ ದಟ್ ಲ್ಯಾಂಗ್ವಿಜ್, ಬಟ್ ಆಯ್ ಡೋಂಟ್.''

ನಾನು ಹೇಳಿರುವುದನ್ನೆಲ್ಲ ಉಪಸಂಹಾರ - ಅಥವಾ ಸಂಹಾರ - ಮಾಡುವುದು ಹೀಗೆ. ಕನ್ನಡ ಉಳಿಯಬೇಕಾದರೆ, ನುಲಿಯಬೇಕಾದರೆ, ಅದನ್ನು ಮಾತಾಡಲು, ''ಎಲ್ಲಾದರೂ ಇರು, ಎಂತಾದರು ಇರು,'' ''ಕನ್ನಡವೇ ಸತ್ಯ,'' ಇತ್ಯಾದಿ ಸ್ಲೋಗನ್ನುಗಳಿಂದ ಏನೂ ನಡೆಯದು. ಹೊಟ್ಟೆಪಾಡು ನಡೆಸುವ ಚಿಂತೆ ಇರುವ ಜನಕ್ಕೆ ಸಾಹಿತ್ಯ ಓದಲು, ಶಿಷ್ಟ, ಗ್ರಾಂಥಿಕ ಕನ್ನಡ ಕಲಿಯುವ ಇಚ್ಛೆಯಾದರೂ, ವ್ಯವಧಾನವಾದರೂ ಇಲ್ಲ. ಕನ್ನಡದ ಹೋರಾಟ ಅದರ ಸಾಹಿತ್ಯ ಉಳಿಸುವ ಮಾತ್ರ ದರಿಗೆ ಬೀಳಬಾರದು. ಕನ್ನಡ ಅಂದರೆ ಭಾಷೆಯ ಅಂಥ ಸಂಸ್ಕೃತೀಕರಣ ಅಲ್ಲ. ಕನ್ನಡ ಭಾಷೆಯನ್ನು ಮಾತಾಡುವ ಮೂಲಕ ನಾಡಿನಲ್ಲಿ ಎಲ್ಲಾದರೂ ವ್ಯವಹರಿಸಲು ಸಾಧ್ಯ ಎನ್ನುವ ನಂಬಿಕೆ ನಮಗೆ ಬರಬೇಕು. ನಾನು ಬೆಂಗಳೂರಿನ ಅಶೋಕ ಹೋಟೆಲಿನಲ್ಲಿ ಕನ್ನಡದಲ್ಲಿ ತಿಂಡಿ ತಾ ಅಂದರೆ ಆ ಮಾಣಿ ನೀನು ಹೇಳ್ತಿರೋದು ನಂಗೆ ಅರ್ಥ ಆಗಲ್ಲ ಅಂತ ತಮಿಳ್ನಲ್ಲೊ ಇಂಗ್ಲಿಷ್ನಲ್ಲೊ ಹೇಳಬಾರದು. ನಾನು ಕನ್ನಡದ ಹೃದಯವಾದ ಹಾಸನದಲ್ಲಿ ಸರ್ಕಾರದ (ಅಲ್ಲಿರೋ ಜೈಲಿನಲ್ಲಿ ಕನ್ನಡ ಮಾತ್ರ ಅನ್ನೋ ನಂಬಿಕೆ ನನಗೆ) ಅತಿಥಿ ಗೃಹದಲ್ಲಿ ಕನ್ನಡದಲ್ಲಿ ಮಾತಾಡಲಾಗಲಿಲ್ಲ ಅಂದರೆ ನಾಚಿಕೆಗೇಡು. ತಾಯಿನಾಡಿನಲ್ಲಿ ತಾಯಿನುಡಿಗಿಂತ ಬೇರೆ ಮಾತಿಗೆ ಪ್ರಾಮುಖ್ಯ ಇರಬಾರದು. ರಾಜ್ಯದಿಂದ ಹೊರಡುವ, ರಾಜ್ಯಕ್ಕೆ ಬರುವ ವಿಮಾನಗಳ ಕಾರ್ಯಕರ್ತರು ಕನ್ನಡದಲ್ಲಿ ಮಾತಾಡಬೇಕು. ಅಂತಹ ಯಾನಗಳಲ್ಲಿ ರಾಮಕೃಷ್ಣ ಹೆಗಡೆ, ದೇವೇಗೌಡರಂತೆ ಕನ್ನಡದಲ್ಲೇ ಮಾತಾಡಬೇಕು. ಬೇರೆ ಕಡೆಯಿಂದ ಬರುವ ಭಾರತೀಯರು ನಮ್ಮ ನಡುವೆ ಬಾಳುವವರಾದರೆ ಅವರು ನಮ್ಮ ಮಾತು ಕಲಿಯಲೇಬೇಕು. ಅವರಿಗೋಸುಗವಾಗಿ ನಾವು ಅವರ ಮಾತು ಕಲಿಯುವ ದಾಕ್ಷಿಣ್ಯಕ್ಕೊಳಗಾಗಬಾರದು. ಪಕ್ಷದ ಕಾರಣಕ್ಕಾಗಿ ಕನ್ನಡ ಬಾರದ ಜನರ ಉಮೇದುವಾರಿಕೆಯನ್ನು ನಮ್ಮ ಮೇಲೆ ಹೇರಬಾರದು. ಕನ್ನಡ ಪ್ರಾಧಿಕಾರಕ್ಕೆ, ಸಂಸ್ಕೃತಿ ಇಲಾಖೆಗೆ, ಕನ್ನಡ ಅಧ್ಯಯನ ಸಂಸ್ಥೆಗಳಿಗೆ ಅವು ಕೇಳುವ ಮುನ್ನ ಸಾಕಷ್ಟು ಸಹಾಯ ನೀಡಬೇಕು. ಎಲ್ಲ ಕನ್ನಡ ಪತ್ರಿಕೆಗಳು ಒಂದು ಸರ್ವಮಾನ್ಯ (ಯೂನಿವರ್ಸಲ್) ಅಚ್ಚನ್ನು ಉಪಯೋಗಿಸುವಂತೆ ಶಾಸನ ಮಾಡಬೇಕು. ಈಗ ನಾನು ಉಪಯೋಗಿಸುತ್ತಿರುವ ಗಣಕ ಯೋಜನೆಯನ್ನು ತಯಾರಿಸಿ, ಅದಕ್ಕೆ ಹುಟ್ಟು ಹಾಕಿದ ಶ್ರೀ ಶೇಷಾದ್ರಿ ವಾಸು ಅವರ ಹೆಸರನ್ನು ಒಂದಾದರೂ ಮುಖ್ಯರಸ್ತೆಗೆ ಇಡಬೇಕು. ರಾಣಿಯ ರಸ್ತೆ, ಕನಿಂಗ್ಯಾಮನ ಬೀದಿ, ಫ್ರೇಜರ್ ಪಟ್ಟಣ, ಇತ್ಯಾದಿಗಳಿಗೆ ಕನ್ನಡ ಪ್ರಮುಖರ ಹೆಸರು ಇಡಬೇಕು. ಕಬ್ಬನ್ ಪಾರ್ಕ್‌ನ್ನು ಕನ್ನಡ ತೋಟ ಎಂದು ಕರೆಯೋಣ. ಕನ್ನಡಕ್ಕೆ ಅಪಾಯಕರವಾಗಿರುವ ಕಂಟೋನ್ಮೆಂಟ್, ಶಿವಾಜಿನಗರ, ಅಲಸೂರು ಮುಂತಾದ ಜಾಗಗಳಲ್ಲಿ ಅಲ್ಲಿರುವ ನಾಗರಿಕರಿಗೆ ಕನ್ನಡದ ಅರಿಮೆ ಹುಟ್ಟಿಸುವಂತಹ ಶಾಲೆಗಳನ್ನು ಕಟ್ಟಬೇಕು. ಇದೆಲ್ಲದರಿಂದ ಕನ್ನಡ ಮಾತು ಕೆಲಕಾಲ ಉಳಿಯಬಹುದು. ಆದರೆ ಅದರ ಭವಿಷ್ಯ ಹೊಂಬಣ್ಣದ್ದೇನಲ್ಲ. ಅದನ್ನು ಮಾತಾಡುವುದಕ್ಕೆ ಆರ್ಥಿಕ ಕಾರಣ ನಾವು ಕಲ್ಪಿಸದಿದ್ದರೆ ಅದು ಉಳಿಯಲಾರದು. ಭಾರತದ ಭಾಷಾ ಚಿತ್ರವನ್ನು ನೋಡಿದರೆ, ಇಂಗ್ಲಿಷ್ ಮತ್ತು ಹಿಂದಿಗೆ ಮಾತ್ರ ದೀರ್ಘಾಯುಷ್ಯ ಇರುವಂತೆ ಕಾಣುತ್ತದೆ. ಅದು ಕನ್ನಡಕ್ಕೆ ಲಭ್ಯವಾಗುವಂತೆ ಮಾಡುವ ಜವಾಬ್ದಾರಿ ನಮ್ಮದು.

ಬಾಲಂಗೋಚಿ : ಕಮರುಲ್ ಇಸ್ಲಾಮ್ ಮತ್ತು ಘೋರ್ಪಡೆ ಕನ್ನಡ ಮಾತಾಡಲು ಕಲಿತಿದ್ದಾರೆಯೇ ?

**ದಿನೇಶ್ ಕುಮಾರ್**

(ಲೇಖಕರು ಅಮೆರಿಕಾದ ಓಹಾಯೋ ರಾಜ್ಯದ ವಿಶ್ವವಿದ್ಯಾನಿಲಯದಲ್ಲಿ ಆಂಗ್ಲಭಾಷಾ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ.)

## ತಿರುಗುಬಾಣ

*ಈಗ ಸುಮಾರು ಮುವತ್ತು ವರ್ಷಗಳ ಹಿಂದಿನ ಮಾತು. ನಾನು ಆಗ ಮೈಸೂರಿನಲ್ಲಿದ್ದೆ. ನಮ್ಮ ಮನೆಗೆ ಸಮೀಪದಲ್ಲಿಯೇ ಒಬ್ಬ ಆಚಾರವಂತ, ಸಾಂಪ್ರದಾಯಿಕ ರಾಯರೊಬ್ಬರು ವಾಸಿಸುತ್ತಿದ್ದರು. ರೆವಿನ್ಯೂ ಇಲಾಖೆಯಲ್ಲಿ ಕೆಲಸ ಮಾಡಿದ್ದ ಅವರು ಈಗ ನಿವೃತ್ತರಾಗಿದ್ದರು. ಕುಳ್ಳಗಿದ್ದ ಅವರು ಪ್ರತಿದಿನವೂ ಬೆಳಿಗ್ಗೆ ವಿಭೂತಿ, ಕುಂಕುಮಧಾರಿಗಳಾಗಿ, ಶರ್ಟಿಲ್ಲದೆ ಶಲ್ಯವನ್ನು ಹೊದ್ದು ಶಿವನ ದೇವಸ್ಥಾನಕ್ಕೆ ಹೋಗುವಾಗ ನನಗೆ ಭೇಟಿಯಾಗುತ್ತಿದ್ದರು.*

*ಒಂದು ಬೆಳಿಗ್ಗೆ ಹತ್ತು ಗಂಟೆ ಸುಮಾರಿನಲ್ಲಿ ನಾನು ಎಲ್ಲಿಗೋ ಹೊರಟಿದ್ದೆ. ನನಗಿಂತಲೂ ಬೇಗನೆ ಹೆಜ್ಜೆ ಹಾಕುತ್ತಿದ್ದ ರಾಯರು ಹಿಂದಿನಿಂದ ಬಂದು ನನ್ನನ್ನು ಸೇರಿಕೊಂಡರು. ನಾನಿನ್ನೂ ಅವರಿಗೆ ಹೊಸ ಪರಿಚಯ.*

*''ನೀವು ಮನೆಯಲ್ಲಿ ಯಾವ ಭಾಷೆ ಮಾತನಾಡುತ್ತೀರಿ ?'' ಎಂದು ಕೇಳಿದರು.*

*''ತೆಲುಗು'' ಎಂದು ಸಹಜವಾಗಿ ಉತ್ತರಿಸಿದೆ.*

*''ನಮ್ಮಲ್ಲಿ ಬೀದಿ ಗುಡಿಸುವವರೆಲ್ಲರೂ ತೆಲುಗೇ ಮಾತನಾಡುತ್ತಾರೆ'' ಎಂದುಬಿಟ್ಟರು ಅವರು.*

*ಕನ್ನಡದ ಬಗ್ಗೆ ಅವರಿಗಿದ್ದ 'ಅಭಿಮಾನ', ತೆಲುಗಿನ ಬಗ್ಗೆ ಇದ್ದ ತಿರಸ್ಕಾರ, ಎರಡಕ್ಕಿಂತಲೂ ಹೆಚ್ಚಾಗಿ ತಮ್ಮ ಬಗ್ಗೆ ವಿನಾಕಾರಣ ಬೆಳಸಿಕೊಂಡಿದ್ದ ಸ್ವಪ್ರತಿಷ್ಠೆಗಳು ಒಮ್ಮೆಗೇ ವ್ಯಕ್ತವಾದವು ಅವರ ಮಾತಿನಲ್ಲಿ. ಕನ್ನಡವನ್ನು ಮಾತನಾಡುವುದೊಂದನ್ನು ಬಿಟ್ಟರೆ, ಕನ್ನಡದಲ್ಲಿ ಕೆಲಸವನ್ನೇನೂ ಅವರು ಮಾಡಿರಲಿಲ್ಲ. ಮನೆಯಲ್ಲಿ ಬೇರೆ ಭಾಷೆ ಮಾತನಾಡುತ್ತಿದ್ದರೂ ಕರ್ನಾಟಕದಲ್ಲಿಯೇ ಇದ್ದು 'ಕನ್ನಡಿಗ'ರಾಗಿ ಕನ್ನಡಕ್ಕಾಗಿ ದುಡಿದಿದ್ದ ಅನೇಕ ವಿದ್ವಾಂಸರ, ಸಾಹಿತಿಗಳ ಬಗ್ಗೆಯೂ ಅವರಿಗೆ ಏನೂ ಗೊತ್ತಿರಲಿಲ್ಲ. ಆದರೂ ಯಾಕಿಷ್ಟು 'ಗರ್ವ'? ಅನ್ಯಭಾಷಾ ದ್ವೇಷ ಪ್ರದರ್ಶನವೇ 'ಕನ್ನಡದ ಪ್ರೇಮ' ವೆಂದು ತಿಳಿದಂತಿತ್ತು ಆ 'ಆಷಾಢಭೂತಿ' ರಾಯರು.*

*ತಾಳ್ಮೆಯನ್ನು ಕಳೆದುಕೊಳ್ಳದೆ ನಾನು ''ಸ್ವಾಮಿ, ನಿಮ್ಮದು ಯಾವ ಮಠ ?'' ಎಂದು ಕೇಳಿದೆ.*

*''ಶೃಂಗೇರಿ ಮಠ'' ಎಂದು ಗರ್ವದಿಂದಲೇ ಉತ್ತರ ಬಂದಿತು.*

*''ಶೃಂಗೇರಿ ಮಠದ ಸ್ವಾಮಿಗಳ 'ಮನೆಮಾತು' ತೆಲುಗೇ ಅಲ್ಲವೆ?'' ಎಂದು ಕೇಳಿದೆ ನಾನು.*

*ನನ್ನ ಮಾತಿನ ಚುರುಕು ಅವರಿಗೆ ತಟ್ಟಿತು. ಮುಖ ವಿವರ್ಣವಾಗಿ, ''ನನಗೆ ಇಲ್ಲಿಯೇ ಸ್ವಲ್ಪ ಕೆಲಸವಿದೆ, ಬರುತ್ತೇನೆ'' ಎಂದು ಹೇಳಿ, ಇಲ್ಲದ ಕೆಲಸದ ನೆಪ ಒಡ್ಡಿ, ಪಕ್ಕದ ಸಂದಿಯಲ್ಲಿ ತಿರುಗಿ ಹೋಗಿಯೇಬಿಟ್ಟರು. ಪುನಃ ಯಾವಾಗಲೂ ಅವರು ನನ್ನ ಬಳಿ ಭಾಷೆಯ ಪ್ರಸ್ತಾಪವನ್ನೇ ಮಾಡಲಿಲ್ಲ.*

❖ ❖ ❖

*ಕನ್ನಡವನ್ನು ಪ್ರೀತಿಸೋಣ, ಬೆಳೆಸೋಣ. ಆದರೆ ಅದು ಅನ್ಯ ಭಾಷೆಯನ್ನು ದ್ವೇಷಿಸುವುದರಿಂದಲ್ಲ, ಕನ್ನಡಕ್ಕಾಗಿ ಶ್ರಮಿಸುವುದರಿಂದ. ಆದಕ್ಕೆ ಬೇಕು 'ಹಸನಾದ' ವ್ಯಕ್ತಿತ್ವ.*

**ಜಿ. ಶ್ರೀನಿವಾಸನ್**
೨೩೬೪, ೧ನೇ ಮಹಡಿ , ೧೨ನೇ ಮುಖ್ಯರಸ್ತೆ 'ಎ' ಬ್ಲಾಕ್,
೨ನೇ ಹಂತ, ಸುಬ್ರಹ್ಮಣ್ಯ ನಗರ , ರಾಜಾಜಿನಗರ
ಬೆಂಗಳೂರು - ೫೬೦ ೦೧೦

# ಪ್ಲ್ಯಾನ್

*ನಟೇಶ ತನ್ನ ಒಮೆಗಾ ವಾಚನ್ನು ಸ್ನಾನದ ಮನೆಯಲ್ಲಿ ಬಿಟ್ಟುಬಂದ ವಿಷಯ ಗೆಳೆಯನೊಂದಿಗೆ ಹೇಳಿಕೊಂಡ.... ಆದರೆ ಅಲ್ಲಿ ಗೋಡೆಗೂ ಕಿವಿ ಇತ್ತು. ಅಂತೂ ಮೋಸ ಹೋಗಲೇಬೇಕೆಂಬುದು ಆತನ ಹಟ......*

## ವೈ. ಎಸ್. ಗುಂಡೂರಾವ್

ವಾಹನಗಳ ವಿಪರೀತ ದಟ್ಟಣೆಯಿಂದ ಸುಸ್ತಾಗಿ ಬಂದ ನಟೇಶ ಮ್ಯಾನೇಜರಿಗೆ ಸಲಾಂ ಹೊಡೆದು, ಕ್ಯಾಷ್ ಬಾಕ್ಸ್ ತಂದು, ಕ್ಯಾಷ್ ಕೌಂಟರಿನ ಬೀಗ ತೆಗೆದು ಆಗಲೇ ಕ್ಯೂ ನಿಂತಿದ್ದವರಿಗೆ ಟೋಕನ್ ಕರೆದು ಹಣ ಕೊಡಲು ಪ್ರಾರಂಭಿಸಿದ.

''ಏನ್ ಟ್ರಾಫಿಕ್ ಜಾಮ್ ಅಂತಿಯಾ ಇವತ್ತು ಇಂಚು ಇಂಚು ವಾಹನ ನಡೆಸುವಲ್ಲಿ ಸುಸ್ತಾಗಿ ಹೋಯಿತು'' ಎಂದು ಪಕ್ಕದ ಕೌಂಟರಿನಲ್ಲಿ ಕೆಲಸ ಮಾಡುತ್ತಿದ್ದ ಸ್ವಾಮಿಯೊಡನೆ ಹೇಳಿ ಹೊರಗಡೆ ನಿಂತಿದ್ದವರ ಟೋಕನ್ ಕರೆಯುತ್ತಲೇ ಇದ್ದ.

ಮಧ್ಯದಲ್ಲೊಮ್ಮೆ ಮುಂಗೈ ನೋಡಿಕೊಂಡು ''ಅರೆ, ಇವತ್ತು ವಾಚು ಕಟ್ಟಿಕೊಂಡು ಬರೋದನ್ನೆ ಮರೆತೆನಲ್ಲಾ, ಸ್ನಾನದ ಮನೆಯಲ್ಲಿಯೇ ಇಟ್ಟು ಬಂದುಬಿಟ್ಟಿದ್ದೇನೆ. ಎಂಥ ಕೆಲಸವಾಯಿತು ? ರಮಾ ನೋಡಿದರೆ ಸರಿ. ಇಲ್ಲದಿದ್ದರೆ ಕೆಲಸದವಳೇನಾದರೂ ತೆಗೆದರೆ ?'' ಎಂದು ಪೇಚಾಡುತ್ತಾ ಸ್ವಾಮಿಯೊಡನೆ ಹೇಳಿದ.

''ಹೌದಾ? ಮತ್ತೆ ನಿನ್ನ ಒಮೆಗಾ ವಾಚಿನಿಂದ ಕರಾರುವಾಕ್ಕೂ ಟೈಂ ನೋಡೋಕ್ಕೆ ಇವತ್ತು ಆಗೋಲ್ಲವಲ್ಲ'' ಎಂದು ಸ್ವಾಮಿ ರೇಗಿಸಿದ ನಟೇಶನನ್ನು.

''ಛೇ ! ಎಂಥ ಕೆಲಸ ಮಾಡಿಬಿಟ್ಟೆ, ಅದೂ ಅಲ್ದೆ ಇವತ್ತೊಂದು ಮೀಟಿಂಗ್ ಕೂಡಾ ಇದೆ. ವಾಚಿಲ್ಲದಿದ್ರೆ ಕೈಯಲ್ಲಿ ಕೆಲ್ಸವೇ ಓಡೋಲ್ಲ, ಹಾಳಾದ್ದು ಅಭ್ಯಾಸ ಬಲ. ಇವತ್ತು ಸಾರಿ ವಾಚು ನೋಡುತ್ತಿದ್ದರೇ ಕೆಲಸ ಹೋಗೋದು'' ಎಂದು ಪೇಚಾಡತೊಡಗಿದ.

ಗಿರಾಕಿಗಳೆಲ್ಲರೂ ಆಗಲೇ ಹೊರಟುಹೋಗಿದ್ದರಿಂದ ಕೌಂಟರಿನಲ್ಲಿ ಕುಳಿತಿದ್ದ ನಟೇಶ ಮತ್ತು ಸ್ವಾಮಿಗೆ ಕೊಂಚ ಬಿಡುವು ದೊರಕಿತ್ತು.

''ಏನಯ್ಯಾ ನಟೇಶ, ಎಲ್ಲಿಗೆ ಬಂತು ನಿನ್ನ ಹೊಸ ಮನೆ ಕೆಲ್ಸ ?'' ಎಂದು ಸ್ವಾಮಿ ಕೇಳಿದಾಗ ''ಈ ಕಾರ್ಪೆಂಟರು ಗಳನ್ನು ನಂಬಿದರೆ ಅಷ್ಟೆ. ಬಂದವನು ಎರಡು ದಿವಸ ಬಹಳ ನಿಯತ್ತಿನಿಂದಲೇ ಕೆಲಸ ಮಾಡಿದ. ಎರಡು ಸಾವಿರ ಅಡ್ವಾನ್ಸ್ ಪಡೆದು ಹೋದವನ ಪತ್ತೆಯೇ ಇಲ್ಲ. ನಿನಗೆ ಯಾರಾದರೂ ಕಾರ್ಪೆಂಟರ್ ಗುರುತಿನವರಿದ್ದರೆ ಹೇಳಯ್ಯಾ'' ಎಂದ ನಟೇಶ.

ಅಷ್ಟರಲ್ಲಿ ಹಣ ಪಡೆದು ಹೋದವನೊಬ್ಬ ಐವತ್ತರ ನೋಟೊಂದು ಹರಿದಿದೆ ಎಂದು ಹಿಂದಕ್ಕೆ ಕೊಟ್ಟು ಹೊಸ ನೋಟು ಪಡೆಯಲು ಬಂದಾತ ನೋಟು ಬದಲಾಯಿಸಿಕೊಂಡು, ಇವರಿಬ್ಬರ ಸಂಭಾಷಣೆಯನ್ನು ಕೇಳಿಸಿಕೊಂಡಿದ್ದರಿಂದ ''ಸಾರ್, ನನಗೊಬ್ಬ ಕಾರ್ಪೆಂಟರ್ ಗೊತ್ತು, ತುಂಬಾ ಚೆನ್ನಾಗಿ ಕೆಲಸ ಮಾಡ್ತಾನೆ. ನೀವು ಸಂಜೆ ಕರ್ಕೊಂಡು ಬಾ ಅಂದ್ರೆ ಕರೆದು ತರುತ್ತೇನೆ. ನೀವೇನೂ ಅಡ್ವಾನ್ಸ್-ಗಿಡ್ವಾನ್ಸ್ ಕೊಡಬೇಡಿ. ಅವನು ಮಾಡಿದ ಕೆಲಸ ನೋಡಿ ವಾರದ ಕೊನೆಯಲ್ಲಿ ಹಣಕೊಟ್ಟರೆ ಸಾಕು'' ಎಂದ ಅಪರಿಚಿತ.

ಈಗ ನಟೇಶನಿಗೆ ಏಕೆ ಇವನನ್ನು ಪ್ರಯತ್ನಿಸಬಾರದು ಎನಿಸಿದಾಗ, ''ಯಾವಾಗ ಕರೆದು ತರುತ್ತೀಯಾ?'' ಎಂದ ನಟೇಶ.

''ನೀವು ಆಫೀಸಿನಿಂದ ಮನೆಗೆ ಹೋಗೋದ್ರೊಳಗೆ ನಾನು ನಿಮ್ಮ ಮನೆ ಹತ್ರ ಇದ್ದರಾಯಿತಲ್ಲ ವಿಳಾಸ ಹೇಳಿ'' ಎಂದ.

''ಸರಿ, ಹಾಗಾದ್ರೆ ಈ ವಿಳಾಸಕ್ಕೆ ಸಂಜೆ ಆರರ ನಂತರ ಕರೆದು ತಾ, ಮಾತಾಡೋಣ'' ಎಂದು ತನ್ನ ವಿಸಿಟಿಂಗ್ ಕಾರ್ಡ್ ಕೊಟ್ಟು ಕಳುಹಿಸಿ, ಸದ್ಯ ಈ ಸಮಸ್ಯೆ ಬಗೆಹರಿಯಿತಲ್ಲಾ ಎಂದು ಕೆಲಸದಲ್ಲಿ ತಲ್ಲೀನನಾದ.

* * * *

ಕಾಲಿಂಗ್ ಬೆಲ್ ಶಬ್ದಕ್ಕೆ ಎಚ್ಚತ್ತ ರಮಾ ಅಡಿಗೆ ಮನೆಯಿಂದ ಹೊರ ಬಂದು ಬಾಗಿಲು ತೆರೆಯುವ ಮುನ್ನ ಕಿಟಕಿ ಕಂಡಿಯಿಂದ ಆಚೆ ನೋಡಿದಳು. ಹೊರಗಡೆ ನಿಂತಿದ್ದವ ಅಪರಿಚಿತ. ಬಾಗಿಲು ತೆರೆಯುವುದೋ ಬೇಡವೋ ಎಂದು ಅರೆಗಳಿಗೆ ಯೋಚಿಸುತ್ತಾ ನಿಂತಳು.

''ನೋಡ್ರಿ ಅಮ್ಮಾವ್ರೆ, ನಿಮ್ಮ ಯಜಮಾನರು ಕಳ್ಸಿರೋದು. ಈ ಕಾರ್ಡ್ ಅವರೇ ಕೊಟ್ಟಿರೋದು'' ಎಂದು ನಟೇಶ ನೀಡಿದ್ದ ವಿಸಿಟಿಂಗ್ ಕಾರ್ಡನ್ನು ಕಿಟಕಿ ಮೂಲಕ ತೋರಿಸಿದನು. ಈಗ ರಮಾಗೆ ಯಾವ ಅನುಮಾನವೂ ಬಾರದೆ ಬಾಗಿಲು ತೆರೆದು, ''ಯಾಕೆ ಕಳುಹಿಸಿದ್ದಾರೆ?'' ಎಂದಳು.

''ಬ್ಯಾಂಕಿಗೆ ಹೋಗಿದ್ದೆ. ನಾನೂ ಅಲ್ಲೇ ಪಕ್ಕದಲ್ಲೇ ಕೆಲಸ ಮಾಡೋದು, ನಿಮ್ಮವರಿಗೂ ನನಗೂ ಬಹಳ ಪರಿಚಯ. ಪ್ರತಿದಿನ ಲಂಚ್ ಟೈಂನಲ್ಲಿ ನಾನು ಕೆಲ್ಸ ಮಾಡೋ ಕಡೆ ಬಂದು ನಾಲ್ಕು ಮಾತು ಆಡದಿದ್ರೆ ಅವರಿಗೆ ಸಮಾಧಾನವೇ ಇರೊಲ್ಲ. ಸಂಜೆ ಅದೆಲ್ಲೋ ಮೀಟಿಂಗ್ ಇದೆ ಅಂತಿದ್ರು'' ಎಂದ.

ಹೌದು, ಹೋಗುವಾಗ ಮೀಟಿಂಗ್ ಇರುವ ವಿಷಯ ತಿಳಿಸಿ, ಬರುವುದು ತಡವಾಗಬಹುದೆಂದು ನಟೇಶ ಹೇಳಿದ್ದು ಜ್ಞಾಪಕಕ್ಕೆ ಬಂತು.

''ವಾಚನ್ನು ಸ್ನಾನದ ಮನೆಯಲ್ಲೇ ಮರೆತು ಬಿಟ್ಟಿದ್ದಾರಂತೆ, ಈಸ್ಕೊಂಡು ಬಾ ಅಂತಾ ಈ ಕಾರ್ಡ್ ಕೊಟ್ಟು ಕಳುಹಿಸಿದ್ದಾರೆ'' ಎಂದ ಅಪರಿಚಿತ.

ತಕ್ಷಣ ಓಡಿಹೋಗಿ ನೋಡಿದ ರಮಾ ಸ್ನಾನದ ಮನೆಯಲ್ಲಿದ್ದ ವಾಚನ್ನು ಕೈಗೆ ತೆಗೆದುಕೊಂಡಳು. ಅಪರಿಚಿತ ಹೇಳಿದ್ದು ಸರಿಯಾಗಿಯೆ ಇತ್ತು. ಸ್ನಾನದ ಮನೆಯಲ್ಲಿ ಮರೆತಿರುವುದರ ಜೊತೆಗೆ ವಿಳಾಸದ ಕಾರ್ಡನ್ನೂ ಕೊಟ್ಟು ಕಳುಹಿಸಿದ್ದಾರೆ. ಇನ್ನೂ ಸಂದೇಹ ಪಡಲು ಏನಿದೆ ? ಎಂದು ಕಾರ್ಡನ್ನು ಪಡೆದು ವಾಚನ್ನು ಕೊಟ್ಟು ಕಳುಹಿಸಿದಳು.

* * * *

ಸಂಜೆ ಮೀಟಿಂಗ್ ಮುಗಿಸಿ ಸುಸ್ತಾಗಿ ಬಂದು ಕೂಡುತ್ತಿದ್ದಂತೆ ತಕ್ಷಣ ಏನೋ ಜ್ಞಾಪಿಸಿಕೊಂಡ ನಟೇಶ, ''ರಮಾ, ಸ್ನಾನದ ಮನೆಯಲ್ಲಿಯೇ ವಾಚನ್ನು ಮರೆತು ಆಫೀಸಿಗೆ ಹೊರಟು ಹೋದೆ, ತೆಗೆದಿರಿಸಿದ್ದೀಯಾ ?'' ಎಂದ.

ಕಾಫಿ ಲೋಟ ಹಿಡಿದು ನಿಂತ ರಮಾಗೆ ಎದೆ ಝುಗ್ಗೆಂದಿತು. ''ಅರೆ, ನೀವೇ ವಾಚು ಬೇಕು ಅಂತಾ ಹೇಳಿ ಕಳುಹಿಸಿದ್ದಿರಲ್ರೀ'' ಎಂದಳು ಗಾಬರಿಯಿಂದಲೇ.

''ನಾನ್ಯಾವಾಗ...... ಯಾರ ಕೈಲಿ....?'' ಎಂದ ಮತ್ತಷ್ಟು ಗಾಬರಿಯಿಂದ.

''ನೋಡಿ ಈ ಕಾರ್ಡ್ ನಿಮ್ದೆ ತಾನೇ ! ನೀವು ಕಳುಹಿಸದಿದ್ದರೆ ಅಪರಿಚಿತನಿಗೆ ಹೇಗೆ ಸಿಕ್ತಿತ್ತು ?'' ಎಂದು ಕಾರ್ಡನ್ನು ಮುಖದ ಮುಂದೆ ಹಿಡಿದಳು.

''ರಮಾ.... ರಮಾ..... ಎಂಥ ಕೆಲ್ಸವಾಗೋಯ್ತು ? ಛೇ, ಛೇ, ಛೇ.... ಕಾರ್ಪೆಂಟರನ್ನು ಕರೆದು ತರುತ್ತೇನೆಂದು ಹೇಳಿದವನಿಗೆ ಈ ವಿಳಾಸಕ್ಕೆ ಬರಲು ಹೇಳಿ ಕಾರ್ಡ್ ಕೊಟ್ಟೆ. ಆದರೆ ಮೋಸ ಮಾಡಲು ಹೇಗೆ ಉಪಯೋಗಿಸಿ ಕೊಂಡಿದ್ದಾನೆ, ಮೋಸ ಹೋದೆವಲ್ಲಾ'' ಎಂದು ಯೋಚಿಸುತ್ತಾ ಕುಳಿತ ನಟೇಶ.

ಬಹುಶಃ ಮಾತನಾಡುತ್ತಾ ಆ ಸ್ವಾಮಿಯೊಡನೆ ಹೇಳಿದ ವಿಚಾರವನ್ನು ಇವನು ಕೇಳಿಸಿಕೊಂಡು ಕಾರ್ಪೆಂಟರನ್ನು ಕರೆದು ತರುತ್ತೇನೆಂದು ನಂಬಿಸಿ ವಿಳಾಸ ಪಡೆದು ಈ ಕೃತ್ಯವೆಸಗಿರಬಹುದು ಎಂದು ಬೆಳಗಿನ ಘಟನೆಯನ್ನು

ರಮಾಗೆ ವಿವರಿಸಿದ.

''ನಾನೇನ್ರೀ ಮಾಡ್ಲಿ? ನೀವು ಕಾರ್ಡ್ ಕೊಟ್ಟಿದ್ದರಿಂದ ನಾನು ನಂಬಲೇಬೇಕಾಯಿತು. ಜೊತೆಗೆ ಹೊಸಮನೆಗೆ ಬೇಕಾದೀತೆಂದು ಎರಡು ಹೊಸ ಡೋರ್ ಲಾಕನ್ನು ಕೊಟ್ಟು ಹೋಗಿದ್ದಾನೆ'' ಎಂದಳು ರಮಾ.

''ಹೌದಾ! ಡೋರ್‌ಲಾಕ್ ಬೇಕೆಂದು ನಾನು ಹೇಳಿರಲೇ ಇಲ್ಲ. ಆದರೂ ಉಪಯೋಗಕ್ಕಾದರೂ ಬಂದೀತಲ್ಲವಾ? ಅಂತು ಒಮೆಗಾ ವಾಚ್ ಹೋಗಿ ಡೋರ್‌ಲಾಕ್ ಬಂತು ಢುಂ..... ಢುಂ... ಎನ್ನಬೇಕಷ್ಟೆ'' ಎಂದ ನಟೇಶ ವಾಚು ಕಳೆದುಕೊಂಡ ದುಃಖದಲ್ಲೂ.

''ಆದರೆ ಎಂಥ ವಾಚು ಕಳೆದುಕೊಂಡಿವು. ಬಹು ಉಪಯೋಗಿ ಅಂತಾ ಮೂರು ಸಾವಿರ ಕೊಟ್ಟು ತಗೊಂಡಿದ್ರಲ್ಲಾ'' ಎಂದಳು ರಮಾ.

ಪೊಲೀಸಿಗೆ ಕಂಪ್ಲೇಂಟ್ ಮಾಡುವುದೋ ಬಿಡುವುದೋ ಎಂದು ಹಲವಾರು ಬಾರಿ ಯೋಚಿಸಿ ಪೊಲೀಸರಿಗೆ ತಿಳಿಸುವುದೇ ಒಳಿತೆಂದು ಕಾಫಿ ಕುಡಿದು ಪೊಲೀಸ್ ಸ್ಟೇಷನ್ ಕಡೆ ನಡೆದ.

* * * *

ಮಾರನೆಯ ದಿನ ಆಫೀಸಿಗೆ ಹೋದಾಗ ಸ್ವಾಮಿಯ ಬಳಿ ನಿನ್ನೆ ನಡೆದ ಘಟನೆಯನ್ನು ಹೇಳಿದಾಗ ಅವನೂ ಕೂಡ ದಿಗ್ಮೂಢನಾದ. ''ಎಂಥ ಜನರಿರುತ್ತಾರೆ ನೋಡು. ನೀನು ಕಾರ್ಪೆಂಟರ್ ಬೇಕೆಂದು ಕೇಳಿಸಿಕೊಂಡು ಈ ಕೆಲಸ ಮಾಡಿದ್ದಾನಲ್ಲ ಅವನೆಂಥ ಚಾಲಾಕಿ ಇರಬಹುದು. ನಾವೆಷ್ಟೋ ಬುದ್ಧಿವಂತರೆಂದುಕೊಂಡರೂ ಹೇಗೆ ಬೇಸ್ತು ಬೀಳುತ್ತೇವಲ್ಲಾ'' ಎಂದು ಸ್ವಾಮಿ ಹೇಳಿದಾಗ ನಟೇಶ ತಲೆಯಾಡಿಸುತ್ತ ಕಳೆದುಕೊಂಡಿದ್ದ ವಾಚಿನ ಬಗ್ಗೆ ಯೋಚಿಸತೊಡಗಿದ.

* * * *

ಬೆಳಿಗ್ಗೆ ಬಾಗಿಲ ಕರೆಗಂಟೆ ಬಾರಿಸಿದಾಗ ಅಪರಿಚಿತನೊಬ್ಬ ನಿಂತಿದ್ದ. ನಟೇಶ ಬಾಗಿಲು ತೆರೆದಾಗ ''ನೋಡಿ ಸಾರ್, ನೀವು ವಾಚು ಕಳೆದು ಹೋಗಿದೆ ಎಂದು ಕಂಪ್ಲೇಂಟ್ ಕೊಟ್ಟಿದ್ದಿರಲ್ಲವಾ?'' ಇನ್‌ಸ್ಪೆಕ್ಟರ್ ಕರೆಯುತ್ತಿದ್ದಾರೆಂದಾಗ ನಟೇಶ ಅನುಮಾನದಿಂದಲೇ ಅವನ ಮುಖ ನೋಡಿದ.

''ಏನ್ಸಾರ್ ಹಾಗೆ ನೋಡ್ತಿರಾ? ನಾನು ಮಫ್ತಿಯಲ್ಲಿದ್ದೇನೆ ಅಷ್ಟೆ'' ಎಂದು ಕೈಲಿದ್ದ ಖಾಕಿ ಬಟ್ಟೆ ತೋರಿಸಿದ. ''ನಾನು ನೈಟ್ ಷಿಫ್ಟ್ ಮುಗಿಸಿ ಮನೆಕಡೆ ಹೊರಟಿದ್ದರಿಂದ ಹಾಗೇ ಹೋಗ್ತಾ ಹೇಳಿಬಿಡು ಎಂದು ಸಾಹೇಬರು ಹೇಳಿದರು'' ಎಂದಾಗ ನಟೇಶನಿಗೆ ನಂಬದೆ ಬೇರೆ ದಾರಿಯೇ ಇರಲಿಲ್ಲ. ಹೋಗಿ ನೋಡಿದರೆ ನಷ್ಟವೇನು ? ಹೇಗೂ ಕಂಪ್ಲೇಂಟ್ ಕೊಟ್ಟಾಗಿದೆಯಲ್ಲ ಎನಿಸಿ; ''ಸರಿ ಹೋಗಿ ಬರ್ತೇನೆ'' ಎಂದು ರಮಾಗೆ ಕೂಗಿ ಹೇಳಿ, ಅಲ್ಲೇ ತಲೆ ಕೆರೆಯುತ್ತಾ ನಿಂತವನ ಮರ್ಜಿ ತಿಳಿದು ಅವನ ಕೈಗೆ ಇಪ್ಪತ್ತು ರೂ. ಹಾಕಿದ, ಹೇಗೂ ವಾಚು ಸಿಗಬಹುದೆಂಬ ಆಸೆಯಿಂದ. ಮಫ್ತಿಯಲ್ಲಿದ್ದವ ''ಕಾಫಿಗಾಯ್ತು ಬಿಡಿ'' ಎಂದು ಅತ್ತ ನಡೆದ.

''ಇನ್‌ಸ್ಪೆಕ್ಟರ್ ಹೇಳಿ ಕಳುಹಿಸಿದ್ದಾರೆ; ಊಟವನ್ನು ಹಾಕಿಬಿಡು, ಹಾಗೆ ನೋಡಿಕೊಂಡು ಆಫೀಸಿಗೆ ಹೋಗುತ್ತೇನೆ'' ಎಂದು ಆತುರಾತುರವಾಗಿ ಊಟ ಮುಗಿಸಿ ತೆರಳಿದ ನಟೇಶ.

* * * *

ನಟೇಶ ಹೋಗಿ ಅರ್ಧ ಗಂಟೆಯಾಗಿರಬಹುದು. ಅಷ್ಟರಲ್ಲಿ ಬಾಗಿಲಿನ ಕರೆಗಂಟೆ ಬಾರಿಸಿದಾಗ ರಮಾ ಬಾಗಿಲು ತೆರೆದಳು.



''ನೋಡಿ ತಾಯಿ, ನಿಮ್ಮವರು ಕಾರ್ಪೆಂಟರನ್ನು ಕಳುಹಿಸುವಂತೆ ವಿಳಾಸದ ಕಾರ್ಡ್ ನೀಡಿದಾಗ, ಬಚ್ಚಲ ಮನೆಯಲ್ಲಿ ಮರೆತಿದ್ದಾರೆಂದು ವಾಚು ತೆಗೆದುಕೊಂಡು ಓಡಿ ಹೋಗಿದ್ದ ಆ ವಂಚಕನನ್ನು ಹಿಡಿದಿದ್ದಾರೆ'' ಎಂದ.

''ಹೌದಾ! ಇವರೂ ಪೊಲೀಸ್ ಸ್ಟೇಷನ್ನಿಗೆ ಹೋಗಿದ್ದಾರೆ'' ಎಂದಳು ರಮಾ, ಸದ್ಯ ಕಳ್ಳ ಸಿಕ್ಕಿದನಲ್ಲಾ ಎಂಬ ಉತ್ಸಾಹದಿಂದ.

''ಹೌದು ಅವರು ಸ್ಟೇಷನ್ನಿನಲ್ಲೇ ಇದ್ದಾರೆ, ಅದು ನನಗೂ ಗೊತ್ತು. ನಾನು ಅಲ್ಲಿಂದಲೇ ಬರ್‍ತಾ ಇರೋದು ತಾಯಿ, ಆದರೆ ಆ ಕಳ್ಳ ಎರಡು ಡೋರ್‌ಲಾಕ್ ಕೊಟ್ಟು ಹೋಗಿದ್ದನಂತಲ್ಲಾ ಅದನ್ನು ತರಲು ಇನ್‌ಸ್ಪೆಕ್ಟರ್ ಹೇಳಿಕಳುಹಿಸಿದ್ದಾರೆ '' ಎಂದ.

ಈಗ ರಮಾಗೆ ಯೋಚನೆಗಿಟ್ಟುಕೊಂಡಿತು. ಇವನನ್ನು ನಂಬುವುದೋ? ಬಿಡುವುದೋ?

''ಅಲ್ಲಾ ತಾಯಿ, ಯಾಕೆ ಅಷ್ಟೊಂದು ಯೋಚಿಸ್ತೀರಾ? ನಿಮ್ಗೆ ನಂಬಿಕೆ ಬರದಿದ್ರೆ ಬೇಡ ಬಿಡಿ. ನಿಮ್ಮ ಮನೆಯವರನ್ನೇ ಕಳುಹಿಸ್ತೇನೆ'' ಎಂದು ಹೊರಟವನು, ಪುನಃ ಅಲ್ಲೇ ನಿಂತು ಮೂರ್ ದಿನದಿಂದ ನಡೆದುದೆಲ್ಲವನ್ನೂ ಸಾದ್ಯಂತ ವಿವರಿಸಿದ್ದಲ್ಲದೆ ಕಳ್ಳ ಕೊಟ್ಟು ಹೋಗಿರುವ ಡೋರ್‌ಲಾಕ್ ಯಾವ ಕಂಪೆನಿಯದು ಎಂಬುದನ್ನು ಕೂಡಾ ಹೇಳಿದಾಗ, ಸುಮ್ಮನೆ ಯಾಕೆ ಯೋಚಿಸಬೇಕೆಂದು ಎರಡು ಡೋರ್‌ಲಾಕ್ ನೀಡಿ, ಅವರು ಅಲ್ಲೇ ಇದ್ದಾರಲ್ಲಾ ಎಂದು ಮತ್ತೊಮ್ಮೆ ದೃಢಪಡಿಸಿಕೊಂಡಳು.

''ಅಲ್ಲಾ ತಾಯಿ, ನಿಮ್ಮ ಮನೆಯವರ ಹೆಸರು ನಟೇಶ ಅಂತಾ ಅಲ್ವಾ'' ಎಂದಾಗ ಗುರುತಿನವನೇ ಇರಬೇಕೆಂದು ಕೊಟ್ಟು ಕಳುಹಿಸಿ ಬಾಗಿಲು ಭದ್ರಪಡಿಸಿಕೊಂಡಳು.

* * * *

ಸಂಜೆ ಮನೆಗೆ ಬಂದ ನಟೇಶ ಉಸ್ಸಪ್ಪ ಎಂದು ಕುಳಿತಾಗ ಕಾಫಿ ಕೊಟ್ಟ ರಮಾ ''ಏನಾಯ್ತು ಪೊಲೀಸ್ ಸ್ಟೇಷನ್ನಿಗೆ ಹೋಗಿದ್ದು?'' ಎಂದಳು.

''ಏನಾಗೋದು? ಕಳ್ಳ ಎಲ್ಲಿ ಸಿಕ್ತಾನೆ ? ಅಲ್ಲಿ ಹೋಗಿ ವಿಚಾರಿಸಿದರೆ ಆ ಇನ್‌ಸ್ಪೆಕ್ಟರ್ ಗದುರಿಸಿದ. 'ಏನ್ರೀ ಕಂಪ್ಲೆಂಟ್ ಕೊಟ್ಟು ಮೂರು ದಿವಸ ಕೂಡಾ ಆಗಿಲ್ಲ, ನಮಗೂ ನಮ್ಮ ಜವಾಬ್ದಾರಿ ಗೊತ್ತೂರೀ !' ಎಂದಾಗ, ಅಲ್ಲ ಸಾರ್, ಹೇಳಿ ಕಳುಹಿಸಿದ್ದಿರಲ್ಲಾ ಎಂದದ್ದಕ್ಕೆ 'ನಾನ್ಯಾರ ಕೈಲೂ ಹೇಳಿ ಕಳುಹಿಸಿಲ್ಲ' ಎಂದು ಬೈಕು ಹತ್ತಿ ಹೊರಟೇ ಹೋದರು'' ಎಂದಾಗ ರಮಾಗೆ ನಿಜಕ್ಕೂ ಎದೆ ಬಡಿತ ಜಾಸ್ತಿಯಾಯಿತು.

ಹೇಳಲೋ ಬೇಡವೋ ಎಂದು ಆಕೆ ಗಳಿಗೆ ಯೋಚಿಸಿ, ''ನೋಡ್ರೀ, ನೀವು ಬೆಳಿಗ್ಗೆ ಅತ್ತ ಹೋದ ನಂತರ ಮತ್ತೊಬ್ಬ ಬಂದ. ಅವನು ನೀವು ವಾಚು ಕಳೆದುಕೊಂಡದ್ದೂ, ಕಾರ್ಪೆಂಟರಿಗೆ ವಿಳಾಸ ಕೊಟ್ಟದ್ದು, ಪೊಲೀಸ್ ಸ್ಟೇಷನ್ನಿಗೆ ಹೋಗಿದ್ದು ಎಲ್ಲಾ ಹೇಳಿದ. ನನಗೆ ನಂಬದೆ ವಿಧಿಯೇ ಇರಲಿಲ್ಲ. ಅದೂ ಅಲ್ದೆ ಕಳ್ಳನನ್ನು ಹಿಡಿದಿದ್ದಾರೆ ಎಂದು ಹೇಳಿ ಸಾಕ್ಷಿಗಾಗಿ ಮೊನ್ನೆ ಕೊಟ್ಟಿದ್ದ ಎರಡು ಡೋರ್ ಲಾಕನ್ನು ತರಲು ಇನ್ಸ್‌ಪೆಕ್ಟರು ಹೇಳಿಕಳುಹಿಸಿದ್ದಾರೆಂದು ಪಡೆದು ಹೋದ'' ಎಂದಳು.

''ಹ್ಞಾಂ ! ಅದನ್ನೂ ಹೊಡೆದುಕೊಂಡು ಹೋದನೇ? ಛೇ, ಎಂಥಾ ಕೆಲಸವಾಯಿತು ರಮಾ. ಯಾರೋ ಒಂದು ಗುಂಪಿನವರು ನಮ್ಮನ್ನು ಹೀಗೆ ಮೋಸಗೊಳಿಸುತ್ತಿದ್ದಾರೆ, ಹುಷಾರಾಗಿರು. ಇನ್ನು ಯಾರು ಬಂದರೂ ಬಾಗಿಲು ತೆಗೆಯಬೇಡ. ನಾನೀಗಲೇ ಪೂರ್ತಾ ವಿಷಯವನ್ನು ಇನ್ಸ್‌ಪೆಕ್ಟರಿಗೆ ಹೇಳಿ ಬರುವೆ'' ಎಂದು ನಟೇಶ ಪೊಲೀಸ್ ಸ್ಟೇಷನ್ನಿನ ಕಡೆ ನಡೆದಾಗ ರಮಾ ದಿಕ್ಕು ತೋಚದೆ ಯೋಚಿಸುತ್ತಾ ಕುಳಿತಳು.

ವೈ. ಎನ್. ಗುಂಡೂರಾವ್
'ಸೌರಭ' ೬೮೩/೧೨೩೧, ೧೩ನೇ ಅಡ್ಡರಸ್ತೆ,
೨ನೇ ಹಂತ, ಗಿರಿನಗರ, ಬೆಂಗಳೂರು -೮೫

## ಸತ್ತದಕ ಅತ್ತಾಂಗ

ಅಕ್ಕಾ ; ನೀ ಸತ್ತಾಗ ಅದೇನ
ಶೃಂಗಾರ ಮಾಡಿದರವ್ವ ನಿನ್ನ ಹೆಣಕ್ಕ
ಎತ್ತರದ ಜಗಲಿ ಮಾಡಿ ಹಣೆಗೆ
ವಿಭೂತಿ ಕುಂಕಮ ಹಚ್ಚಿ
ಕೊರಳ ತುಂಬಾ ಬೊರಮಳಾ ಹಾಕಿ
ಗೂಟಕ ಬಡಿದು ಅದೆಂಗ ಕುಂದರಿಸಿದರಂದರ
ಸಾಕ್ಷಾತ ಗೌರಿ ಕಂಡಂಗ ಕಾಣತ್ತಿದ್ದೆವ್ವಾ

ಎರಡ ದಿನದ ಹಿಂದ ಬಾಳ ಝೇರ
ಆಗೇದ ಅಂತ ಮಾತಾಡಸಕ ಜೀಂವದ
ಮಾರಿ ನೋಡಾಕ ಬಂದ್ಯಾ ಖರೇ ನಿನ್ನ
ನೋಡಿ ಹೊಟ್ಯ್ಯಾಗ ಖಾರ ಕಲಿಸಿದಾಂಗಾತು
ಕೊರಗಿ ಕೊರಗಿ ಸೋತ ಹೋದ ದೇಹ ಹೊತ್ತು
ಆದರೂ ಅದೇಷ್ಟು ಚೆಂದ ಮಾತಾಡಿದ್ದಿಯಲ್ಲವ್ವಾ

ಶಿವುಗ ಸಾಕಾಗಿತ್ತಂದರ ಹೀಂಗ ಮಾಡಬಾರದಿತ್ತ
ಹಾಂಗ ಪಟ್ಟಂತ ಕಣ್ಮುಚ್ಚಿ ಒಯ್ಯ ಬೇಕಾಗಿತ್ತ
ನಿನಗ ಬಾಳ ತ್ರಾಸ ಮಾಡಿದ ಪಾಪ ಅವುನರ
ಏನಮಾಡ್ಯಾನು ಒಮ್ಮಿ ಹುಟ್ಟಿ ಬಂದ ಜೀಂವ
ಇನ್ನೊಮ್ಮಿ ಬರುದಿಲ್ಲಂತ ಎರಡ್ಮೂರು ಸಾರಿ
ಯಮನ ಬಾಗಿಲೀಗಿ ಕರಕೊಂಡು ಹೋಗಿ
ಹಾಂಗ..... ಹಾಂಗ..... ಕರಕೊಂಡು ಬಂದಾನವ್ವಾ



ಗಂಡ, ಮಕ್ಳು, ಮರಿ, ಸಂಪತ್ತು ಎಲ್ಲಾ ಇದ್ದು ಇಲ್ಲದಂಗಾತು
ನಿನ್ನ ವಿದ್ಯಾವಂತ ಮಕ್ಕಳಿಗೇರ ಗೊತ್ತಾಗಬೇಕಲ್ಲ !
ಅವಕೇನ ಗೊತ್ತಾಗತ್ತೈತಿ ಮುತ್ತು ಕೊಟ್ಟಾಕಿ ಬಂದಾಗ

ತುತ್ತು ಕೊಟ್ಟಾಕಿ ಮರತಾಳ ಎಂಬ ಲೋಕದ ಮಾತ
ಸುಳ್ಳಲ್ಲ ನೋಡು ಹೆಂಡರ ಸರಗೀಗಿ ಜೋತುಬಿದ್ದು
ಪ್ಯಾಟಿಯ ನೀರಿಗಿಳಿದಾವs
ನಿನ್ನ ಹೊಟ್ಯ್ಯಾಗ ಹುಣ್ಣು ಬೆಳದರೂ ತಾವ
ಹೊನ್ನ ಹಾಕೊಂಡು ತಿರುಗ್ಯಾಡ್ಯಾವ
ನಿನಗ ತಾಚಾರ ಮಾಡದಿದ್ದರ ಇನ್ನೂ ಬದುಕುತ್ತಿದ್ದೇನವ್ವಾ ?

ಈಗಷ್ಟೇ ಸುದ್ದಿ ಹತ್ತಿ ಓಡಿ ಬಂದಾರ
ನಿನ್ನ ಮಕ್ಳು ಮಣ್ಣ ಮಾಡಾಕ
ಹೆಣ ನೋಡಿದರ ದುಃಖ ತಡಿದುಲ್ಲಂತ ಹಾಂಗ
ಎದಿಬಾಯಿ ಬಡಕೊಂಡು ಹಾಡ ಹಾಡಾಡಿಕೊಂಡು
ಗೊಳೋ ಅಂತ ಅತ್ತಾರ
ಹತ್ತರದಾಗ ಹನ್ನೊಂದಂತು ಅಲ್ಲ;
ಸೊಸಿ ಒಂದಥರ, ಮಕ್ಳು ಒಂದಥರ, ಮಾವ ಒಂದಥರ
ಮತ್ತು ಮಂದಿ ಮಕ್ಳು ಒಂದೊಂದುಥರ
ಖರೇ ನೀ ಏನ ಹೇಳವ್ವಾ
ನೀ ಜೀಂವ ಇದ್ದಾಗ ಯ್ಯಾಮಕ್ಳು ನೋಡಲಿಲ್ಲ
ನೀ ನೆಮ್ಮದಿಯಾಗಿ ಸಾಯಲಿಲ್ಲ
ಈಗ ಹೀಂಗ ಅಳತಾರಂದರ
ನೀ ಸತ್ತದಕ ಅತ್ತಾಂಗ ಅಲ್ಲೇನವ್ವಾ

**ಎಸ್ಸಾರ್ ರಾಮರಥ**
ಯರನಾಳ, ಬ. ಬಾಗೇವಾಡಿ (ತಾಲ್ಲೂಕು)
(ಜಿಲ್ಲೆ) ಬಿಜಾಪುರ - ೫೮೬ ೧೨೨



## ನನ್ನ ಕವಿತೆ

ನಾನೊಬ್ಬ ನಿರಂತರ ಕವಿ; ನನ್ನ ಕವಿತೆಯ
ಪ್ರತಿ ಸಾಲು ಪ್ರತಿ ಶಬ್ದ ಚಿರಂತನವಾದವುಗಳು

ನನ್ನ ಪ್ರತಿ ಕವಿತೆಯ ಆಶಯವನ್ನು
ಸೂರ್ಯ ಚಂದ್ರರು ಗಮನವಿಟ್ಟು ಕೇಳುತ್ತಾರೆ
ಪಂಚಮಹಾಭೂತಗಳು ನನ್ನ ಕವಿತೆಯನ್ನು
ಅಲ್ಲಲ್ಲಿ ಗುಣಗುಣಿಸುತ್ತಾರೆ

ಕಾಡಿನ ಹಕ್ಕಿ ಮರದಲಿ ಹಾಡುವ
ಕೋಗಿಲೆ ನನ್ನ ಕವಿತೆಯನ್ನೇ ಹಾಡುತ್ತವೆ
ಸಮುದ್ರದ ಅಲೆಗಳ ಮೇಲೆ ನನ್ನ
ಕವಿತೆಯ ಸಾಲುಗಳು ಸವಾರಿ ಮಾಡುತ್ತವೆ

ಪ್ರೇಮಿಗಳ ಹೃದಯದ ಮೇಲೆ ನನ್ನ
ಕವಿತೆಯ ಸಾಲುಗಳು ಕೊರೆಯಲ್ಪಟ್ಟಿವೆ
ಅವರ ತುಟಿಗಳ ಮೇಲೆ ಕವಿತೆಯ
ನನ್ನ ಸಾಲುಗಳೇ ನಲಿಯುತ್ತಿರುತ್ತವೆ

ಪ್ರತಿ ನವವಧು ನನ್ನ ಕವಿತೆಯ
ಆಭರಣಗಳನ್ನು ತೊಟ್ಟಿದ್ದಾಳೆ ; ನಕ್ಕರೆ
ಗುಳಿ ಬೀಳುವ ಅವಳ ಕೆನ್ನೆಯಲ್ಲಿ
ನನ್ನ ಸಾವಿರ ಸಾಲುಗಳು ಅಡಗಿ ಕುಳಿತಿವೆ

ಭಿಕ್ಷುಕನ ಜೋಳಿಗೆಯಲ್ಲಿಂದ ಎದ್ದು ಬಂದ ನನ್ನ ಕವಿತೆ
ಧಾವಿಸುವ ರೈಲಿನ ಸಿಳ್ಳನ್ನು ಭೇದಿಸಿ
ಒಂದೂರಿನಿಂದ ಮತ್ತೊಂದೂರಿಗೆ ಸಮಾಂತರ
ಹಳಿಗಳಂತೆ ಅಡೆ ತಡೆಗಳಿಲ್ಲದೆ ಹೋಗಿ ಮುಟ್ಟುತ್ತದೆ

ಜಾತ್ರೆಯಲ್ಲಿ ಕಳೆದುಹೋದ ಮಗನನ್ನು ಹುಡುಕುವ
ತಾಯಿ
ಯೌವನದಲ್ಲಿ ಓಡಿ ಹೋದ ಮಗಳ ಬರವನ್ನು ಕಾದು
ಕುಳಿತ ತಂದೆಯ
ಕಣ್ಣಿಂದ ಜಾರಿ ಬೀಳುವ ಮುತ್ತಿನಂತೆ ನನ್ನ
ಕವಿತೆ ಕೆಸರಿನಲ್ಲಿ ಅರಳುವ ಕಮಲವಾಗಿ
ನೊಂದವರ ಹೃದಯಕ್ಕೆ ಹತ್ತಿರವಾಗುತ್ತದೆ

ಹಸಿದವರಿಗೆ ರೊಟ್ಟಿಯಂತೆ ಕಾಣುವ ನನ್ನ
ಕವಿತೆ ಕೇವಲ ಶಬ್ದಗಳ ನೇಯ್ಗೆಯಲ್ಲ
ಅದು ರಾಕ್ಷಸನನ್ನು ಮನುಷ್ಯನನ್ನಾಗಿ ಮಾಡುತ್ತದೆ
ಮಾನವನನ್ನು ಮಹಾ ಮಾನವನನ್ನಾಗಿ ರೂಪಿಸುತ್ತದೆ

ಪ್ರತಿ ಸಾಲುಗಳಲ್ಲಿ ಮನುಷ್ಯನ ಹಾಡನ್ನೇ ಹಾಡುವ ನನ್ನ
ಕವಿತೆ ಇಂದು ಓದಿ ನಾಳೆ ಮರೆಯುವಂತಹುದಲ್ಲ
ನನ್ನ ಕವಿತೆ ಜಗತ್ತು ಇರುವವರೆಗೂ ಇರುತ್ತದೆ
ಜಗತ್ತಿನ ಜೊತೆಗೇ ಅದು ಸಾಯುತ್ತದೆ

**ಡಾ|| ಸರಜೂ ಕಾಟ್ಕರ್**
'ಕಾವ್ಯ', ಮಹಾಂತೇಶನಗರ, ಬೆಳಗಾವಿ - ೫೯೦ ೦೧೬




**ಡಾ|| ಕೆ. ವೈ. ನಾರಾಯಣಸ್ವಾಮಿ**

ಭಾರತದಲ್ಲಿ ಎರಡು ಭಿನ್ನ ಮಾರ್ಗಗಳು ಎರಡು ಭಿನ್ನ ಸಂಸ್ಕೃತಿಗಳು ಪರಸ್ಪರ ಸಂಘರ್ಷಿಸಿದ, ಆದಾನ - ಪ್ರದಾನಕ್ಕೆ ಗುರಿಯಾದುದರ ಫಲವಾಗಿ ಅನೇಕ ಸಂಯುಕ್ತ ತತ್ತ್ವ, ರೂಪಕ, ಕಲ್ಪನೆ, ಆಚರಣೆಗಳು ಅಸ್ತಿತ್ವ ಪಡೆದುಕೊಂಡಿರುವುದು ಕಂಡುಬರುತ್ತದೆ. ಅಂತಹ ಉದಾಹರಣೆಗಳಲ್ಲಿ ಅರೆ ಮಾನವ ರೂಪದ ದೈವತಗಳು ಮುಖ್ಯವಾದವುಗಳಾಗಿವೆ (ನರಸಿಂಹ, ವರಾಹ, ಮತ್ಸ್ಯಮುಂತಾದವು). ಈ ವಿಕಲ್ಪ ರೂಪಗಳಲ್ಲಿ ಗಣಪತಿ ಬಹು ಮುಖ್ಯವಾದ ಪ್ರತಿಮೆ - ಕಲ್ಪನೆ.

ಗಣಪತಿ ಇಂದು ಜನಪದ-ಶಿಷ್ಟ ಎರಡೂ ಪರಂಪರೆಗಳಲ್ಲಿ ಅತ್ಯಂತ ಜನಪ್ರಿಯ ಮತ್ತು ಪ್ರಭಾವಶಾಲಿಯಾದ ದೇವರು. ಭಾರತೀಯ ದೇವತಾ ಕಲ್ಪನೆಗಳಲ್ಲಿ ದೇವರುಗಳ ಆಕಾರಗಳು ಪರಿಪೂರ್ಣತೆಯನ್ನು ಸಂಕೇತಿಸುವಂತೆ ಅತ್ಯಂತ ಸುಂದರ ಮೂರ್ತಿಗಳಾಗಿ ಚಿತ್ರಿತವಾಗಿವೆ. ಶಿಲ್ಪಗಳಲ್ಲಿ ಇದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತವೆ. ಆದರೆ ಗಣಪತಿಯ ಧಾರ್ಮಿಕ ಮಹತ್ವವನ್ನು, ದೇವಗಣದಲ್ಲಿ ಆತನ ಶ್ರೇಷ್ಠತೆಯನ್ನು ಗಮನಿಸಿದರೆ ಆತನ ಸ್ವರೂಪ ಕಲ್ಪನೆ ಆತನ ಅಂತಸ್ತಿಗೆ, ಮಹತ್‌ಗೆ ತಕ್ಕನಾಗಿರದ ವಿಷಯದ ಜೊತೆ ಆತನನ್ನು ಸಾಕಷ್ಟು ವಿಕಲ್ಪಗೊಳಿಸಿರುವ, ವಿಕಟಗೊಳಿಸಿರುವ ಸಂಗತಿಯನ್ನು ಒಪ್ಪಲೇಬೇಕು.

ಗಣಪತಿಯ ಈ ವಿಕಲ್ಪ ಅವತಾರವು ಆತನಿಗೆ ಹುಟ್ಟಿನಿಂದಲೇ ಬಂದದ್ದು ಎಂದಾಗಿದ್ದರೆ ಆ ಮಾತು ಬೇರೆ. ಗಣಪತಿಯ ವಿಕಾರವನ್ನು ನಿರೂಪಿಸುವ ಎಲ್ಲಾ ಪುರಾಣಗಳು ಕೂಡ ಗಣಪತಿಯ ಈ ವಿಕೃತ ರೂಪಕ್ಕೆ ಬೇರೆ ಬೇರೆ ಕಾರಣಗಳನ್ನು ಸೃಷ್ಟಿಸಿವೆ. ಗಣಪತಿಯು ಬಾಲಕನಾಗಿದ್ದಾಗ ಆತನ ಮೇಲೆ ನಡೆದಿರುವ ದಾಳಿಯನ್ನು, ಆತನ ರೂಪ ಸೃಷ್ಟಿಯಲ್ಲಿನ ಹಿಂಸೆಯನ್ನು ಅವು ದಾಖಲಿಸಿವೆ. ಈ ಉದಾಹರಣೆಗಳನ್ನು ಗಮನಿಸಿ:

೧) ವರಾಹ ಪುರಾಣವು ಗಣಪತಿಯ ಸುಂದರ ರೂಪ ಕಂಡು ಪಾರ್ವತಿ ಮುಗ್ಧಳಾದಳೆಂದು, ಆಗ ಶಿವ ಅಸೂಯೆಗೊಂಡು ಅವನನ್ನು ಡೊಳ್ಳ ಹೊಟ್ಟೆಯ ಆನೆಯ ಮುಖದವನಾಗೆಂದು ಶಪಿಸಿದನೆಂದು, ಆ ಕಾರಣದಿಂದ ಗಣಪತಿಗೆ ಈ ಸ್ವರೂಪ ಪ್ರಾಪ್ತವಾಯಿತು ಎಂದು ವಿವರಿಸುತ್ತದೆ.

೨) ಬ್ರಹ್ಮವೈವರ್ತ ಪುರಾಣದ ಪ್ರಕಾರ ಪಾರ್ವತಿ ಒಮ್ಮೆ ನೀರೆರೆದುಕೊಳ್ಳುತ್ತಿದ್ದಾಗ ಶಿವ ಒಳಹೋಗಲು ಪ್ರಯತ್ನಿಸಿದ. ಆಗ ಅವನನ್ನು ಬಾಗಿಲಲ್ಲೆ ತಡೆದ ಗಣಪತಿಯ ತಲೆಯನ್ನೇ ಕೋಪಗೊಂಡ ಶಿವ ಕತ್ತರಿಸಿದನು.

೩) ಅದೇ ಪುರಾಣದ ಮತ್ತೊಂದು ಸಂದರ್ಭದಲ್ಲಿ ಗಣಪತಿಯ ವಿಕೃತ ರೂಪಿನ ಘಟನೆಯನ್ನು ವಿವರಿಸಲಾಗಿದೆ. ಗಣಪತಿ ಹುಟ್ಟಿನ ಸಂದರ್ಭದಲ್ಲಿ ದೇವತೆಗಳೆಲ್ಲರೂ ಬಂದು ಮಗುವನ್ನು ನೋಡುತ್ತಿದ್ದಾಗ ಶನಿ ಒಬ್ಬನು ಬೇರೆ ಕಡೆ ಮುಖ ಮಾಡಿ ನಿಂತಿರಲು ತಾಯಿ ಪಾರ್ವತಿ ಮುನಿಸಿಕೊಂಡುದುದರ ಕಾರಣವಾಗಿ ಶನಿ ಮಗುವಿನ ಕಡೆ ನೋಡುತ್ತಲೇ ಮಗುವಿನ ತಲೆ ಕಡಿದುಬಿದ್ದಿತೆನ್ನುವ ಕಥೆಯೂ ಬರುತ್ತದೆ.

ಮೇಲಿನ ಈ ಮೂರು ಸಂದರ್ಭಗಳಲ್ಲಿ ಮುಖ್ಯ ಘಟನೆ ಹಸುಳೆ ಗಣಪತಿಯ ಹತ್ಯೆ ಮತ್ತು ಮೊದಲೆರಡರ ಉದಾಹರಣೆಗಳಲ್ಲಿ ಗಣಪತಿಯ ಹತ್ಯೆಯು ತಂದೆಯ ಸ್ಥಾನದಲ್ಲಿರುವ ಶಿವನಿಂದಲೇ ನಡೆಯಿತು ಎಂಬುದು ಮಹತ್ವದ್ದು. ಮೂರನೆಯದರಲ್ಲಿ ಮಾತ್ರ ಗಣಪತಿಯ ವಿಕೃತ ರೂಪಕ್ಕೆ ಶನಿಯನ್ನು ಕಾರಣವಾಗಿಸುತ್ತಿರುವುದಕ್ಕೆ ಬಲವಾದ ಕಾರಣವಿಲ್ಲದೆ ಇರುವುದರಿಂದ ಬಹುಶಃ ಶಿವನನ್ನು ಗಣಪತಿಯ ಕೊಲೆಯ ಅಪರಾಧದಿಂದ ಮುಕ್ತನನ್ನಾಗಿಸಲೆಂದು ಶನಿಯ ತಲೆಗೆ ಈ ಕೆಡಕನ್ನು ಸುತ್ತಿರುವಂತೆ ತೋರುತ್ತದೆ.

ಅತ್ಯಂತ ದಯಾಪರನೂ, ಕರುಣಾಮೂರ್ತಿಯೂ, ಪರಹಿತಕ್ಕಾಗಿ ವಿಷವನ್ನೇ ಉಂಡ ನೀಲಕಂಠನೂ ಆದ ಶಿವನು ಯಾವುದೇ ಗುರುತರವಾದ ಅಪರಾಧ ಮಾಡದ ಹಸುಳೆ ಗಣಪತಿಯನ್ನು ಕೊಂದಿರುವುದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದರೆ ಬಯಲಾಗುವ ಸತ್ಯಗಳು ದಿಗ್ಭ್ರಮೆಗೊಳಿಸುತ್ತವೆ. ಗಣಪತಿಯ ಕೊಲೆಗೆ ಮುಖ್ಯ ಕಾರಣವಸ್ತು ಗಣಪತಿಯ ಹುಟ್ಟು ಎಂಬುದು ಹೊಳೆದಾಗ, ಭಾರತೀಯ ಸಂಸ್ಕೃತಿಯಲ್ಲಿ ನಡೆದಿರುವ ಹುಟ್ಟಿಗೆ ಸಂಬಂಧಿಸಿದಂತಹ ಬೀಜ ಮತ್ತು ಕ್ಷೇತ್ರದ ವಾಗ್ವಾದದ ಮೇಲೆ ಇದು ಬೆಳಕು ಚೆಲ್ಲುತ್ತದೆ.

ಭಾರತೀಯ ತತ್ವಶಾಸ್ತ್ರದಲ್ಲಿ ಮೇರು ವಿದ್ವಾಂಸರಾದ ಡಾ|| ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು ತಮ್ಮ **ಲೋಕಾಯತ** ಕೃತಿಯಲ್ಲಿ ಗಣಪತಿಯ ಹುಟ್ಟಿನ ಸಂದರ್ಭಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ಕೊಟ್ಟಿದ್ದಾರೆ :

೧) ಪಾರ್ವತಿ ಒಮ್ಮೆ ಅಂಗರಾಗದೊಂದಿಗೆ ತನ್ನ ಮೈಕೊಳೆಯನ್ನು ಸೇರಿಸಿ ಉಂಡೆ ಮಾಡಿ ಗಂಗಾನದಿಯ ಮೂಲದಲ್ಲಿ ವಾಸ ಮಾಡುತ್ತಿದ್ದ ಮಾಲಿನಿ ಎಂಬ ರಾಕ್ಷಸಿಗೆ ಕೊಡುತ್ತಾಳೆ. ಆಕೆ ಅದನ್ನು ತಿಂದು ಗರ್ಭವತಿಯಾಗಿ ಗಂಡು ಶಿಶು ಒಂದಕ್ಕೆ ಜನ್ಮ ನೀಡುತ್ತಾಳೆ. ಪಾರ್ವತಿ ಅದನ್ನು ತನ್ನದಾಗಿಸಿಕೊಂಡು ಸಲಹುತ್ತಾಳೆ.

**"ಗೌರಿ - ಗಣೇಶ ಇವರ ತಾಯಿ ಮಗನ ಸಂಬಂಧ ತುಂಬ ಸ್ವಾರಸ್ಯವಾದದ್ದು. ಪುರಾಣ ಕಥೆಗಳಲ್ಲಿ ಗಂಡಿನ ಸಂಪರ್ಕವಿಲ್ಲದೆ ಹೆಣ್ಣಿನ ಬಯಕೆಯಿಂದಲೇ ಹುಟ್ಟಿಕೊಂಡವನು ಇವನು. ಹಾಗೆಂದೇ ಅಪಕ್ವತ, ವಿಕಟ. ಹುಟ್ಟಿದೊಡನೆ ಗಂಡು ಇವನನ್ನು ಕಂಡು ಸಿಟ್ಟಾಯಿತು, ಅಸೂಯೆಗೊಂಡಿತು. ತಾಯಿ ಬಯಕೆಯಿಂದ ಹುಟ್ಟಿದ ಮಗು ಗಂಡನೊಂದಿಗೆ ಸೆಣಸಬೇಕಾಯಿತು."**

೨) ಶಿವನ ವಾಸಸ್ಥಾನವಾದ ಸೋಮನಾಥನ ಗುಡ್ಡಗಾಡಿನಲ್ಲಿನ ಶೂದ್ರ ಸ್ತ್ರೀ ಪುರುಷರು ಒಮ್ಮೆ ದೇವತೆಗಳ ಮೇಲೆ ದಾಳಿ ಮಾಡುತ್ತಾರೆ. ಇದರಿಂದ ಕಂಗಾಲಾದ ದೇವರ ಮುಖಂಡನಾದ ಇಂದ್ರ ಶಿವನ ಮೊರೆ ಹೋಗುತ್ತಾನೆ. ಶಿವನು ಇವನ ಸಹಾಯಕ್ಕೆ ಬರುವುದಿಲ್ಲ. ಆದುದರಿಂದ ಪಾರ್ವತಿಯ ಬಳಿ ಹೋಗುತ್ತಾನೆ. ಆಗ ಪಾರ್ವತಿ ಆ ಶೂದ್ರ ಶಕ್ತಿಯನ್ನು ಧ್ವಂಸ ಮಾಡಲು ತನ್ನ ಮೈಕೊಳೆಯಿಂದ ವಿಘ್ನಕಾರಕನನ್ನು ಸೃಷ್ಟಿಸುತ್ತಾಳೆ.

ಈ ಪ್ರಕರಣಗಳಲ್ಲಿ ಪ್ರಧಾನವಾಗಿ ಗಮನಿಸಬೇಕಾದ ವಿಷಯವು ಸ್ತ್ರೀ ಪುರುಷನ ಬೀಜದ ಸಹಾಯವಿಲ್ಲದೆ ಮಗುವನ್ನು ಸೃಷ್ಟಿಸಿದ್ದೇ ಆಗಿದೆ. ವೈದಿಕ ದೇವತೆಗಳ ಕಲ್ಪನೆಯಲ್ಲಿ ಸೃಷ್ಟಿಕರ್ತ ಪುರುಷನೇ ಆಗಿದ್ದಾನೆ. ಆದರೆ ಅದಕ್ಕೆ ಅಪವಾದ ಗಣಪತಿಯ ಹುಟ್ಟು. ಗಣಪತಿಯನ್ನು ಸಹಜವಾಗಿ ಶಿವನ ಮಗ ಎಂದು ಪಾರ್ವತಿಯ (ಶಿವ ಪಾರ್ವತಿಯ ಗಂಡನೆಂಬ ಕಾರಣಕ್ಕೆ) ಸಂಬಂಧ ಕಲ್ಪಿಸುತ್ತೇವೆ. ಆದರೆ ಗಣಪತಿ ಶಿವನ ಬೀಜದಿಂದ ಹುಟ್ಟಿದವನು ಅಲ್ಲ ಎನ್ನುವುದನ್ನು ಮೇಲಿನ ಪ್ರಕರಣಗಳು ದೃಢಪಡಿಸುತ್ತವೆ. ಡಾ|| ಡಿ. ಡಿ. ಕೋಸಾಂಬಿಯವರು ಗಣಪತಿ ಶಿವನ ಮಗನಲ್ಲ ಎಂಬ ಸಂಗತಿಯನ್ನೂ, ಗಣಪತಿ ಮತ್ತು ಸ್ಕಂದ ಕುಮಾರ ಇವರ ಹುಟ್ಟಿನ ಕಲ್ಪನೆಗಳನ್ನೂ ವಿವರಿಸಿದ್ದಾರೆ. ಗಣಪತಿಯು ಪಾರ್ವತಿಯ ದೇಹದಿಂದ ಸೃಷ್ಟಿಯಾದವನು, ಶಿವನ ಬೀಜದಿಂದ ಅಲ್ಲ. ಆದ್ದರಿಂದಲೇ ಶಿವನು ಗಣಪತಿಯ ತಲೆ ಕಡಿದು ನಂತರ ಆನೆಯ ತಲೆಯಿಂದ ಮರುಜೀವ ಕೊಟ್ಟದ್ದು ಪುರಾಣದಲ್ಲಿ ದಾಖಲಾಗಿದೆ. ಅದೇ ರೀತಿ ಸ್ಕಂದಕುಮಾರನು ಶಿವನ ವೀರ್ಯದಿಂದ ಹುಟ್ಟುತ್ತಾನೆ ಹೊರತು ಪಾರ್ವತಿಯ ಗರ್ಭದಿಂದ ಅಲ್ಲ.

ಗಣಪತಿಯ ಹುಟ್ಟಿಗೂ ಶಿವನಿಗೂ ಯಾವುದೇ ಸಂಬಂಧವಿಲ್ಲ, ಹಾಗೆಯೇ ಸ್ಕಂದನಿಗೂ ಪಾರ್ವತಿಗೂ ಯಾವುದೇ ಸಂಬಂಧವಿಲ್ಲ ಮತ್ತು ತನ್ನ ಮಗನಲ್ಲದ ಕಾರಣಕ್ಕೆ ಶಿವನು ಗಣಪತಿಯ ತಲೆ ಕಡಿದ ಸಂಗತಿಯನ್ನು ಅವರು ಸೂಚಿಸಿದ್ದಾರೆ. ಗಣಪತಿಯ ರೂಪ ವಿಕಾರಗೊಳ್ಳಲು ಅವನು ಸ್ತ್ರೀಯಿಂದಲೇ ಸೃಷ್ಟಿಗೊಂಡವನು ಎಂಬ ಸಂಗತಿಯೇ ಕಾರಣವಾಗಿರುವುದನ್ನು, ಗಣಪತಿಯ ಕೊಲೆ, ಮರು ಹುಟ್ಟುಗಳ ಸಂಘರ್ಷವನ್ನು ಡಾ|| ಎಸ್. ಕೆ. ರಾಮಚಂದ್ರರಾವ್ ಹೀಗೆ ಹೇಳುತ್ತಾರೆ :

"ಗೌರಿ - ಗಣೇಶ ಇವರ ತಾಯಿ ಮಗನ ಸಂಬಂಧ ತುಂಬ ಸ್ವಾರಸ್ಯವಾದದ್ದು. ಪುರಾಣ ಕಥೆಗಳಲ್ಲಿ ಗಂಡಿನ ಸಂಪರ್ಕವಿಲ್ಲದೆ ಹೆಣ್ಣಿನ ಬಯಕೆಯಿಂದಲೇ ಹುಟ್ಟಿಕೊಂಡವನು ಇವನು. ಹಾಗೆಂದೇ ಅಪಕ್ವತ, ವಿಕಟ. ಹುಟ್ಟಿದೊಡನೆ ಗಂಡು ಇವನನ್ನು ಕಂಡು ಸಿಟ್ಟಾಯಿತು, ಅಸೂಯೆಗೊಂಡಿತು. ತಾಯಿ ಬಯಕೆಯಿಂದ ಹುಟ್ಟಿದ ಮಗು ಗಂಡನೊಂದಿಗೆ ಸೆಣಸಬೇಕಾಯಿತು."

ಗಣಪತಿಯ ಹುಟ್ಟನ್ನು, ಆ ಮೂಲಕ ಸ್ತ್ರೀ ಸೃಷ್ಟಿ ಶಕ್ತಿಯನ್ನು , ಶಿವನ ಮೂಲಕ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಒಪ್ಪದಿರುವ ಸೂಕ್ಷ್ಮತೆಯನ್ನು ಪ್ರೊ॥ ರಾಮಚಂದ್ರ ರಾವ್ ಗುರುತಿಸಿದ್ದಾರೆ. ಇಲ್ಲಿಯವರೆಗೆ ಮೇಲೆ ದಾಖಲಿಸಿರುವ ವಿಷಯಗಳಲ್ಲಿ ವಿದ್ವಾಂಸರು ಶಿವನ ಸಿಟ್ಟಿಗೆ, ಅಸಹನೆಗೆ ಕಾರಣ ಹುಡುಕುವಾಗ, ಪುರಾಣಗಳು ಕಟ್ಟಿಕೊಡುತ್ತಿರುವ ವಿವರಗಳ ಹಿಂದೆ ಸ್ಥಾಯಿ ರೂಪದಲ್ಲಿ ಕ್ರಿಯಾತ್ಮಕವಾಗಿರುವ ಹುಟ್ಟಿನ ಅಧಿಕೃತತೆಯ ಮೌಲ್ಯವನ್ನು ಪರಿಗಣಿಸಿಲ್ಲ. ಯಾವ ಬಗೆಯ ಹುಟ್ಟಿಗೆ ಸಮಾಜದ ಮಾನ್ಯತೆ, ಅಧಿಕೃತತೆ ಇದೆ, ಇತ್ತು ಎನ್ನುವುದನ್ನು ಮುಖ್ಯ ಕಾರಣಸಾಮಗ್ರಿಯಾಗಿ ಸ್ವೀಕರಿಸಿದ್ದರೆ ಈ ಸಮಸ್ಯೆಗೆ ಮತ್ತೊಂದು ಆಯಾಮವು ಪ್ರಾಪ್ತವಾಗುತ್ತಿತ್ತು. ಶಿವನ ಸಿಟ್ಟಿಗೆ, ಅಸಹನೆಗೆ ಸೂಕ್ತ ಕಾರಣವೂ ದೊರೆಯುತ್ತಿತ್ತು.

ದೇವಿಪ್ರಸಾದರು ವಿವರಿಸುವ ಕೃಷಿ - ಬೇಟೆ ಕಸುಬುಗಳು ಮತ್ತು ಗೌರಿ - ಗಣೇಶರ ಸಂಬಂಧವು ಕೂಡ ಈ ಸಮಸ್ಯೆಯನ್ನು ಹುಟ್ಟಿನ ಅಧಿಕೃತತೆಯ ನೆಲೆಯಿಂದ ಫಲವಂತಿಕೆಯ ಸಂದುಕಟ್ಟಿಗೆ, ಆರ್ಯಪೂರ್ವ ಸಮಾಜದ ಸಂದರ್ಭಕ್ಕೆ ಅನ್ವಯಿಸಿ ವಿಶ್ಲೇಷಣೆ ನಡೆಸುತ್ತದೆ.

ಗಣಪತಿಯ ಕೊಲೆಗೆ ಸಾಕಷ್ಟು ಸಮರ್ಥವಾದ ಆಧಾರಗಳಿಂದ ಶಿವನು ಗಣಪತಿಯ ಹುಟ್ಟನ್ನು ಒಪ್ಪಿಕೊಳ್ಳದೇಹೋದ ಕಾರಣದಿಂದ ವಿವರಿಸಿದ್ದಾರೆ. ಆದರೆ ಗಣಪತಿಯ ಮರುಹುಟ್ಟು (ಶಿವನ ಕೃಪೆಯಿಂದ) ಮತ್ತು ವಿಕಾರ ಸ್ವರೂಪದ ಕಲ್ಪನೆಯಲ್ಲಿ ಹುದುಗಿರುವ ಧಾರ್ಮಿಕ ಹಿಂಸೆಯನ್ನು ಗಮನಿಸಿಲ್ಲವೆಂದೇ ಹೇಳಬೇಕು. ಗಣಪತಿಯ ಮರು ಹುಟ್ಟಿನ ಹಿಂದೆ ಕೆಲಸ ಮಾಡುತ್ತಿರುವ ಶಿಷ್ಟ ಅಥವಾ ವೈದಿಕ ಮನೋಧರ್ಮವನ್ನು, ಜಾನಪದ ಕಥನಗಳಲ್ಲಿ, ಸಂಸ್ಕೃತಿಯಲ್ಲಿ ಮಂಡಿತವಾಗುವ ಹುಟ್ಟಿನ ಶ್ರೇಷ್ಠತೆಯ ಮೌಲ್ಯಗಳ ಪಕ್ಕದಲ್ಲಿ ಇರಿಸಿ ಅಧ್ಯಯನ ನಡೆಸಬೇಕು. ಆಗ ಮಾತ್ರ ಗಣಪತಿಯ ವಿರೂಪ ಕಲ್ಪನೆಯ ಹಿಂದೆ ಭಾರತೀಯ ಸಮಾಜದಲ್ಲಿ ಸಂಕರಗಳಿಂದ ಉಂಟಾಗಿರುವ ಹಿಂಸೆಯನ್ನು ರೂಪಕವಾಗಿ ಕಟ್ಟಿಕೊಟ್ಟಂತೆ ಭಾಸವಾಗುತ್ತದೆ.

ಹುಟ್ಟಿಗೆ, ಜೀವಸೃಷ್ಟಿಗೆ, ಗಂಡಿನ ಬೀಜವೇ ಕಾರಣ ಸಾಮಗ್ರಿ. ಸ್ತ್ರೀ ಕೇವಲ ಆ ಜೀವ ಧಾತುವನ್ನು ಪೋಷಿಸುವ ಕ್ಷೇತ್ರ ಮಾತ್ರ. ಸೃಷ್ಟಿಕ್ರಿಯೆಯಲ್ಲಿ ಸ್ತ್ರೀಯ ಪಾತ್ರ ಕೇವಲ ಆನುಷಂಗಿಕವಾದದ್ದು ಎನ್ನುವ ತತ್ವವನ್ನು ಗಣಪತಿಯ ಹುಟ್ಟು ಧಿಕ್ಕರಿಸಿದ್ದೇ ಆತನ ವಿಕೃತ ರೂಪಕ್ಕೆ ಕಾರಣವಾಗಿದೆ. ಅಲ್ಲದೆ ಪುರುಷನಿಗೆ ಸ್ತ್ರೀ ಯಾವತ್ತೂ ಅಧೀನಳು ಎಂದು ನಿರ್ಣಯಿಸಿರುವ ಸಮಾಜದಲ್ಲಿ ಹೆಂಡತಿಯನ್ನು ಸ್ನಾನ ಗೃಹದಲ್ಲಿ ಭೇಟಿಯಾಗುವುದನ್ನು ತಡೆಯುವ ಮೂಲಕ ಮಧ್ಯಪ್ರವೇಶ ಮಾಡಿದ ಅನ್ಯಪುರುಷ (ಬಾಲಕನೇ ಆಗಿದ್ದರೂ)ನನ್ನು ಸಂಹರಿಸುವುದು - ಮುಖ್ಯವಾಗಿ ಪುರುಷ ಶಕ್ತಿಯನ್ನು, ಯಜಮಾನಿಕೆಯನ್ನು ಕಾಪಾಡಿಕೊಳ್ಳುವುದೇ ಆಗಿರುವುದಲ್ಲದೆ ಅಂತಹ ಕಂಟಕವನ್ನು ನಿವಾರಿಸಿಕೊಳ್ಳು ವುದೂ ಕೂಡ ಆಗಿದೆ. ಗಣಪತಿ - ಗೌರಿ ಇಬ್ಬರೂ ಮೂಲತಃ ಶಿಷ್ಟ ಪರಂಪರೆಯ ದೈವಗಳಲ್ಲ, ಬದಲಾಗಿ ಕೃಷಿದೇವತೆಗಳು ಎನ್ನುವುದನ್ನು **ಲೋಕಾಯತ**ದಲ್ಲಿ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ಸಿದ್ಧಪಡಿಸಿ ತೋರಿಸಿದ್ದಾರೆ. ಗೌರಿ - ಶಕ್ತಿಯ ಪ್ರತಿರೂಪ, ಸೃಷ್ಟಿಕರ್ತೆ. ಆಕೆಯನ್ನು ವೈದಿಕರು ಜಾಣ್ಮೆಯಿಂದ ಶಿವನ ಹೆಂಡತಿಯಾಗಿಸಿ, ಶಿವನ/ಪುರುಷನ ಅಧೀನವಾಗಿಸಿದ್ದು ಧಾರ್ಮಿಕ ರಾಜಕಾರಣದ ಕುತಂತ್ರವೇ ಆಗಿದೆ. ಪಾರ್ವತಿಯನ್ನು ಶಿವನು ಹೆಂಡತಿಯಾಗಿಸಿಕೊಂಡು ಪಿತೃ ಕುಟುಂಬ ವ್ಯವಸ್ಥೆಯ ಮೂಲಕ ಅಧೀನಪಡಿಸಿ ಕೊಂಡರೂ, ಸ್ತ್ರೀ ಸೃಷ್ಟಿ ಸಾಮರ್ಥ್ಯದ ಸಂಕೇತವಾಗಿ ಗಣಪತಿ ಅವರ ಕಣ್ಮುಂದೆಯೇ ಇದ್ದ. ಆತ ಗಂಡಿನ ಬೀಜದ ಸಹಾಯವಿಲ್ಲದೇ ಜೀವ ಸೃಷ್ಟಿಯಾಗುವ ಸಾಧ್ಯತೆಯನ್ನು ಲೋಕಕ್ಕೆ ಸಾರಿ ಹೇಳುವ ಸಂಕೇತವಾಗಿದ್ದ. ಆದ್ದರಿಂದಲೇ



*ಚಿತ್ರ : ಡಿ. ಎನ್. ಚೌಗಲೆ*

ಗಣಪತಿ ವೈದಿಕರ ದಮನಕ್ಕೆ ಗುರಿಯಾದ. ಆತನನ್ನು ಸಂಪೂರ್ಣವಾಗಿ ನಾಶಪಡಿಸುವ ಸಾಧ್ಯತೆ ವೈದಿಕರಿಗೆ ಇರಲಿಲ್ಲ. ಆ ವೇಳೆಗಾಗಲೇ ಗಣಪತಿ ಜನ ಸಮೂಹಗಳ ದೇವತೆಯಾಗಿ ಪ್ರಸಿದ್ಧನಾಗಿದ್ದ. ಆದ್ದರಿಂದ ಅಂತಹ ಪ್ರಯತ್ನವನ್ನು ಸಮಾಜದ ಬಹುಸಂಖ್ಯಾತರಾದ ಶ್ರಮಿಕ/ಕೃಷಿ ಸಮುದಾಯಗಳು ಒಪ್ಪುತ್ತಿರಲಿಲ್ಲ. ಈ ದ್ವಂದ್ವದ - ಸಂಘರ್ಷದ - ಸಮನ್ವಯದ ಫಲವೇ ಆನೆಯ ಮುಖದ, ಕಣಜಗಾತ್ರದ ಹೊಟ್ಟೆಯ, ಪುಟ್ಟ ಇಲಿ ವಾಹನದ ಗಣಪತಿಯ ಚಿತ್ರ. ಗಂಡಿನ ಸಹಯೋಗವಿಲ್ಲದ ಹುಟ್ಟು ಅಪರಿಪೂರ್ಣ, ಅನೈತಿಕ ಮತ್ತು ನಿಯಮಬಾಹಿರ ಎಂದು ಲೋಕಕ್ಕೆ ಸಾರಿಹೇಳುವ ಹಾಗೆ, ಸುಂದರ ಬಾಲಕನಾದ ಗಣಪತಿಯ ರೂಪವನ್ನು ಅಸಹ್ಯಪಡುವಂಥ ವಿಕಟ, ವಿಕೃತ ರೂಪಕ್ಕೆ ಆರ್ಯ ಸಂಸ್ಕೃತಿಯು ಮಾರ್ಪಡಿಸಿತು (ದೇವತೆಗಳ ರೂಪಾಂತರಗಳು ಭಾರತೀಯ ಸಂಸ್ಕೃತಿಯಲ್ಲಿ ಒಂದು ಮುಖ್ಯ ಪ್ರಕ್ರಿಯೆಯಾಗಿ ನಡೆದಿರುವುದು ಮಹಾ ಪ್ರಬಂಧವೊಂದರ ಅಧ್ಯಯನಕ್ಕೆ ಯೋಗ್ಯ ವಸ್ತುವಾಗಿದೆ). ಅಷ್ಟೇ ಅಲ್ಲ, ಗರ್ಭ/ಕ್ಷೇತ್ರ ರಹಿತನಾಗಿ ಕೇವಲ ಶಿವನ ವೀರ್ಯದಿಂದ ಹುಟ್ಟಿದ ಸ್ಕಂದನಿಗೆ ಮಾತ್ರ ಪೂರ್ಣತೆಯ ಸುಂದರ ರೂಪವನ್ನು ಕಲ್ಪಿಸಿ, ಆ ಮೂಲಕ ಬೀಜದ ಶ್ರೇಷ್ಠತೆಯನ್ನು ವೈದಿಕ ಪರಂಪರೆ ಕಾಪಾಡಿಕೊಂಡಿತು. ಆದರೆ ಈ ರೂಪಾಂತರ ನಡೆಯುವ ಮುನ್ನವೇ ಗಣಪತಿ - ಗೌರಿ ದೇವತೆಗಳು ಜನಸಂಸ್ಕೃತಿಯಲ್ಲಿ ಪಡೆದಿದ್ದ ದೈವಿಕ ಸ್ಥಾನಕ್ಕೇನೂ ಚ್ಯುತಿ ಬರಲಿಲ್ಲ. ಗಣಪತಿಯ ರೂಪ ಕೆಡಿಸುವ ಮೂಲಕ ಜನರನ್ನು ಆತನಿಂದ ವಿಮುಖಿಯಾಗಿಸಲು ವೈದಿಕ ಪರಂಪರೆ ಪ್ರಯತ್ನಿಸಿದರೂ ಯಶಸ್ಸು ಸಾಧಿಸಲಾರದೆ, ಗಣಪತಿ ಮತ್ತಷ್ಟು ಪ್ರಬಲ ದೈವತವಾಗಿ ನೆಲೆಗೊಂಡಿರುವು ದನ್ನು ಕಾಣಬಹುದು. ಅಲ್ಲದೆ ಕಾಲಾಂತರದಲ್ಲಿ ವೈದಿಕ ಪರಂಪರೆಯೇ ಅನಿವಾರ್ಯವಾಗಿ ಗಣಪತಿಯನ್ನು ತಮ್ಮ ದೈವಗಳ ಮುಖ್ಯಸ್ಥನನ್ನಾಗಿ ಮಾಡಿಕೊಂಡಿದ್ದೂ ಅಲ್ಲದೆ, ಪ್ರಥಮ ಪೂಜೆಯ ಹಕ್ಕನ್ನು ನೀಡುವಂತಾದದ್ದು ಈ ಎರಡು ಪರಂಪರೆಗಳ ನಡುವೆ ನಡೆದಿರುವ ಮೇಲಾಟಗಳಿಗೆ ಸಾಕ್ಷಿಯಾಗಿ ನಿಂತಿದೆ.

ರೂಪ ಭಗ್ನತೆಯ ಮೂಲಕ ಗಣಪತಿಯ ಹುಟ್ಟನ್ನು ಸಾಂಕೇತಿಕವಾಗಿ ಸಮಾಜದಿಂದ ಬಹಿಷ್ಕರಿಸಲು ಪ್ರಧಾನ ಸಂಸ್ಕೃತಿ ಪ್ರಯತ್ನಿಸಿದಷ್ಟೂ ಜನಪದರ ಜೀವವು ಆ ವಿಕೃತ ಕಲ್ಪನೆಯನ್ನೇ ಹೆಚ್ಚು ಹೆಚ್ಚು ಒಪ್ಪಿಕೊಂಡಿತು. ಬಹುಶಃ ಇದಕ್ಕೆ ಕಾರಣ ಜನಪದರ ಜೀವನದರ್ಶನವೇ ಆಗಿದೆ. ಜನಪದ ರಲ್ಲಿ ವಿಕೃತ ಕಲ್ಪನೆ ರೂಪ ಭಗ್ನತೆಗಿಂತ ಭಿನ್ನವಾದದ್ದು. ಪ್ರಕೃತಿಯಲ್ಲಿನ ಬೆಟ್ಟ, ಗುಡ್ಡ, ಪ್ರಾಣಿ, ಪಕ್ಷಿ ಎಲ್ಲಾ ದೈವ ಸ್ವರೂಪದವೇ ಆಗಿವೆ. ಇವೆಲ್ಲವೂ ಪೂಜಾರ್ಹವೇ. **ಅವರಲ್ಲಿ ಸುಂದರವಾದದ್ದು ಎನ್ನುವ ಕಲ್ಪನೆ ಅದು ಬದುಕಿಗೆ ಅನುವಾಗುವ ಬಗೆಯದೇ ಹೊರತು ಕೇವಲ ಬಾಹ್ಯ ರೂಪದ, ಲಕ್ಷಣಾತ್ಮಕವಾದ ನೆಲೆಯದಲ್ಲ.** ಆದ್ದರಿಂದಲೇ ಆನೆಯ ಮುಖದ ಗಣಪತಿ ಪ್ರಕೃತಿಯ ಸಂಕೇತವಾಗಿ ಇಡೀ ನಿಸರ್ಗವೇ ಮೂರ್ತೀಭವಿಸಿದಂತೆ, ಆತನ ವಿಕೃತಿಯ, ವಿಕಟ ರೂಪವೂ ಗಾಢ ಆರಾಧನೆಗೆ ಭಾಜನವಾಯಿತು.

ಇಂದಿಗೂ ಗಣೇಶನನ್ನು ಮಣ್ಣಿನಿಂದಲೇ ತಯಾರಿಸಿ, ಸುಡದೆ, ಪೂಜಿಸಿ ನಂತರ ಜಲಧಿಯಲ್ಲಿ ವಿಸರ್ಜಿಸುವ ಆಚರಣೆಯಲ್ಲಿ ಪ್ರಕೃತಿ ಮತ್ತು ಗಣಪತಿಯನ್ನು ಏಕವಾಗಿಸಿಕೊಂಡಿರುವ ತತ್ವವೊಂದು ಮೈಪಡೆದಿದೆ. ವೈದಿಕ ಪರಂಪರೆ ರಾಜ್ಯ, ಅಧಿಕಾರಗಳಿಂದ ವಿರೂಪಗೊಳಿಸುವಲ್ಲಿ ಸಫಲವಾಯಿತೇ ಹೊರತು ಗಣಪತಿಯನ್ನು ಸಮಾಜದಿಂದ (ಜನಪದ ಸಮೂಹದಿಂದ) ಉಚ್ಚಾಟಿಸಲು ಸಾಧ್ಯವಾಗ ಲಿಲ್ಲ. ಅನೇಕ ಜಾನಪದ ಕಥನ, ಕಲೆ, ಪರಿಕರಗಳಲ್ಲಿ ವೈದಿಕ ಪರಂಪರೆ ಮತ್ತು ಇತ್ತೀಚಿನ ವಸಾಹತು ಪರಂಪರೆಗಳು ಹೇರಿದ ಮೌಲ್ಯಗಳು, ಪ್ರಶ್ನಿಸಲ್ಪಟ್ಟಿರುವ, ಸಾರಾಸಗಟಾಗಿ ತಿರಸ್ಕರಿಸಲ್ಪಟ್ಟಿರುವ ನೆಲೆಗಳನ್ನು ಗುರುತಿಸಬಹುದು. ಜನಪದ ಸಂಸ್ಕೃತಿಯು ಹೊರಗಿನ ಪ್ರತಿಯೊಂದು ವಿಚಾರ ವನ್ನೂ ಒಪ್ಪಿಕೊಳ್ಳಲಿಲ್ಲ ಎನ್ನುವುದು ಈ ಮಾತಿನ ಅರ್ಥವಲ್ಲ. ಅನೇಕ ಸಂಗತಿಗಳಲ್ಲಿ ಕೆಲವನ್ನು ಒತ್ತಾಯದಿಂದ ಪೂರ್ಣ ಒಪ್ಪಿಕೊಂಡಿದ್ದರೂ ತನ್ನ ಅನನ್ಯತೆಯ ಲಕ್ಷಣಗಳನ್ನು ಬಿಟ್ಟು ಕೊಟ್ಟಿಲ್ಲದಿರುವುದು ಅದರ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಗಣಪತಿಯ ಹುಟ್ಟಿನ ವಿಕೃತಿ ಮತ್ತು ಗಣಪತಿಯ ಜನಪ್ರಿಯತೆಯು ಸಂಸ್ಕೃತಿಯ ಸಂಕರಗಳಲ್ಲಿ ಹುದುಗಿರುವ ಹಿಂಸೆಯ ನೆಲೆಯನ್ನು ತೋರುವ ಅನನ್ಯ ಉದಾಹರಣೆಯಾಗಿದೆ.

ಡಾ॥ ಕೆ. ವೈ. ನಾರಾಯಣಸ್ವಾಮಿ
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಂತಾಮಣಿ

# ಹುಲುಮನುಜರೂ, ಚಿತ್ತೋಕ್ತಿಗಳೂ...

ಜನಸಾಮಾನ್ಯರ ಪ್ರತಿನಿಧಿಯಂತಿರುವ ಅರಿಷಡ್ವರ್ಗಗಳಿಂದ ಕೂಡಿದ ಹುಲು ಮಾನವಳಾದ ನನ್ನಲ್ಲಿ ಕೆಲವೊಮ್ಮೆ ಆದರ್ಶದ ಭೂತ ಆವಾಹನೆಯಾಗುವುದುಂಟು. ಅಂಥಾ ಹೊತ್ತಿನಲ್ಲಿ 'ಹೊಸತೊಂದು ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡು ಉಳಿದ ಬದುಕನ್ನಾದರೂ ಸಾರ್ಥಕಪಡಿಸಿಕೊಳ್ಳಬೇಕು' ಎನ್ನುವ ಸದಸದ್ವಿವೇಕದ ವಾಣಿಗೆ ಕಿವಿಗೊಟ್ಟು ನಾನು ರೋಮಾಂಚಿತಳಾಗುತ್ತೇನೆ. ಹೊಸ ವರ್ಷದ ಆರಂಭದಲ್ಲಿ ಹೊಸ ಪ್ರತಿಜ್ಞೆ ಮಾಡುವವರಂತೆ ನನ್ನಲ್ಲೂ ನಾನು ಕೈಗೊಂಡಿರುವ ತೀರ್ಮಾನಕ್ಕೆ ಜನ್ಮ ಇರುವವರೆಗೂ ಬದ್ಧಳಾಗಿರುತ್ತೇನೆ ಎನ್ನುವ ಹುಸಿನಂಬಿಕೆ ಇರುತ್ತದೆ. ಇದಕ್ಕೆಲ್ಲಾ ಪ್ರೇರೇಪಣೆ ಏನು ಎನ್ನುವುದನ್ನು ಒಂದೆರಡು ವಾಕ್ಯಗಳಲ್ಲಿ ಸೂಕ್ಷ್ಮವಾಗಿ ಹೇಳಿಬಿಡುತ್ತೇನೆ. ಇಲ್ಲದಿದ್ದರೆ ಇದ್ದಕ್ಕಿದ್ದ ಹಾಗೆ ಭೂತ ಬಾಧೆಯಿಂದ ಪೀಡಿತಳಾಗುವ ನನ್ನ ನಡೆವಳಿಕೆಯ ಬಗ್ಗೆ ಸಹೃದಯರಾದ ತಮಗೆ ಸಂಶಯ ಉಂಟಾದೀತು. ಓದುತ್ತಿರುವ ಪುಸ್ತಕದ ಯಾವುದೋ ವಾಕ್ಯ ಅಥವಾ ನೋಡುತ್ತಿರುವ ದೂರದರ್ಶನದ ಧಾರಾವಾಹಿಯ ಯಾರೋ ಒಬ್ಬರ ಪಾತ್ರ ನನ್ನ ಭಾವನೆಗಳನ್ನು ಕಲಕಿ, ನನ್ನ ಮೇಲೆ ಗಾಢವಾದ ಪ್ರಭಾವ ಬೀರಿ, ನನ್ನ ದೌರ್ಬಲ್ಯವನ್ನು ಬೆಟ್ಟು ಮಾಡಿ ತೋರಿಸುವಾಗ ನನ್ನ ಬಗ್ಗೆ ನನಗೇ ನಾಚಿಕೆಯಾಗುತ್ತದೆ. ಅಥವಾ ಅಷ್ಟೂ ಬೇಡ, ವಿರಾಮವಾಗಿರುವಾಗ ಇದ್ದಕ್ಕಿದ್ದಂತೆ ನಾನಿರುವ ಸಮಾಜದೊಳಗೆ ನನ್ನ ನಡೆವಳಿಕೆಯ ಬಗ್ಗೆ ನನ್ನೊಳಗೇ ಒಂದು ಮಾನಸಿಕ ವಿಶ್ಲೇಷಣೆ ನಡೆದು ನಾನು ತಪ್ಪಿತಸ್ಥಳೆಂದು ತೀರ್ಮಾನವೂ ಬಂದುಬಿಡುತ್ತದೆ. ''ಒಂದು ಮುಗುಳು ನಗೆ, ಎರಡು ಒಳ್ಳೆಯ ಮಾತು, ಅಷ್ಟಕ್ಕೂ ಬರವೇ? ಇದರಿಂದ ನಾನು ಕಳೆದುಕೊಳ್ಳುವುದಕ್ಕೇನಿದೆ'' ಅನ್ನಿಸ ತೊಡಗುವುದು ನನ್ನಲ್ಲಿ ಭೂತಾವಾಹನೆಯಾಗುತ್ತಿದೆ ಅನ್ನುವುದರ ಪ್ರಥಮ ಚಿಹ್ನೆ. ಆದರಿಂದ ಕೊಡವಿಕೊಂಡು ಮಾಮೂಲಿನ ದಿನಚರಿಗೆ ನಾನು ಹಿಂದಿರುಗುತ್ತೇನೋ ಅಥವಾ ಆದರ ಹಿಡಿತಕ್ಕೆ ಸಿಕ್ಕು ಅದರ ಅಪ್ಪಣೆಯಂತೆ ಕೆಲವು ಘಂಟೆ, ಕೆಲವು ದಿನ, ಅಥವಾ ಕೆಲವು ವಾರ ಆದರ ವಶವರ್ತಿಯಾಗಿರುತ್ತೇನೆಯೋ ಎನ್ನುವುದು ಸಂದರ್ಭ, ಸನ್ನಿವೇಶಗಳಿಗೆ ಬಿಟ್ಟ ವಿಷಯ. ನನ್ನ ಕ್ರಿಯೆಗೆ ಒಳ್ಳೆಯ ಪ್ರತಿಕ್ರಿಯೆ ಬಂದರೆ ನನ್ನ ನಿರ್ಣಯದ ಬಗ್ಗೆ ನಾನು ತೃಪ್ತಳಾಗಿ ಅದನ್ನು ಮುಂದುವರಿಸಬಹುದು ಅಥವಾ ಪ್ರತಿಕ್ರಿಯೆ ಉತ್ತೇಜಕವಲ್ಲದಿದ್ದರೆ ಅದನ್ನಲ್ಲೇ ಕೈಬಿಟ್ಟು ಮಾಮೂಲಿ ಮನುಷ್ಯಳಾಗಲೂಬಹುದು. ಒಣ ಹರಟೆಯಂತೆ ಭಾಸವಾಗುತ್ತಿದ್ದರೆ ಕ್ಷಮಿಸಿ. ಸರಳವಾಗಿ, ಉದಾಹರಣೆ ಸಮೇತ ವಿವರಿಸುತ್ತೇನೆ. 'ಈ ಬದುಕು ವೈರ ಸಾಧಿಸುವಷ್ಟು ಸುದೀರ್ಘವಾಗಿದೆಯೇ?' ಅನ್ನುವ ಒಂದು ಹೇಳಿಕೆಯನ್ನು ಪುಸ್ತಕವೊಂದರಲ್ಲಿ ಓದಿದೆ ಅಂದುಕೊಳ್ಳಿ. ಆ ವಾಕ್ಯದ ಹಿಂದಿರುವ ಭಾವ ನನ್ನನ್ನು ತಟ್ಟಿ ಅಲುಗಾಡಿಸಿಬಿಡುತ್ತದೆ. ಆಪ್ತೇಷ್ಟ ವಲಯದೊಳಗಿನ ನನ್ನ ಇತ್ತೀಚಿನ ವರ್ತನೆಗಳು ನನ್ನ ಕಣ್ಮುಂದೆ ಮೆರವಣಿಗೆಯಲ್ಲಿ ಸಾಗುತ್ತವೆ.

ಪರಿಚಯದ ಒಬ್ಬಾಕೆಯೊಂದಿಗೆ ವಿನಾಕಾರಣ ಮನಸ್ತಾಪ ಕಟ್ಟಿಕೊಂಡದ್ದು ನೆನಪಿಗೆ ಬರುತ್ತದೆ. ಮದುವೆ, ಗೃಹಪ್ರವೇಶ ಮುಂತಾದ ಜನ ಒಟ್ಟಾಗುವ ಸಮಾರಂಭಗಳಲ್ಲಿ, ಅಂಥಾ ಕಡೆಗಳಲ್ಲಷ್ಟೇ ಕಣ್ಣಿಗೆ ಬೀಳುವ ಗುರುತಿನವರನ್ನು ಕಂಡಾಗ, ಮೊದಲು ನಾನು ನಗಬೇಕೇ ಅಥವಾ ಅವರು ನಕ್ಕ ನಂತರ ನಕ್ಕರೆ ಸಾಕೇ ಅನ್ನುವುದು ನನ್ನ ಯಾವತ್ತಿನ ತೊಳಲಾಟ. ಮೊದಲೇ ನಾನು ನಕ್ಕರೆ ನನ್ನ ಗಂಟು ಮುಳುಗುವುದೇನಿಲ್ಲ. ಆದರೆ ನನ್ನ ಸ್ವಭಾವದಲ್ಲಿ ರಕ್ತಗತವಾಗಿರುವ ಕೊಂಚ ಹಿಂಜರಿಕೆ, ಕೊಂಚ ಸಂಕೋಚ ಹಾಗೂ ಕೊಂಚ ಸ್ವಾಭಿಮಾನಗಳು ನನ್ನನ್ನು ತಡೆ ಹಿಡಿಯುತ್ತವೆ. ಅಲ್ಲದೆ ನಾನು ನಕ್ಕರೂ ಅವಳು ಗಮನಿಸದಂತಿದ್ದರೆ ನನಗೆ ಆಗುವ ಅಭಿಮಾನ ಭಂಗದ ಯೋಚನೆಯಿಂದ, ನಮ್ಮ ಸುತ್ತಮುತ್ತಲವರಲ್ಲಿ ಇಂಥವರೂ ಇದ್ದಾರೆ ಎನ್ನುವುದನ್ನು ಸ್ವಾನುಭವ ನನಗೆ ಕಲಿಸಿ ಕೊಟ್ಟಿರುವುದರಿಂದ ನಾನು ಸಂದರ್ಭೋಚಿತವಾದ ಒಂದು ತೀರ್ಮಾನ ತೆಗೆದುಕೊಳ್ಳುವುದರೊಳಗೆ ಆ ಮುಖ ಮತ್ತೊಂದು ಪಕ್ಕಕ್ಕೆ ತಿರುಗಿಯಾಗಿರುತ್ತದೆ. ನಿಮ್ಮ ಅನುಭವ ಹೇಗೋ ನಾನರಿಯೆ, ಆದರೆ ಹತ್ತಿರ ಹತ್ತಿರದಲ್ಲೇ ಕೂತಿದ್ದರೂ ಅವರು ಬಂದಿರುವುದು ನನಗೆ, ನಾನು ಬಂದಿರುವುದು ಅವರಿಗೆ, ಗೊತ್ತೇ ಇಲ್ಲವೇನೋ ಎನ್ನುವಂತೆ ವ್ಯವಹರಿಸಿರುವುದರ ಹಲವಾರು ಸಂದರ್ಭಗಳು ನನ್ನ ನೆನಪಿನ ಬೊಕ್ಕಣದಲ್ಲಿವೆ. ಇಂಥಾ ದಿವ್ಯ ನಿರ್ಲಕ್ಷ್ಯಕ್ಕೆ, ಕಣ್ಣಿದ್ದೂ ಕಾಣದಂತಿರುವ ಪರಿಗೆ, ನಮ್ಮತ್ತಕಡೆಯ ಮಲೆನಾಡಿನ ಭಾಷೆಯಲ್ಲಿ 'ಒಣ ಹುಣುಸೇಹಣ್ಣು' ಅನ್ನುತ್ತೇವಾದರೆ ಶಿಷ್ಟ ಭಾಷೆಯಲ್ಲಿ 'ಒಣಪ್ರತಿಷ್ಠೆ' ಎನ್ನಬಹುದೇನೋ. ಯಾರಿಗೆ ಎನ್ನುವ ಪ್ರಶ್ನೆ ಬೇಡ. ಸಂಬಂಧಿಸಿದವರಿಬ್ಬರಿಗೂ ಅಂದುಕೊಳ್ಳಿ ಬೇಕಾದರೆ. ಒಂದು ಮದುವೆ ಮನೆಯಲ್ಲಿ ಹೀಗೆ ಒಂದು ಕಣ್ಣು ತಪ್ಪಿಸುವ ನಾಟಕ ನಡೆಯಿತು. ನೋಡಿಯೂ ನೋಡದಂತೆ ಧಿಮಾಕು ತೋರಿಸಿದರೆ ನಾನ್ಯಾಕೆ ಮಾತಾಡಿಸಿಕೊಂಡು ಹೋಗಬೇಕು ಎಂದು ನಾನೂ ಜಂಭ ಮಾಡಿದೆ. 'ಮಗನಿಗೆ ಕೆಲಸ ಸಿಕ್ಕಿದ ಮೇಲೆ ಅವಳಿಗೆ ಕೋಡು ಬಂದಿದೆ' ಎಂದು ಅವಳು ಅಂದದ್ದನ್ನು ಮತ್ತೊಬ್ಬಳು ನನ್ನ ಕಿವಿಯವರೆಗೆ ತಂದು ತಲುಪಿಸಿ ಕೃತಾರ್ಥಳಾದಳು. ಆ ಕ್ಷಣದಲ್ಲಿ ನನ್ನ ಮೇಲೆ ಗೂಬೆ ಕೂರಿಸಿದ್ದವಳ ಹೆಸರನ್ನು ನಾನು ಕೆಂಪು ಇಂಕಿನಿಂದ ಹೊಡೆದು ನನ್ನ ಲೆಕ್ಕದಿಂದ ತೆಗೆದು ಹಾಕಿಬಿಟ್ಟೆ ಅನ್ನಿ. 'ಯಾರಿಗೆ ಕೋಡು ಬಂದಿದೆ, ಯಾರಿಗೆ ಇಲ್ಲ' ಎನ್ನುವುದನ್ನು ಸಲೀಸಾಗಿ ಅಳೆಯುವ ಒಂದು ಮಾನದಂಡ ಜನರ ಕೈಲಿದೆ. ಯಾರೋ ಒಬ್ಬರಿಗೆ ಏನೋ ಒಳ್ಳೆಯದಾಯಿತು ಅಥವಾ ಯಾರೋ ಕಷ್ಟಪಟ್ಟು ಮೇಲೆ ಬಂದು ನಾಲ್ಕು ಜನರ ಕಣ್ಣಿಗೆ ಬೀಳುವ ಹಾಗೆ ಎತ್ತರಕ್ಕೇರಿದರು, ಸರಿ, ಅವರಿಗೆ 'ಕೋಡು ಬಂದಿದೆ' ಎಂದು ಮಂದಿ ಸಹಜವಾಗಿ ತೀರ್ಮಾನ ತೆಗೆದುಕೊಂಡು ಬಿಡುತ್ತಾರೆ. 'ತಮಗಿಂತಾ ಯಾರೂ ಸುಖವಾಗಿರಬಾರದು. ತಮಗಿಂತಾ ಯಾರೂ ಮೇಲೆ ಅನ್ನಿಸಿಕೊಳ್ಳುವಂತಾಗಬಾರದು' ಇದು ಜನಸಾಮಾನ್ಯರಲ್ಲಿರುವ ಒಂದು ಸಾಮಾನ್ಯ ಮನೋಸ್ಥಿತಿ. ಸುಖವಾಗಿರುವುದಕ್ಕಿಂತಾ ಹಾಗಿದ್ದೇವೆಂದು ತೋರ್ಪಡಿಸಿಕೊಳ್ಳುವುದೇ ನಮ್ಮ ದೃಷ್ಟಿಯಲ್ಲಿ ಮುಖ್ಯ. ಆ ವಿಷಯ ಅಲ್ಲಿಗೆ ಕೈ ಬಿಡಿ. ಈಗ 'ಈ ಬದುಕು ವೈರ ಸಾಧಿಸುವಷ್ಟು ಸುದೀರ್ಘವಾಗಿದೆಯೇ?' ಅನ್ನುವಲ್ಲಿಗೆ ಬರೋಣ. ಆ ವಾಕ್ಯವನ್ನೋದಿ ಮುಗಿಸುತ್ತಿದ್ದಂತೆ ನನ್ನೊಳಗೆ ಇದೆ ಎಂದು ನಾನಂದುಕೊಂಡಿರುವ ಒಳ್ಳೆಯತನ ಜಾಗೃತಗೊಂಡು ಮೈ ಮುರಿದೇಳುತ್ತದೆ. ಆಮೇಲಿಂದ ಸ್ವಲ್ಪ ದಿನ ನಾನು ನಾನೇ ಅಲ್ಲ ಎಂದು ಮನೆಮಂದಿಗೆ ಅಚ್ಚರಿಯಾಗುವಂತೆ ನನ್ನ ಮುಖದ ಮೇಲೊಂದು ಕೃತಕ ಮುಗುಳ್ನಗೆ ಲಾಸ್ಯವಾಡತೊಡಗುತ್ತದೆ. ನಮ್ಮ ಮನೆ ಎದುರಿನ ಲೈಟ್ ಕಂಬದ ಬಳಿ ಮಾತ್ರವೇ 'ಇಶ್ಶೀ' ಬರುವ ನಾಯಿಯ ಸರಪಣಿ ಹಿಡಿದು ವಾಕಿಂಗ್ ಬರುವ ಮಾಲಿಕನನ್ನು ಕಂಡಾಗ ನಾನು ಹುಬ್ಬು ಗಂಟಿಕ್ಕುವುದಿಲ್ಲ. ನೆರೆಮನೆಯ ಕಾಂಪೌಂಡಿನೊಳಗೆ ಪರಿಸರ ಪ್ರಿಯರಾದ ಅವರು ಹುಲುಸಾಗಿ ಬೆಳೆಸಿರುವ ಗಿಡಗಂಟಿಗಳ ಒಣ ದರಗು ನಮ್ಮ ಕಾಂಪೌಂಡಿನೊಳಗೆ ರಾಶಿರಾಶಿ ಬಿದ್ದಾಗ ಅವರ ಕಿವಿಗೆ ಬೀಳುವಂತೆ ಗೊಣಗು ಮಾತನಾಡುವುದಿಲ್ಲ. ಎದುರು ಮನೆಯವರು ಅವರ ಮನೆಯ ಎದುರಿನ ಕಸವನ್ನು ನಮ್ಮನೆಯ ಎದುರು ರಾಚುವಂತೆ ಗುಡಿಸಿ ಚೊಕ್ಕಮಾಡಿಕೊಂಡ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಹೀಗೆ ಹೇಳುತ್ತಾ ಹೋದರೆ ನೆರೆಹೊರೆಯವರು ಪಡಬಹುದಾದ ಕೀಟಲೆಗಳ ದೊಡ್ಡ ಪುರಾಣವಾದೀತು. ಒಟ್ಟಿನಲ್ಲಿ ನಾನು ಎಲ್ಲರೊಂದಿಗೆ ಒಂದು ಸೌಹಾರ್ದ ಸಂಬಂಧವನ್ನು ಸ್ಥಾಪಿಸಿಕೊಳ್ಳುವ ನಿಟ್ಟಿನಲ್ಲಿ ಮುಂದುವರಿದಿರುತ್ತೇನೆ ಅಂದರೆ ಸಾಕು. ಒಂದು ವಿಷಯವನ್ನಂತೂ ನಾನು ಬಲು ಚೆನ್ನಾಗಿ ಅರ್ಥೈಸಿಕೊಂಡಿದ್ದೇನೆ. ಒಳ್ಳೆಯತನ ತೋರಿಸಿದರೆ ಜನ ಅದನ್ನು ದೌರ್ಬಲ್ಯ ಅಂದುಕೊಂಡು ಚೆನ್ನಾಗಿ ಉಪಯೋಗಿಸಿಕೊಳ್ಳುತ್ತಾರೆಯೇ ಹೊರತು ಅದೊಂದು ದೊಡ್ಡ ಗುಣ ಎನ್ನುವ ಕುರಿತು ಯಾರೂ ಯೋಚಿಸುವುದಿಲ್ಲ. ಲೋಕ ಹೀಗಿರುವುದರಿಂದ ನಾನು ಉರಿಗಣ್ಣು ಬಿರುಗಣ್ಣು ಬಿಡದೆ ಹಸನ್ಮುಖಿಯಂತೆ ಕಂಡು ಬಂದಿದ್ದಾದರೆ ಕದ್ದು ಮುಚ್ಚಿ ನಾಯಿಯ 'ಇಶ್ಶೀ' ಮಾಡಿಸುವವನು ಕಣ್ಣೆದುರೇ

ವಸುಮತಿ ಉಡುಪ

ಎಚ್‌ಎಮ್ ಟಿ ಬಹುಮಾನಿತ ಲೇಖನ



ರಾಜಾರೋಷವಾಗಿ ಮಾಡಿಸುತ್ತಾನೆ. ಉಳಿದವರೂ ಯಥಾಶಕ್ತಿ ಪರರಿಗೆ ಎಷ್ಟು ತೊಂದರೆ ಕೊಡಲು ಸಾಧ್ಯವೋ ಅಷ್ಟು ಕೊಟ್ಟು ತಮ್ಮ ತಮ್ಮ ಮನೆ ಬಾಗಿಲನ್ನು ಚೊಕ್ಕಟವಾಗಿಟ್ಟುಕೊಂಡು ಬೀಗುತ್ತಾರೆ. ನನ್ನ ಒಳ್ಳೆಯತನ ನನ್ನ ಸಹಜ ಸ್ವಭಾವವಲ್ಲದೆ ಬಲವಂತವಾಗಿ ನನ್ನಲ್ಲಿ ನಾನು ಆರೋಪಿಸಿಕೊಂಡದ್ದಾದ ಕಾರಣ ಅದರ ಅಮಲು ಅದಾಗಲೇ ಇಳಿಯುತ್ತಾ ಬಂದಿದ್ದು ಮತ್ತೆ ನಾನು ಮಾಮೂಲಿನ ಮನುಷ್ಯಳಾಗುತ್ತೇನೆ. 'ನೆರೆಹೊರೆಯವರನ್ನು ಪ್ರೀತಿಸು', 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು', 'ನಿನ್ನೊಳಗಿನ ಪರಮಾತ್ಮನೇ ಆ ಇನ್ನೊಬ್ಬನಲ್ಲೂ ಇದ್ದಾನೆ. ಅವನನ್ನು ಅವಮಾನಿಸಿದರೆ ನಿನ್ನನ್ನು ನೀನೇ ಅವಮಾನಿಸಿಕೊಂಡಂತೆ' ಮುಂತಾದ ನುಡಿಮುತ್ತುಗಳನ್ನು ನಾನು ಮಾತ್ರ ಜೀರ್ಣಿಸಿಕೊಂಡಿದ್ದರೆ ಸಾಲದು, ಅದರ ತಿಳುವಳಿಕೆ ನಾನು ವ್ಯವಹರಿಸುವ ಉಳಿದವರಲ್ಲೂ ಇಲ್ಲದಿದ್ದರೆ ಒಳ್ಳೆಯವಳಾಗಬೇಕೆಂಬ ನನ್ನ ಸದಿಚ್ಛೆ ಒಂದು ಕೈಯ ಚಪ್ಪಾಳೆಯಾದೀತು ಎನ್ನುವುದು ನನ್ನ ಅನಿಸಿಕೆ. ಈ ಥರದ ಕುತರ್ಕಗಳಿಗೆ ನನ್ನ ಮನಸ್ಸನ್ನು ಜೋಲುಬಿಟ್ಟು ಒಳ್ಳೆಯವಳಾಗುವ ಅನೇಕ ಅವಕಾಶಗಳನ್ನು ನಾನು ವ್ಯರ್ಥಗೊಳಿಸಿಕೊಂಡಿದ್ದೇನಾದರೂ ಒಂದು ದುರ್ಬಲ ಗಳಿಗೆಯಲ್ಲಿ ಭಾವುಕಳಾಗಿ ಮತ್ತೊಮ್ಮೆ ಮತ್ತೊಂದು ಸೂಕ್ತಿಯ ಕಪಿಮುಷ್ಟಿಯೊಳಗೆ ಸಿಲುಕಿಕೊಳ್ಳುತ್ತೇನೆ. 'ರಕ್ತ ಸಂಬಂಧಿಗಳನ್ನೇ ಪ್ರೀತಿಸಲಾಗದವರು ಉಳಿದವರನ್ನು ಪ್ರೀತಿಸಬಲ್ಲರೇ?' ಎಂದು ಧಾರಾವಾಹಿಯ ಪಾತ್ರವೊಂದು ಒಂದು ಸಲ ಪಾಯಿಂಟ್ ಹಾಕಿ ನನ್ನ ತಲೆ ತಿಂದಿತು. 'ಹೌದಲ್ಲವೇ?' ಎನ್ನುವ ಜಿಜ್ಞಾಸೆ ನನ್ನನ್ನು ಕಾಡತೊಡಗಿತು. ಒಂದಾನೊಂದು ಕಾಲದಲ್ಲಿ ನನ್ನ ಪ್ರೀತಿಯು ತುಂಬಿದ ಸುಕೋಮಲ ಹೃದಯವಾಗಿತ್ತೆಂದೂ, ಪುಟ್ಟ ಮಕ್ಕಳು ಬಳಪದಿಂದ ಸ್ಲೇಟಿನ ಮೇಲೆ ಕರಪರ ಗೀಚಿದಂತೆ ನನ್ನ ಮನಸ್ಸಿನ ಮೇಲೆ ನನ್ನ ಬಂಧುಬಾಂಧವರು ಅಡ್ಡಾದಿಡ್ಡಿ ಗೀರಿ ನನ್ನ ಭಾವನೆಗಳನ್ನು ಘಾಸಿಗೊಳಿಸಿಬಿಟ್ಟಿದ್ದಾರೆಂದೂ, ತತ್ಪರಿಣಾಮವಾಗಿ ನನ್ನಲ್ಲಿ ಮನುಷ್ಯರ ಒಳ್ಳೆಯತನದ ಕುರಿತಾದ ವಿಶ್ವಾಸವೇ ಸತ್ತುಹೋಗಿದೆಯೆಂದೂ ನನ್ನದೊಂದು ಹಳಹಳಿಕೆ. ನಿಮ್ಮ ಊಹೆ ಸರಿ, ನಾನು ಕತೆ ಕಾದಂಬರಿ ಓದುವುದು ಹೆಚ್ಚು. ಹಾಗಾಗಿಯೇ ಇಂತಹಾ ವಾಕ್ಯಗಳು ನನ್ನಲ್ಲಿ ತಮ್ಮಷ್ಟಕ್ಕೆ ಸ್ಫುರಿಸುತ್ತವೆ. ಈ ರೀತಿ ನಾನು ಮನನೊಂದು ಮಾತಾಡಿದಾಗಲೆಲ್ಲಾ ಯಜಮಾನರಿಗೆ, ಮಕ್ಕಳಿಗೆ, ನಗೆ. 'ಅವರು ಗೀರಿದರೆ ನೀನೂ ಗೀರುವುದು ತಾನೇ?' ಎಂದು ಕೆಣಕುತ್ತಾರೆ. ಅಷ್ಟೆಲ್ಲಾ ಚಾಲಾಕು ನನಗಿಲ್ಲ. ಯಾರಾದರೂ ನನ್ನೆದುರೇ ನನ್ನನ್ನು ಪರೋಕ್ಷವಾಗಿ ಟೀಕಿಸಿದರೂ, ಆ ಭಾಷೆ ನನಗೆ ಅರ್ಥವಾದರೂ, ಅದಕ್ಕೆ ತಕ್ಕ ಪ್ರತ್ಯುತ್ತರ ಕೊಡುವಲ್ಲಿ ಯಾವತ್ತೂ ನಾನು ಸಫಲವಾದದ್ದಿಲ್ಲ. ನನ್ನದೇನಿದ್ದರೂ, 'ಅವರು ಹೀಗಂದರೆ ನಾನು ಹಾಗನ್ನಬೇಕು' ಎನ್ನುವ ಪೂರ್ವತಯಾರಿ ನಡೆಸಿಕೊಂಡಿದ್ದರಷ್ಟೇ ಸಾಧ್ಯವಾಗಬಹುದಾದ ಜಾಣತನ. ಸಂಬಂಧಿಗಳ ಕುರಿತಾದ ಒಳ್ಳೆಯ ಅಭಿಪ್ರಾಯ ಇಟ್ಟುಕೊಂಡಂಥಾ ಜನ ನನಗೆ ಸಿಕ್ಕಿದ್ದೇ ಇಲ್ಲ ಎನ್ನುವಷ್ಟು ಅಪರೂಪ. 'ನೀರು ಹತ್ತಿರ ಇರಬೇಕು, ನೆಂಟರು ದೂರ ಇರಬೇಕು' ಎನ್ನುವ ಗಾದೆಯನ್ನೇ ಪೂರ್ವಿಕರು ಮಾಡಿಟ್ಟಿದ್ದಾರಲ್ಲ? ಒಳ್ಳೆಯದಾದಲ್ಲಿ ಮತ್ಸರ, ಕೆಟ್ಟದ್ದಾದಲ್ಲಿ ವಿಕೃತ ಸಂತೋಷ, ಅನಗತ್ಯ ಪೈಪೋಟಿ, ವಿನಾಕಾರಣ ಒಬ್ಬರ ಮೇಲೆ ಇನ್ನೊಬ್ಬರ ಹತ್ತಿರ ಚಾಡಿ, ಕೊಂಕು ಮಾತು. ಎಷ್ಟೋ ಸಲ ಬಾಯಿ ತಪ್ಪಿ ಅಂದ ಸಣ್ಣ ಮಾತುಗಳನ್ನೂ ಬೆಳೆಸಿ ಬೃಹದಾಕಾರ ಮಾಡಿಟ್ಟು ಚಂದ ನೋಡುವ ಬುದ್ಧಿ. ಕೌರವ ಪಾಂಡವರ ಹಗೆತನವಂತೂ ಲೋಕಪ್ರಸಿದ್ಧಿ. ಹಾಗೆ ಎದುರಾ ಎದುರೇ ವೈರಿಗಳಾಗಿದ್ದುಬಿಟ್ಟರೆ ಅದೊಂದು ಥರ. ಹಾಗಲ್ಲದೆ ಮೇಲೆ ಮೇಲೆ ಪ್ರೀತಿಯ ನಟನೆ ಮಾಡುತ್ತಾ ಒಳಗೊಳಗೇ ಕತ್ತಿ ಮಸೆಯುವವರ ಸಂಪರ್ಕ ಅಂದರೆ ಮುಳ್ಳ ಮೇಲೆ ಬಟ್ಟೆ ಹರವಿದಂತೆ. ವಿನಾಕಾರಣ ನಾಲ್ಕು ಜನರ ಎದುರು ಅಡ್ಡತಿಡ್ಡ ಮಾತಾಡಿ ಅವರು ನಮ್ಮ ಮರ್ಯಾದೆ



ತೆಗೆದರೂ ಏನೂ ಆಗಿಲ್ಲವೆಂಬಂತೆ ಮತ್ತೆ ಅಂಥವರೊಂದಿಗೇ ಒಡನಾಡಬೇಕೆಂದರೆ ಮನಸ್ಸಿಗೆ ಬಲು ಮುಜುಗರ. ವಿಶ್ವಾಸ ತಿಲಮಾತ್ರವೂ ಇಲ್ಲದಿದ್ದರೂ ಇರುವ ನಟನೆ ಮಾಡಿ ಮಾತಾಡುವುದು, ಕೊಂಕುಮಾತುಗಳನ್ನು ನಗೆಚಾಟಿಕೆಯೆಂಬಂತೆ ನಗುನಗುತ್ತಾ ಸ್ವೀಕರಿಸುವುದು, ಇಂಥವೆಲ್ಲಾ ದಪ್ಪ ಚರ್ಮದವರಿಗಷ್ಟೇ ಸಾಧ್ಯ. ಸೂಕ್ಷ್ಮ ಮನಸ್ಸಿನವರು ಮನಸ್ಸು ಮುರಿದುಕೊಂಡು ಬಿಟ್ಟರೆ ಆಶ್ಚರ್ಯವೇನಿಲ್ಲ. ಧಾರಾವಾಹಿಯ ಪಾತ್ರಧಾರಿಯ ಮಾತು ನನ್ನಲ್ಲಿ ಉಂಟುಮಾಡಿದ ಸಂಚಲನೆಯ ಪರಿಣಾಮವಾಗಿ ನಾನು ಎಷ್ಟೋ ಅಷ್ಟು ಎನ್ನುವಂತಿದ್ದ ಸಂಬಂಧಗಳ ಪುನರುಜ್ಜೀವನಕ್ಕೆ ಪಣ ತೊಟ್ಟೆ. ಯಾವ ಹುಳುಕನ್ನೂ ಭೂತಗನ್ನಡಿಯಲ್ಲಿ ನೋಡುವುದಿಲ್ಲವೆಂದು ಮೊದಲೇ ನಿರ್ಧಾರ ಮಾಡಿದೆ. ಅದಕ್ಕೆ ಸರಿಯಾಗಿ ಒಂದು ಅವಕಾಶವೂ ಒದಗಿಬಂತು. ನೆಂಟರೊಬ್ಬರ ಮನೆಯ ವಿಶೇಷ ಕಾರ್ಯಕ್ರಮವೊಂದಕ್ಕೆ ಸಕುಟುಂಬ ಸಪರಿವಾರ ಸಮೇತ ಊತಣಕ್ಕೆ ಬರಬೇಕೆಂಬ ಆಹ್ವಾನ ಬಂತು. ಮನೆಯಲ್ಲಿ ಎಲ್ಲರೂ ಒಂದೊಂದು ನೆಪ ಹೇಳಿ ತಪ್ಪಿಸಿಕೊಂಡರು. 'ಸಂಬಂಧ ಸುಧಾರಣೆ'ಯ ಭೂತ ಹೊಕ್ಕಿದ್ದ ನಾನು ಮತ್ತೊಬ್ಬ ಆಪ್ತರೊಡನೆ ಕರೆದಲ್ಲಿಗೆ ಹೋದೆ. ಆ ಆತಿಥೇಯರು ನನ್ನೊಡನಿದ್ದ ಆಪ್ತರೊಡನೆ, 'ಯಜಮಾನರು ಯಾಕೆ ಬರಲಿಲ್ಲ? ಮಕ್ಕಳು ಯಾಕೆ ಬರಲಿಲ್ಲ?' ಎಂದು ವಿಶ್ವಾಸಪೂರ್ವಕವಾಗಿ ವಿಚಾರಿಸಿಕೊಂಡರು. ನನ್ನೊಡನೆ ಅಷ್ಟೆಲ್ಲಾ ವಿಚಾರಿಸಿಕೊಳ್ಳಲು ಅವರಿಗೆ ಪುರುಸೊತ್ತು ಸಿಗಲಿಲ್ಲ. ಅವರು ಉದ್ದೇಶಪೂರ್ವಕವಾಗಿ ಆ ರೀತಿ ವರ್ತಿಸಿದ್ದಲ್ಲದಿರಬಹುದು. ಆದರೆ ನನ್ನ 'ಅಹಂ'ಗೆ ಚುಚ್ಚಿದಂತಾದದ್ದು ನಿಜ. ನಾನು ಹೋದರೂ, ಹೋಗದಿದ್ದರೂ ಯಾವ ವ್ಯತ್ಯಾಸವೂ ಆಗುತ್ತಿರಲಿಲ್ಲ. ಅವರ ದೃಷ್ಟಿಯಲ್ಲಿ ನಾನು ಪ್ಲಸ್ಸೂ ಅಲ್ಲ, ಮೈನಸ್ಸೂ ಅಲ್ಲ. ಅವಗಣನೆಗೆ ಒಳಗಾದ ಒಂದು ಸೂಕ್ಷ್ಮ ನೋವಿನಿಂದ ನನ್ನ ಮನಸ್ಸು ಮುದುಡಿತು. ಮನೆಗೆ ಬಂದ ಮೇಲೆ ಯಜಮಾನರೊಡನೆ ಅನಿಸಿದ್ದನ್ನು ಹೇಳಿಕೊಂಡೆ. 'ಪಾಪ, ನಿನ್ನ ಮನಸ್ಸಿನ ಮೇಲೆ ಮತ್ತೊಂದು ಗೀಚು ಬಿತ್ತು' ಎಂದು ಅವರು ಕೃತಕ ಅನುಕಂಪ ತೋರಿಸಿದರು. ಇದೊಂದು ತೀರಾ ಕ್ಷುಲ್ಲಕ ಘಟನೆ ಎಂದು ನಿಮಗನ್ನಿಸಬಹುದು. ಆದರೆ ನಿರ್ಲಕ್ಷ್ಯ ತರುವ ನೋವು ಮತ್ತೊಂದೇ ಬಗೆಯದು ಎಂದು ಹೇಳಬಯಸುತ್ತೇನೆ. ಸಂಬಂಧದವರಿಗಿಂತಾ ಹೊರಗಿನವರ ಮೇಲೇ ಪ್ರೀತಿ ತೋರಿಸುವುದು ಹೆಚ್ಚು ಸುಲಭ ಎಂದು ನನ್ನ ತರ್ಕ. ಯಾಕೆಂದರೆ ಹೊರಗಿನವರ ಮೇಲೆ ಯಾವ ಪೂರ್ವಾಗ್ರಹಗಳೂ ನಮಗಿರುವುದಿಲ್ಲ. ಅವರ ಕಷ್ಟಕ್ಕೆ ನಾವು ಒಬ್ಬ ಸಹ ಮಾನವ ಜೀವಿಯಾಗಿ ಮುಕ್ತ ಮನಸ್ಸಿನಿಂದ ಸ್ಪಂದಿಸಬಹುದು. 'ತಲೆಯೆಲ್ಲಾ ಮೆರೀತಿದ್ದ, ಸರಿಯಾದ ಬರೆ ಬಿತ್ತು' ಎಂದು ಇವತ್ತಿನ ಆಪತ್ತಿನ ಕುರಿತು ಹಳಿಯದನ್ನು ನೆನೆಸಿಕೊಂಡು ಹಂಗಿಸಬೇಕಾದಂತಹ ಸಂದರ್ಭ ಹೊರಗಿನವರೊಡನೆ ಬರುವುದಿಲ್ಲ. ಹಂಗಿಸಿಕೊಳ್ಳಬೇಕಾದಂತಹ ಸಂದರ್ಭ ಕೂಡಾ. ಎಲ್ಲಾ ಹಿತೋಕ್ತಿಗಳನ್ನೂ, ಸೂಕ್ತಿಗಳನ್ನೂ ವಕ್ರದೃಷ್ಟಿಯಿಂದ ನೋಡುವುದು ನನಗೆ ಅಭ್ಯಾಸ ಆಗಿಬಿಟ್ಟಿದೆ ಎಂದು ನೀವು ಅಂದುಕೊಂಡರೆ ನನ್ನ ಆಕ್ಷೇಪಣೆ ಇಲ್ಲ. ಆದರೆ ಒಂದನ್ನಂತೂ ನೀವು ಒಪ್ಪಲೇಬೇಕು. ಒಂದು ಕಾಲಕ್ಕೆ ಪ್ರಸ್ತುತವಾಗಿದ್ದಂತಹ ಜೀವನ ಮೌಲ್ಯಗಳು ಎಲ್ಲಾ ಕಾಲಕ್ಕೂ ಪ್ರಸ್ತುತವಾಗಿರಬೇಕಾದ್ದೇನಿಲ್ಲ. ಹಾಗಿರಲು ಸಾಧ್ಯವೂ ಇಲ್ಲ. ಮೌಲ್ಯಗಳ ಬೆನ್ನು ಹತ್ತಿ ಭ್ರಮನಿರಸನವಾದವರು ನಿಮ್ಮಲ್ಲೂ ಅನೇಕರಿರಬಹುದು. ಹೀಗೆ ಪ್ರತಿಸಲ ಬುದ್ಧಿ ಕಲಿತೂ ಸಹ ಒಮ್ಮೆಯಲ್ಲಾ ಮತ್ತೊಮ್ಮೆ, ಒಂದಲ್ಲಾ ಒಂದು, ನುಡಿಮುತ್ತಿನಿಂದ ಪ್ರಭಾವಿತಳಾಗಿ ಅದನ್ನು ನಿತ್ಯ ಜೀವನದಲ್ಲಿ ಪ್ರಯೋಗಿಸಿ ನೋಡಲು ನಾನು ಉತ್ಸುಕಳಾಗುವುದೂ, ಅದರ ಬಗ್ಗೆ ನನ್ನದೇ ಅಭಿಪ್ರಾಯವನ್ನು ರೂಪಿಸಿಕೊಂಡು ವ್ಯಾಖ್ಯಾನಿಸುವುದೂ ನಡೆದೇ ಇದೆ. ಆದರ್ಶಗಳ ಆಕರ್ಷಣೆಯಿಂದ ಪ್ರಭಾವಿತರಾಗಿ ಅದರಿಂದುಂಟಾಗುವ ಕಷ್ಟ ನಿಷ್ಠೂರಗಳಿಗೆ ಜಗ್ಗದೆ ನಿಲ್ಲಬಲ್ಲ ಮನೋದಾರ್ಢ್ಯವಿಲ್ಲದ ಹುಲು ಮನುಜರೆಲ್ಲರ ಪಾಡೂ ಬಹುಶಃ ಇದೇ ಇರಬಹುದೇನೋ. ಆದರ್ಶಗಳಿರುವುದು ಕರೆ ಕೊಡುವುದಕ್ಕಷ್ಟೇ ಹೊರತು ಆಚರಿಸುವುದಕ್ಕಲ್ಲ ಎನ್ನುವ ನಿಲುವಿಗೆ ಕಾಲಕ್ರಮೇಣ ನಾನು ಬರುತ್ತಿದ್ದೇನೇನೋ ಎನ್ನುವುದು ನನ್ನ ಸಂಶಯ.

**ವಸುಮತಿ ಉಡುಪ**
'ಗೌರಿ' ಲನೇ ಕ್ರಾಸ್ 'ಎ', ಗಾಂಧೀನಗರ ಬಡಾವಣೆ
ಶಿವಮೊಗ್ಗ - ೫೭೭ ೨೦೧

# ಭಾರತದಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನಕ್ಕೆ ಭವಿಷ್ಯವಿದೆಯೆ?

**ಡಾ॥ ಎಸ್. ಕೆ. ಬಿಸ್ವಾಸ್**

ವಿಜ್ಞಾನ ತಂತ್ರಜ್ಞಾನಗಳು ಉತ್ಪಾದಕ ಶಕ್ತಿಗಳ ಬೆಳವಣಿಗೆಗೆ ಬಹುಮಟ್ಟಿಗೆ ಕಾಣಿಕೆ ನೀಡುವ ಅತ್ಯಂತ ಮುಖ್ಯ ಸಾಮಾಜಿಕ ವಿದ್ಯಮಾನಗಳು ಎಂಬುದು ಈಗ ಸುವಿದಿತ. ಅದೇ ಹೊತ್ತಿನಲ್ಲಿ ಅವು ವಿನಾಶಕ ಶಕ್ತಿಗಳಾಗಿಯೂ ಬಳಕೆಗೆ ಬರಬಹುದು. ಆದರೆ ನಾನಿಲ್ಲಿ ಈ ನೈತಿಕ ಪ್ರಶ್ನೆಯನ್ನು ಚರ್ಚಿಸಹೋಗುವುದಿಲ್ಲ. ವಿಜ್ಞಾನ ತಂತ್ರಜ್ಞಾನಗಳು ಸಮಾಜದಲ್ಲಿ ಎರಡು ರೀತಿಗಳಲ್ಲಿ ಇದ್ದುಕೊಂಡಿರಬಲ್ಲವು : (೧) ಸಮಾಜದೊಂದಿಗೆ ಸಹಜೀವಿಯಾಗಿ ಅದರೊಂದಿಗೆ ನಿಕಟ ಸಂಬಂಧ ಇಟ್ಟುಕೊಂಡು ಉಪಯುಕ್ತವಾಗಿ ಇರಬಲ್ಲವು; (೨) ಸಮಾಜದಿಂದ ಪ್ರತ್ಯೇಕವಾಗಿ ಯಾಂತ್ರಿಕ ಅಸ್ತಿತ್ವ ನಡೆಸಿಕೊಂಡು ನಿರುಪಯುಕ್ತವಾಗಿ ಇರಬಲ್ಲವು. ಸಹ ಜೀವನ ನಡೆಸಿಕೊಂಡು ಉಪಯುಕ್ತವಾಗಿರುವಾಗಲೂ ಅವು ವಿನಾಶಕ ಶಕ್ತಿಗಳಿಗೆ ಜನ್ಮ ನೀಡಬಲ್ಲವೆಂಬುದಕ್ಕೆ ದ್ವಿತೀಯ ಮಹಾಯುದ್ಧದ ಹಾಗೂ ಶೀತಲ ಸಮರದ ದಿನಗಳಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಅವು ನಿರ್ವಹಿಸಿದ ಪಾತ್ರವೇ ಸಾಕ್ಷಿ. ಅವು ಸಮಾಜದಿಂದ ಪ್ರತ್ಯೇಕವಾಗಿದ್ದಾಗಲೂ ಸಾಕಷ್ಟು ಅಪಾಯಕಾರಿಯಾಗಬಲ್ಲವು. ಭಾರತದಲ್ಲಿ ಪರಮಾಣು ಶಕ್ತಿ ಕಾರ್ಯಕ್ರಮ ಜನರ ಸಂಕ್ಷೇಮಕ್ಕೆ ಅನುವಾಗುವ ಬದಲು 'ಜೈ ವಿಜ್ಞಾನ' ಘೋಷಣೆಯಡಿ ಬೈಜಿಕ ಬಾಂಬುಗಳ ತಯಾರಿಕೆಯ ಪ್ರಯೋಗಗಳಿಗೆ ಎಡೆಮಾಡಿ ಕೊಟ್ಟಿರುವುದೇ ಇದಕ್ಕೆ ಒಂದು ಜ್ವಲಂತ ನಿದರ್ಶನ.

ವಿಜ್ಞಾನ ತಂತ್ರಜ್ಞಾನಗಳು ಉಪಯುಕ್ತ ಕಾರ್ಯ ನಿರ್ವಹಿಸುವುದಕ್ಕೆ ಮೂರು ಪೂರ್ವಾವಶ್ಯಕತೆಗಳು ಅಗತ್ಯ ಎಂದು ನನ್ನ ನಂಬಿಕೆ. ಅವು (೧) ಸಾಮಾಜಿಕ ಸಮಸ್ಯೆಗಳು; (೨) ಕನಿಷ್ಠ ಮಾನವ ಹಾಗೂ ಯಂತ್ರಕಲಾ ಅಧಿರಚನೆ; (೩) ಮೇಲಿನ ಎರಡೂ ಅಂಶಗಳನ್ನು ಸಂಬಂಧಿಸುವ ಜೀವಂತ ಹೊಕ್ಕಳಬಳ್ಳಿ. ಹೀಗಿದ್ದಾಗಲಷ್ಟೆ ವಿಜ್ಞಾನ ತಂತ್ರಜ್ಞಾನಗಳು ದತ್ತ ರಾಷ್ಟ್ರೀಯ ಚೌಕಟ್ಟಿನಲ್ಲಿ ಸಮೃದ್ಧವಾಗಿ ಏಳಿಗೆ ಪಡೆಯಬಲ್ಲವು, ರಾಷ್ಟ್ರ ನಿರ್ಮಾಣಕ್ಕೆ ನೆರವಾಗಬಲ್ಲವು. ಇತಿಹಾಸದ ವಿಭಿನ್ನ ಕಾಲಘಟ್ಟಗಳಲ್ಲಿ ಹಾಗೂ ಪ್ರದೇಶಗಳಲ್ಲಿ ವಿಭಿನ್ನ ಸಾಮಾಜಿಕ ಸಮಸ್ಯೆಗಳು ವಿಜ್ಞಾನ ತಂತ್ರಜ್ಞಾನಗಳ ಏಳಿಗೆಗೆ ನೆರವಾಗಿವೆ. ಉದಾಹರಣೆಗೆ –

ಸಮಾಜವಾದಿ ಕ್ರಾಂತಿ ನಂತರ ರಷ್ಯದಲ್ಲಿ ಜನ್ಮತಾಳಿದ ಜಗತ್ತಿನ ಪ್ರಪ್ರಥಮ ಸಮಾಜವಾದಿ ರಾಜ್ಯವನ್ನು ಶೈಶವಾವಸ್ಥೆಯಲ್ಲೇ ನಾಶಗೊಳಿಸಲು ಸಾಮ್ರಾಜ್ಯಶಾಹಿ ಶಕ್ತಿಗಳು ಹೊರಗಡೆಯಿಂದ ಭಾರಿ ರಾಜಕೀಯ ಹಾಗೂ ಆರ್ಥಿಕ ಒತ್ತಡ ಹಾಕಿದಾಗ ಸೋವಿಯತ್ ಒಕ್ಕೂಟದೊಳಗೇ ಉಂಟಾದ ರಾಜಕೀಯ ಸಮಸ್ಯೆಗಳು ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಗೆ ಎಂತಹ ಅದ್ಭುತ ಸ್ಫೂರ್ತಿ ನೀಡಿದವೆಂಬುದು ಜಗತ್ತಿಗೇ ತಿಳಿದಿದೆ. ಅದೇ ರೀತಿ ವಸಾಹತು ವಿರೋಧಿ ಚಳುವಳಿಯ ಕಾಲದಲ್ಲಿ ಭಾರತದಲ್ಲಿದ್ದ ರಾಜಕೀಯ ಸಮಸ್ಯೆಗಳು ಬಹುಶಃ ಭಾರತೀಯ ವಿಜ್ಞಾನದ ಸುವರ್ಣ ಯುಗಕ್ಕೆ ನಾಂದಿ ಹಾಡಿದವು.

ಅಭಿವೃದ್ಧಿಶೀಲ ದೇಶಗಳಲ್ಲಿ ಆಹಾರ, ವಸತಿ ಹಾಗೂ ಆರೋಗ್ಯಕ್ಕೆ ಸಂಬಂಧಿಸಿದ ಮಾನವ ಸಂಕ್ಷೇಮ ಸಮಸ್ಯೆಗಳು ಕಡಿಮೆ ಖರ್ಚಿನ ನಾವೀನ್ಯತೆಯ ವಿಜ್ಞಾನ ತಂತ್ರಜ್ಞಾನ ಪರಿಹಾರಗಳ ಆವಿಷ್ಕರಣೆಗೆ ಇಂಬು ಕೊಟ್ಟವು.

ಬ್ರಿಟನ್ನಿನಲ್ಲಾದ ಕೈಗಾರಿಕಾ ಕ್ರಾಂತಿಯೂ ರಸಾಯನ ಶಾಸ್ತ್ರ, ಸಿವಿಲ್ ಇಂಜಿನಿಯರಿಂಗ್, ಮೆಕ್ಯಾನಿಕಲ್ ಇಂಜಿನಿಯರಿಂಗ್ ಹಾಗೂ ಥರ್ಮೋಡೈನಾಮಿಕ್ಸ್ ಕ್ಷೇತ್ರಗಳಲ್ಲಿ ಭಾರಿ ಪ್ರಗತಿಗೆ ದಾರಿ ಮಾಡಿಕೊಟ್ಟಿತು. ಯುದ್ಧಾನಂತರದ ಜಪಾನೂ ಇದಕ್ಕೆ ಮತ್ತೊಂದು ನಿದರ್ಶನ. ದೇಶದ ಕೈಗಾರಿಕೆಯನ್ನು ಸ್ಥಳೀಯಗೊಳಿಸಿ ಉತ್ಪಾದನೆಯನ್ನು ಅತ್ಯುನ್ನತ ಮಟ್ಟಕ್ಕೊಯ್ಯುವ ಅಗತ್ಯತೆಯು ಆ ದೇಶದಲ್ಲಿ ವಿಶ್ವವಿದ್ಯಾಲಯಗಳಲ್ಲಷ್ಟೇ ಅಲ್ಲ ಕೈಗಾರಿಕಾ ಸಂಶೋಧನೆ ಹಾಗೂ ವಿಕಸನ ಕ್ಷೇತ್ರದಲ್ಲೂ ವಿಜ್ಞಾನ ತಂತ್ರಜ್ಞಾನಗಳ ಅಪರಿಮಿತ ಏಳಿಗೆಗೆ ಕಾರಣವಾಯಿತು.

**೨೦ನೇ ಶತಮಾನದ ಆರಂಭದಲ್ಲಿ ಭಾರತದಲ್ಲಿ ವಿಜ್ಞಾನ**

'ನೇಚರ್' ಪತ್ರಿಕೆ ಈಚೆಗೆ ಪ್ರಕಟಿಸಿದ ಇಬ್ಬರು ಭಾರತೀಯ ಸಂಶೋಧಕರ ಒಂದು ಅಧ್ಯಯನದ ಪ್ರಕಾರ, ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಭಾರತದ ವಿಜ್ಞಾನದ ಸ್ಥಾನ ಚೀಣದ ಸ್ಥಾನಕ್ಕಿಂತ ಕೆಳಗೆ ಹಾಗೂ ಸಹಾರ ಆಫ್ರಿಕದ ಸ್ಥಾನಕ್ಕಿಂತ ಸ್ವಲ್ಪವಷ್ಟೆ ಮೇಲಿದೆ. ಅಧಿರಚನೆಗೆ ಸಂಬಂಧಿಸಿ ಭಾರತದ ಸ್ಥಾನ ಕೆಳಮಟ್ಟದಲ್ಲಿದ್ದರೂ ಭೌತಿಕ ಪೂರ್ವಾವಶ್ಯಕತೆಗಳ ನಿರ್ಮಾಣದಲ್ಲಿ ಭಾರತವೇನೂ ಹಿಂದೆ ಬಿದ್ದಿಲ್ಲ. ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶೇ. ೧ರಷ್ಟು ವಿಜ್ಞಾನ ತಂತ್ರಜ್ಞಾನಗಳಿಗೆ ನೀಡಲಾಗಿದ್ದು ದೇಶದಾದ್ಯಂತ ಅಧಿಕ ಸಂಖ್ಯೆಯಲ್ಲಿ ವೈಜ್ಞಾನಿಕ ಪ್ರಯೋಗಶಾಲೆಗಳೂ, ವಿಶ್ವವಿದ್ಯಾಲಯಗಳೂ, ಭಾರಿ ವೈಜ್ಞಾನಿಕ ಮಾನವ ಬಲವೂ, ಅವುಗಳ ನಡುವೆ ವಿಸ್ತೃತ ಸಂಪರ್ಕ ಜಾಲ ಬಂಧವೂ, ನಿರ್ಮಾಣಗೊಂಡಿವೆ. ೨೦ನೇ ಶತಮಾನದ ಆದಿಭಾಗದಲ್ಲಿ ಭಾರತದಲ್ಲಿ ವಾತಾವರಣ ನಿರಾಶಾದಾಯಕವಾಗಿದ್ದಿತು. ವಿಜ್ಞಾನ ತಂತ್ರಜ್ಞಾನಗಳಿಗೆ ಸರಕಾರದ ಪ್ರೋತ್ಸಾಹ ಏನೇನೂ ಇರಲಿಲ್ಲ. ಬದಲು ವಸಾಹತು ಸರಕಾರ ಅವಕ್ಕೆ ವಿರೋಧವಿದ್ದಿತು ಎಂಬುದನ್ನು ಗಮನಕ್ಕೆ ತಂದುಕೊಂಡರೆ ಭಾರತದ ಇಂದಿನ ಪ್ರಗತಿ ಆಶ್ಚರ್ಯಗೊಳಿಸುವಂತಹುದೇ ಎನ್ನಬಹುದು.

ಇಪ್ಪತ್ತನೆಯ ಶತಮಾನದ ಆರಂಭಿಕ ಘಟ್ಟದಲ್ಲಿ ಭಾರತೀಯ ವಿಜ್ಞಾನದಲ್ಲಿ ಸುಮಾರು ೫೦ ವರ್ಷಗಳ ಒಂದು ಅಲ್ಪಾವಧಿಯ ಏಳಿಗೆಯ ಕಾಲವಿದ್ದಿತು. ರಾಜಕೀಯ ಸ್ವಾತಂತ್ರ್ಯದ ವಸಾಹತು ವಿರೋಧಿ ಚಳವಳಿ ನೀಡಿದ ಸ್ಫೂರ್ತಿ ಹಾಗೂ ಒತ್ತಾಯದ ಫಲವಾಗಿದ್ದಿತು ಇದು ಎಂಬುದು ನನ್ನ ಅನಿಸಿಕೆ. ಎಲ್ಲ ವಿಭಾಗಗಳ ಹಾಗೂ ವೃತ್ತಿಗಳ ಜನರೂ ಸ್ವಾತಂತ್ರ್ಯ ಚಳವಳಿಯ ಮಹಾ ಪ್ರವಾಹದಲ್ಲಿ ಒಂದಾಗಿ ಬಂದು ಅವರ ನಡುವೆ ಸಾಮಾಜಿಕ ಸಂಯೋಜನೆ ಏರ್ಪಟ್ಟುದು ಈ ಪ್ರಗತಿಗೆ ಮೂಲ ಕಾರಣವಾಗಿದ್ದಿತು.

ಭಾರತೀಯ ವಿಜ್ಞಾನಿಗಳ ಮಧ್ಯೆಯೂ ಈ ಸಾಮಾಜಿಕ ಸಂಯೋಜನೆ ಆಶಾಭಾವನೆಯನ್ನು ಉಂಟುಮಾಡಿದ್ದಿತು. ಭಾರತದಲ್ಲಿ ವಿಜ್ಞಾನ ಪುರಾತನ ಕಾಲದಿಂದಲೂ ನಮ್ಮ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿದ್ದುಕೊಂಡು ಬಂದಿದೆ. ಸ್ವತಂತ್ರ ಭಾರತದಲ್ಲೂ ವಿಜ್ಞಾನದ ಅರುಣೋದಯ ಮತ್ತೆ ಆಗುವುದು ಖಂಡಿತವೆಂಬ ಭಾವನೆ ವಿಜ್ಞಾನಿಗಳಲ್ಲಿ ಬೇರೂರಿದ್ದಿತು. ಅವರಲ್ಲಿ ಅನೇಕರು ಸಂಸ್ಕೃತ ಭಾಷೆಯನ್ನು ವಿಶೇಷವಾಗಿ ಕಲಿತು ಪುರಾತನ ಭಾರತದ ಗಣಿತ, ಖಗೋಳವಿಜ್ಞಾನ, ರಸಾಯನ ಶಾಸ್ತ್ರ, ಲೋಹ ಶಾಸ್ತ್ರ ಇತ್ಯಾದಿ ವಿವಿಧ ವಿಜ್ಞಾನ ವಿಭಾಗಗಳ ಕೃತಿಗಳನ್ನು ಆಂಗ್ಲಭಾಷೆಗೂ ವಿವಿಧ ಭಾರತೀಯ ಭಾಷೆಗಳಿಗೂ ಭಾಷಾಂತರಿಸಿದರು. ಹೀಗೆ ಅವರು ವಿಜ್ಞಾನದ ಉದಯವಾದುದು ಗ್ರೀಸಿನಲ್ಲಿ ಎಂಬ ವಸಾಹತುವಾದೀ ಪ್ರಚಾರ ಹುರುಳಿಲ್ಲದುದೆಂದು ದೃಢಪಡಿಸಿದರು.

ಪ್ರಯೋಗ ಶಾಲೆಗಳಲ್ಲಿ ಅವರವರ ಸಂಶೋಧನೆಗಳಲ್ಲಿ ನಿರತರಾಗಿದ್ದಾಗಲೇ ಆ ಕಾಲದ ವಿಜ್ಞಾನಿಗಳು ಸಾಮಾನ್ಯ ಜನರ ಮಧ್ಯೆಯೂ ವಿಜ್ಞಾನವನ್ನು ಜನಪ್ರಿಯಗೊಳಿಸುವ ಕಾರ್ಯವನ್ನು ನಿರ್ವಹಿಸಿದರು. ಜೆ. ಸಿ. ಬೋಸ್‌ರಿಂದ ಹಿಡಿದು ಸಿ. ವಿ. ರಾಮನ್‌ರವರೆಗೆ ಅವರು ಮಕ್ಕಳಿಗಾಗಿ ವೈಜ್ಞಾನಿಕ ಕೃತಿಗಳನ್ನು ರಚಿಸಿದರು. ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡಲ್ಲಿ ಅದು ಜನರಿಗೆ ಅಂದಿನ ಅಧೋಗತಿಯಿಂದ ಮೇಲೇರಲು ಸಹಾಯ ಮಾಡಿಕೊಡುವುದೆಂದು ಬೋಧಿಸಿದರು. ದೇಶದ ಮೂಲೆ ಮೂಲೆಗಳಿಗೆ ಹೋಗಿ ನಿಸರ್ಗದ, ಕೆಲವೊಮ್ಮೆ ವಿಲಕ್ಷಣವೆನ್ನುವಂಥ ವಿದ್ಯಮಾನಗಳಿಗೆ ಸೂಕ್ತ ವೈಜ್ಞಾನಿಕ ವಿವರಣೆ ನೀಡಿ ಅಂಧಶ್ರದ್ಧೆಯ ವಿರುದ್ಧ ಹೋರಾಡಲು ಜನರಿಗೆ ನೆರವಾದರು. ಈ ಕಾರ್ಯವಲ್ಲಿ

ಮಹಾನ್ ವಿಜ್ಞಾನಿಗಳು ತಾವು ಸ್ವತಃ ಭಾಗವಹಿಸಿದರಷ್ಟೆ ಅಲ್ಲ, ತಮ್ಮ ಸಹೋದ್ಯೋಗಿಗಳಿಗೂ ವಿದ್ಯಾರ್ಥಿಗಳಿಗೂ ಅದರಲ್ಲಿ ಭಾಗವಹಿಸುವಂತೆ ಕರೆ ನೀಡಿದರು.

ಅಷ್ಟೇ ಅಲ್ಲ, ಅದೇ ಮೊದಲ ಬಾರಿಗೆ ವಿಜ್ಞಾನಿಗಳು ರಾಜಕೀಯ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದ ಕಲಾವಿದರು, ಕವಿಗಳು, ನಾಟಕಕಾರರು, ನ್ಯಾಯವಾದಿಗಳು, ಅಧ್ಯಾಪಕರು ಇತ್ಯಾದಿ ವಿವಿಧ ವೃತ್ತಿಯ ಜನರೊಂದಿಗೂ, ರಾಜಕೀಯ ನಾಯಕರೊಂದಿಗೂ, ಸಾಮಾನ್ಯ ಜನರೊಂದಿಗೂ ಜೊತೆಗೂಡಿ ಕಾರ್ಯ ನಿರ್ವಹಿಸಿದರು. ಹೀಗೆ ವಿಭಿನ್ನ ಸಾಂಸ್ಕೃತಿಕ ಚಳವಳಿಗಳ ನಡುವೆ ಭಾವ ವಿನಿಮಯ ಉಂಟಾಯಿತು. ಜೆ. ಸಿ. ಬೋಸರು ಕಥೆಗಳನ್ನೂ ಪ್ರಬಂಧಗಳನ್ನೂ ಬರೆದರೆ, ಟಾಗೋರರು ವಿಜ್ಞಾನವನ್ನು ಜನಪ್ರಿಯಗೊಳಿಸುವ ಲೇಖನಗಳನ್ನು ಬರೆದರು.

ವಸಾಹತು ಸರಕಾರ ಪ್ರಬಲ ಪ್ರತಿರೋಧ ತೋರಿದರೂ ಭಾರತದ ವೈಜ್ಞಾನಿಕ ಹಾಗೂ ಕೈಗಾರಿಕಾ ಸಮುದಾಯದ ಕಾರ್ಯಕರ್ತರು ಸ್ವತಂತ್ರ ಭಾರತದಲ್ಲಿ ವಿಜ್ಞಾನ ತಂತ್ರಜ್ಞಾನಗಳ ಪ್ರಗತಿಗೆ ಆಧಾರ ಒದಗಿಸಬಲ್ಲಂಥ ಪರ್ಯಾಯ ಸಂಸ್ಥೆಗಳನ್ನು ನಿರ್ಮಿಸಲು ಶ್ರಮಿಸಿದರು. ಈ ಕಾರ್ಯದಲ್ಲಿ ಅವರಿಗೆ ಮಹಾತ್ಮ ಗಾಂಧಿಯ ವರಿಂದ ಹಿಡಿದು ಆಗ್ಗೆ ಭಾರತದ ಕಮ್ಯುನಿಸ್ಟ್ ಪಕ್ಷದ ಮಹಾಕಾರ್ಯದರ್ಶಿಯಾಗಿದ್ದ ಪಿ. ಸಿ. ಜೋಶಿಯ ವರವರೆಗೆ ಅನೇಕ ರಾಜಕೀಯ ಮುಖಂಡರುಗಳ ನೆರವು ತಪ್ಪದೆ ಲಭಿಸಿತು. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಮುಖ್ಯಪಾತ್ರ ನಿರ್ವಹಿಸುತ್ತಿರುವ ಬೋಸ್ ವಿದ್ಯಾಸಂಸ್ಥೆ, ಭಾರತೀಯ ವಿಜ್ಞಾನ ಸಂಸ್ಥೆ, ಭಾರತೀಯ ವಿಜ್ಞಾನ ಕಾಂಗ್ರೆಸ್, ಭಾರತೀಯ ರಾಷ್ಟ್ರೀಯ ವಿಜ್ಞಾನ ಅಕಾಡೆಮಿ ಇವು ಅಂತಹ ಸಂಸ್ಥೆಗಳಲ್ಲಿ ಕೆಲವು.

ಸ್ವಾತಂತ್ರ್ಯ ಹೋರಾಟ ಹಾಕಿಕೊಟ್ಟ ಸೈದ್ಧಾಂತಿಕ ಚೌಕಟ್ಟಿನೊಳಗೇ ತಮ್ಮ ಕಾರ್ಯ ಜರುಗಿಸುತ್ತ ಭಾರತೀಯ ವಿಜ್ಞಾನಿಗಳು ವಸಾಹತು ಸರಕಾರದ ಕೋಮು ಆಧಾರಿತ ವಿಭಜನೀಯ ನೀತಿಯನ್ನು ಅರಿತು ತಮ್ಮ ಉಪನ್ಯಾಸಗಳಲ್ಲೂ ಪಾಠ ಪ್ರವಚನಗಳಲ್ಲೂ, ಅಂತರರಾಷ್ಟ್ರೀಯ ವೇದಿಕೆಗಳಲ್ಲೂ, ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟದಲ್ಲಿ ಹಿಂದೂ ಮುಸ್ಲಿಮ್ ಏಕತೆ ಹಾಗೂ ವಿಶ್ವಶಾಂತಿ ಎಷ್ಟು ಮುಖ್ಯ ಎಂಬುದನ್ನು ಒತ್ತಿ ಹೇಳಿದರು.

ನಮ್ಮ ಆರಂಭಿಕ ವಿಜ್ಞಾನಿಗಳು ಎಂತಹ ತೀವ್ರತರ ಸಾಮಾಜಿಕ ವಾತಾವರಣದಲ್ಲಿ ಕೆಲಸ ಮಾಡಬೇಕಿದ್ದಿತೆಂಬುದನ್ನು ಮೇಲಿನದು ಸೂಚಿಸುತ್ತದೆ. ಈ ತೀವ್ರತೆಯೇ, ಈ ನೈತಿಕ ಹಾಗೂ ಬೌದ್ಧಿಕ ಒತ್ತಡವೇ ಅನನ್ಯ ರೀತಿಯ ವಿಚಾರಗಳಿಗೆ, ಸಂಪೂರ್ಣವಾಗಿ ಸ್ಥಳೀಯವಾದ ಭಾವನೆಗಳಿಗೆ ಎಡೆಮಾಡಿಕೊಟ್ಟವು. ವಿಚಾರಗಳೂ, ಸಿದ್ಧಾಂತ ಹಾಗೂ ಸಾಧನ ಸಲಕಲರಣೆಗಳೂ ಪ್ರಯೋಗಗಳೂ ಸ್ಥಳೀಯವಾಗಿದ್ದರೂ ಅವು ಅದ್ವಿತೀಯವಾಗಿದ್ದವು, ಯಾವುದೇ ವಿದೇಶೀ ಪ್ರಯೋಗಗಳಿಗೆ ಸರಿಸಾಟಿಯಾಗಿದ್ದವು. ಈ ನಾವೀನ್ಯತೆಯೇ ಭಾರತೀಯ ವಿಜ್ಞಾನಿಗಳಿಗೆ ಅಂತರರಾಷ್ಟ್ರೀಯ ಮಾನ್ಯತೆ ತಂದು ಕೊಟ್ಟುದು ಹಾಗೂ ಸಮಕಾಲೀನ ಭಾರತದಲ್ಲಿ ವಿಜ್ಞಾನದ ಬೆಳವಣಿಗೆಗೆ ಬಹುಮುಖ್ಯ ಆಧಾರ ಕಲ್ಪಿಸಿಕೊಟ್ಟುದು.

**ಸಮಕಾಲೀನ ಭಾರತದಲ್ಲಿ ವಿಜ್ಞಾನದ ಮುನ್ನಡೆ**

ಕೈಗಾರಿಕೆಯು ಒಂದು ಸಾಮಾಜಿಕ ವ್ಯವಸ್ಥೆ. ಇದಕ್ಕೂ ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಗೂ ನಡುವೆ



ನಿಕಟ ಸಂಬಂಧವಿದೆ. ಇದನ್ನರಿತೇ ಭಾರತದ ಮಹೋನ್ನತ ಕೈಗಾರಿಕೋದ್ಯಮಿ ಹಾಗೂ ಪ್ರಜ್ಞಾವಂತ ಸರ್ ಜೆ. ಎನ್. ಟಾಟಾರವರು ಬೆಂಗಳೂರಿನಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ ಸ್ಥಾಪಿಸಿದುದು.

ತತ್ಫಲವಾಗಿ ಭಾರತದಲ್ಲಿ ಕೈಗಾರಿಕೋದ್ಯಮ ದಾಪುಗಾಲು ಹಾಕಿಕೊಂಡು ಮುಂದುವರಿದಿದೆ. ಆದರೆ ಅದರ ಫಲ ಜನರಿಗೆ ಸಿಗಬೇಕಾದರೆ ಆಡಳಿತಾರೂಢ ಸರಕಾರ ಅನುಗುಣವಾದ ಕೈಗಾರಿಕಾ ನೀತಿಯನ್ನು ಅನುಸರಿಸುತ್ತಿರಬೇಕು. ಯಾವ ರಾಜಕೀಯ ಪಕ್ಷವೇ ಅಧಿಕಾರದಲ್ಲಿದ್ದರೂ ಕಳೆದ ಇಪ್ಪತ್ತು ವರ್ಷಗಳಲ್ಲಿ ಹೆಚ್ಚು ಕಡಿಮೆ ಸ್ಥಿರವಾಗಿ ಅನುಸರಿಸಿಕೊಂಡು ಬರುತ್ತಿರುವ ಕೈಗಾರಿಕಾ ನೀತಿಯ ಸಾರವನ್ನು ಈ ಕೆಳಗಿನ ಮೂರು ಮಾತುಗಳಲ್ಲಿ ವರ್ಣಿಸಬಹುದು – ಜಾಗತೀಕರಣ, ಪುನರ್ರಚನೆ ಹಾಗೂ ಉದಾರೀಕರಣ. ಭಾರತೀಯ ಕೈಗಾರಿಕೆಯನ್ನು ಸ್ಪರ್ಧಾತ್ಮಕವನ್ನಾಗಿ ಮಾಡಲು, ಬೆಳವಣಿಗೆಯ ದರವನ್ನು ಹೆಚ್ಚಿಸಲು ಮತ್ತು ವಿದೇಶೀ ವಿನಿಮಯದ ಮೀಸಲು ನಿಧಿ ಸಂಗ್ರಹವನ್ನು ಅಧಿಕಗೊಳಿಸಲು ಇದು ಅವಶ್ಯ ಎನ್ನಲಾಗುತ್ತಿದೆ.

ಆದರೆ ಈ ನೀತಿ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯ ಮೇಲೆ ಯಾವ ಪರಿಣಾಮ ಬೀರಿದೆ ಎನ್ನುವುದನ್ನು ಪರಿಶೀಲಿಸುವುದು ಉಚಿತ. ಭಾರತ್ ಎಲೆಕ್ಟ್ರಾನಿಕ್ಸ್ ದೇಶದ ಅಗ್ರಗಾಮೀ ಸಾರ್ವಜನಿಕ ವಿಭಾಗ ಕಂಪೆನಿಗಳಲ್ಲೊಂದು. ನಮ್ಮ ರಕ್ಷಣಾ ವಿಭಾಗಕ್ಕೆ ಸೇವೆ ಸಲ್ಲಿಸಲೆಂದೇ ಇದನ್ನು ಸ್ಥಾಪಿಸಲಾಯಿತು. ಇದರಲ್ಲಿ ಸಂಶೋಧನ ಹಾಗೂ ವಿಕಸನ (ಆರ್ ಅಂಡ್ ಡಿ) ವಿಭಾಗವೊಂದಿದೆ. ಅದು ದೇಶದ ಇತರ ಅಂಥವೇ ಸಂಸ್ಥೆಗಳೊಂದಿಗೂ ಪ್ರಯೋಗಶಾಲೆಗಳೊಂದಿಗೂ ನಿಕಟ ಸಂಪರ್ಕ ಇರಿಸಿಕೊಂಡು ಕೆಲಸ ಮಾಡುತ್ತಿದೆ. ಆದರೆ ಇಂದು ಜಾಗತೀಕರಣದ ನೆಪದಲ್ಲಿ ದೇಶದ ರಕ್ಷಣಾ ಕಾಂಟ್ರಾಕ್ಟುಗಳನ್ನೆಲ್ಲ ಬಹುರಾಷ್ಟ್ರೀಯ ಕಂಪೆನಿಗಳಿಗೆ ನೀಡಲಾಗುತ್ತಿದೆ. ಕಂಪೆನಿಯನ್ನು ಪುನರ್ರಚಿಸಿ ವೆಚ್ಚ ತಗ್ಗಿಸಬೇಕೆಂದು ಆದೇಶ ನೀಡಲಾಗಿದೆ. ಇದರ ಮೊದಲ ಹೊಡೆದ ತಿಂದುದೆಂದರೆ - ವಿಜ್ಞಾನ ತಂತ್ರಜ್ಞಾನ ವಿಭಾಗ. ಕಂಪೆನಿಯು ಅಂತರರಾಷ್ಟ್ರೀಯವಾಗಿ ಸ್ಪರ್ಧಿಸಬೇಕೆಂದರೆ ಯಂತ್ರ ತಂತ್ರದ ನಾವೀನ್ಯತೆ ಅತ್ಯಗತ್ಯ. ಆದರೆ ಹ್ರಸ್ವಗೊಳಿಸಿದ ಸಂಶೋಧನ ಹಾಗೂ ವಿಕಸನ ವಿಭಾಗ ಇದನ್ನು ಮಾಡಲಾರದೆ ಹೋಗಿದೆ. ಇನ್ನು ಬಹುರಾಷ್ಟ್ರೀಯ ಕಂಪೆನಿಗಳ ಎದುರು ಸ್ಪರ್ಧಿಸುವುದೆಂತು ? ಅಗ್ರಗಾಮೀ ಸಾಮಾಜಿಕ ಸಂಸ್ಥೆಯಾಗಿ ಭಾರತ್ ಎಲೆಕ್ಟ್ರಾನಿಕ್ಸ್ ಇಂದು ಬಹುರಾಷ್ಟ್ರೀಯ ಕಂಪೆನಿಗಳ ಸವಾಲನ್ನು ಎದುರಿಸಲಾಗದೆ ಸಾವಿನಂಚಿನಲ್ಲಿದೆ ಎನ್ನಬಹುದು. ಎಲೆಕ್ಟ್ರಾನಿಕ್ಸ್ ಇಂಜಿನಿಯರುಗಳು, ಭೌತಶಾಸ್ತ್ರಜ್ಞರು, ಗಣಿತ ಶಾಸ್ತ್ರಜ್ಞರು ಎಲ್ಲ ಸ್ಫೂರ್ತಿಯನ್ನೂ ಕಳೆದುಕೊಂಡು ನಿಸ್ಸಹಾಯಕರಂತಾಗಿದ್ದಾರೆ.

ಭಾರತ್ ಹೆವಿ ಎಲೆಕ್ಟ್ರಾನಿಕ್ಸ್‌ನ ಕಥೆಯೂ ಇದೇ ಆಗಿದೆ. ಒಂದು ವರ್ಷದೊಳಗೆ ಲಾಭ ತಂದುಕೊಡಬೇಕು, ವೆಚ್ಚಗಳನ್ನು ಗಣನೀಯವಾಗಿ ಕಡಿಮೆ ಮಾಡಬೇಕು, ಹಾಗಿದ್ದಲ್ಲಿ ಮಾತ್ರ ಸಂಶೋಧನ ಹಾಗೂ ವಿಕಸನ ವಿಭಾಗಕ್ಕೆ ನೆರವು ನೀಡಲು ಸಾಧ್ಯ ಎಂದು ಇಂದಿನ ಕೈಗಾರಿಕಾ ನೀತಿ ಸಾರುತ್ತಿದೆ. ಆದರೆ ಬಹುರಾಷ್ಟ್ರೀಯ ಕಂಪೆನಿಗಳು ಹೆಚ್ಚು ಹೆಚ್ಚು ಎಲೆಕ್ಟ್ರಿಸಿಟಿ ಬೋರ್ಡ್ ಕಾಂಟ್ರಾಕ್ಟುಗಳನ್ನು ಕಬಳಿಸುತ್ತಿರುವಾಗ ಅವುಗಳೊಂದಿಗೆ ದೇಶೀಯ ಸಂಶೋಧನ ವಿಕಾಸನ ವಿಭಾಗ ಸ್ಪರ್ಧಿಸುವುದು ಸಾಧ್ಯವಿಲ್ಲದಂತಾಗಿದೆ. ಪೆಟ್ರೋಲಿಯಮ್ ಕೈಗಾರಿಕೆಯ ಸಂಶೋಧನ ಹಾಗೂ ವಿಕಸನ ವಿಭಾಗವೂ ಇದೇ ದಾರುಣ ಸ್ಥಿತಿಯಲ್ಲಿದೆ. ರಾಷ್ಟ್ರೀಕೃತ ತೈಲ ಕೈಗಾರಿಕೆಗೆ

ನೀಡುತ್ತಿದ್ದ ಸಹಾಯಧನ ಮೊಟಕುಗೊಳಿಸಿ ಸರಕಾರವು ದೈನಂದಿನ ಕಾರ್ಯಾಚರಣೆಗೂ ಮೀಸಲು ನಿಧಿಯನ್ನೇ ಬಳಸುವಂತೆ ತೈಲ ಕೈಗಾರಿಕೆಯ ಮೇಲೆ ಒತ್ತಡ ತಂದಿದೆ. ಹಿಂದೆ ಈ ಮೀಸಲು ನಿಧಿಯನ್ನು ಸಂಶೋಧನೆ ಹಾಗೂ ನಾವಿನ್ಯತೆಗಳಿಗಾಗಿ ಬಳಸಲಾಗುತ್ತಿತ್ತು.

ಮಧ್ಯಮ ಪ್ರಮಾಣದ ತಯಾರಿಕಾ ಕೈಗಾರಿಕೆಗಳ ನಾವಿನ್ಯತಾ ಆಕರಗಳೂ ಹೊಸ ಪೇಟೆಂಟ್ ವ್ಯವಸ್ಥೆಯಡಿ ನಶಿಸುತ್ತಿವೆ. ೧೯೭೦ರ ಪೇಟೆಂಟ್ ಆ್ಯಕ್ಟನ್ನು ರದ್ದುಗೊಳಿಸಿ ಈಗ ಒಂದು ಹೊಸ ಅಮೆರಿಕನ್ - ಪ್ರೇರಿತ 'ಉತ್ಪನ್ನ ಹಾಗೂ ಪ್ರಕ್ರಿಯೆ ಪೇಟೆಂಟ್' ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ಫಲವಾಗಿ ಮಧ್ಯಮ ಪ್ರಮಾಣದ ಕೈಗಾರಿಕೆಗಳು ಬಹುರಾಷ್ಟ್ರೀಯ ಕಂಪೆನಿಗಳಿಗೆ ಸಹಾಯಕ ವ್ಯಾಪಾರೀ ಸಂಸ್ಥೆಗಳಾಗಿ ಪರಿವರ್ತನಗೊಳ್ಳುತ್ತಿವೆ.

ಹೀಗೆ ನಮ್ಮ ಕೈಗಾರಿಕೆಗಳು ಇಂಜಿನಿಯರುಗಳಿಗೂ ವಿಜ್ಞಾನಿಗಳಿಗೂ ನಾವೀನ್ಯತೆ ಪ್ರಕ್ರಿಯೆಯ ಹಾಗೂ ಸಂಶೋಧನೆಯ ಸ್ಫೂರ್ತಿ ಆಕರಗಳಾಗಿರುವ ಬದಲು ಸರಕಾರದ ಉದಾರೀಕರಣ ನೀತಿಯ ಫಲವಾಗಿ, ನಿರುತ್ಸಾಹದ ನೆಲೆಗಳಾಗಿ ಮಾರ್ಪಟ್ಟಿವೆ. ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗಗಳು ಬಹುರಾಷ್ಟ್ರೀಯ ಕಂಪೆನಿಗಳ ನಿಯಂತ್ರಣಕ್ಕೊಳಪಟ್ಟು ನಮ್ಮ ಇಂಜಿನಿಯರುಗಳೂ ವಿಜ್ಞಾನಿಗಳೂ ಅವುಗಳಿಗೆ ಅಗ್ಗ ದುಡಿಮೆಯ ಕಾರ್ಯ ಕರ್ತರಾಗಿ ದುಡಿಯುವ ಒತ್ತಾಯಕ್ಕೊಳಗಾಗಿದ್ದಾರೆ. ಹೀಗೆ ವಸಾಹತು ದಿನಗಳಲ್ಲಿದ್ದಂಥ ಪರಿಸ್ಥಿತಿಯೇ ಮರುಕಳಿಸುವಂತಾಗಿದೆ. ನಮ್ಮ ದೇಶವು ಪ್ರಾಥಮಿಕ ಕಚ್ಚಾ ಪದಾರ್ಥಗಳನ್ನೂ ಅಗ್ಗದ ಶ್ರಮವನ್ನೂ ಒದಗಿಸುವಂತಾಗಿದೆ. ಅದೇ ಹೊತ್ತಿನಲ್ಲಿ ಬಹುರಾಷ್ಟ್ರೀಯ ಕಂಪೆನಿ ದೇಶಗಳು ನಮಗೆ ಸಮೃದ್ಧವಾಗಿ ಸಿದ್ಧಗೊಂಡ ತಯಾರಿತ ವಸ್ತುಗಳನ್ನು ಒದಗಿಸುತ್ತಿವೆ ಮತ್ತು ವಿಜ್ಞಾನ ಮತ್ತು ಇಂಜಿನಿಯರಿಂಗ್ ವಿಭಾಗಗಳಲ್ಲಿ ತಮ್ಮವೇ ಆದ ನವೀನ ಪದ್ಧತಿಗಳನ್ನು ಜಾರಿಗೆ ತರುತ್ತಿವೆ.

ಹೀಗೆ ನಾವು ಒಂದು ಬಲೆಯಲ್ಲಿ ಸಿಕ್ಕಿಬಿದ್ದಂತಾಗಿದ್ದೇವೆ. ಬೆಳವಣಿಗೆಗಾಗಿ ನಾವು ಅಂತರರಾಷ್ಟ್ರೀಯ ಹಣಕಾಸು ನಿಧಿ ಹಾಗೂ ವಿಶ್ವಬ್ಯಾಂಕುಗಳನ್ನು ಅವಲಂಬಿಸಬೇಕಾಗಿದೆ. ಸಾಲ ನೀಡಲು ಅವು ಉದಾರೀಕರಣದ ಷರತ್ತು ಹಾಕುತ್ತಿವೆ. ನಮ್ಮ ದೇಶದೊಳಕ್ಕೆ ವಿದೇಶೀ ಬಂಡವಾಳ ಹಾಗೂ ಆಮದುಗಳು ಮುಕ್ತವಾಗಿ ಹರಿದು ಬರುವಂತೆ ಮಾಡಲು ನಿರ್ಬಂಧಗಳನ್ನೆಲ್ಲ ತೊಡೆದು ಹಾಕಬೇಕೆಂದು ಒತ್ತಾಯಿಸುತ್ತಿವೆ. ಅದೇ ಹೊತ್ತಿನಲ್ಲಿ ನಮ್ಮ ಕೃಷಿ ಮತ್ತಿತರ ಪದಾರ್ಥಗಳು ಪಾಶ್ಚಿಮಾತ್ಯ ಮಾರುಕಟ್ಟೆ ಪ್ರವೇಶಿಸಲು ಗಡುಸಾದ ಸುಂಕ ಅಡೆತಡೆಗಳನ್ನು ಹಾಕಲಾಗುತ್ತಿದೆ. ದೇಶೀಯ ಕೈಗಾರಿಕೆಗಳು ಕುಗ್ಗಿ ದೇಶೀಯ ಸಂಶೋಧನೆ ಹಾಗೂ ವಿಕಾಸ ನಿರ್ನಾಮಗೊಂಡು ಅಭಿವೃದ್ಧಿಶೀಲ ದೇಶಗಳು ಕೊನೆಯಲ್ಲಿ ವಿಕಸಿತ ದೇಶಗಳ ಸಾಲ ಸೋಲಗಳ ಮೇಲೆ ಅವಲಂಬಿತವಾಗಿರುವಂತೆ ಮಾಡುವುದೇ ಬಹುರಾಷ್ಟ್ರೀಯ ಕಂಪೆನಿಗಳ ಹೆಗ್ಗುರಿಯಾಗಿದೆ. ಅದಕ್ಕೆ ವಿಜ್ಞಾನವೂ ಬಲಿಪಶು.

ಬಹುರಾಷ್ಟ್ರೀಯ ಕಂಪೆನಿಗಳು ಭಾರತದಂಥ ದೇಶದೊಳಕ್ಕೆ ಬರುತ್ತಿರುವುದಾದರೂ ಏಕೆ? ಇಲ್ಲಿ ಸಂಶೋಧನೆ ಹಾಗೂ ವಿಕಾಸಕ್ಕಾಗಿ ಹಣ ತೊಡಗಿಸುತ್ತಿರುವುದಾದರೂ ಏಕೆ ? ಇಲ್ಲಿ ಶೋಷಣೆಗೆ ಅವಕಾಶಗಳು ಅಧಿಕ ಹಾಗೂ ಶ್ರಮಶಕ್ತಿ ಅಗ್ಗ ಎನ್ನುವುದೇ ಇದಕ್ಕೆ ಕಾರಣ. ಪಾಶ್ಚಿಮಾತ್ಯ ದೇಶಗಳಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನಗಳ ಅನುಷ್ಠಾನದ ವೆಚ್ಚ ಭಾರತದಲ್ಲಾಗುವ ವೆಚ್ಚಕ್ಕಿಂತ ಹಲವಾರು ಪಟ್ಟು ಅಧಿಕ. ನಿಜ, ಬಹುರಾಷ್ಟ್ರೀಯ ಕಂಪೆನಿಗಳು ಭಾರತಕ್ಕೆ ಈಚೆಗಷ್ಟೆ ಬರತೊಡಗಿವೆ. ಅವು ಇಲ್ಲಿ ನಡೆಸುವ ಸಂಶೋಧನೆಯನ್ನು ತಮ್ಮ ದೇಶಗಳಲ್ಲೇ ನಡೆಸುತ್ತಿರುವ ಸಂಶೋಧನೆಗಳೊಂದಿಗೆ ಸಂಬಂಧಿಸಲು ಇನ್ನೂ ಗಹನವಾದ ಯತ್ನಗಳನ್ನು ಮಾಡುತ್ತಿಲ್ಲ. ಆದರೂ ಬಹುರಾಷ್ಟ್ರೀಯ ಕಂಪೆನಿಗಳ ಆಸಕ್ತಿಯೆಲ್ಲ ದೇಶೀಯ ಹಿತಗಳನ್ನು ಉಪೇಕ್ಷಿಸಿ ಸ್ವಂತ ಲಾಭ ಮಾಡುವುದಷ್ಟೇ ಆಗಿದೆ ಎಂಬುದಂತೂ ಈಗಾಗಲೇ ಸುಸ್ಪಷ್ಟವಾಗಿದೆ. ಮೊನ್‌ಸೆಂಟೋ, ಫೋರ್ಡ್ ಮತ್ತಿತರ ಬಹುರಾಷ್ಟ್ರೀಯ ಕಂಪೆನಿಗಳ ಚಟುವಟಿಕೆಗಳೇ ಇದಕ್ಕೆ ಜ್ವಲಂತ ನಿದರ್ಶನ (ಯೂನಿಲಿವರ್ ಕಂಪೆನಿಯಷ್ಟೇ ಇದಕ್ಕೆ ಅಪವಾದ ಎನ್ನಬಹುದು).

ವಿದೇಶೀ ಕೈಗಾರಿಕೆಗಳಿಗೆ ಮುಕ್ತ ಪ್ರವೇಶ ಒದಗಿಸುವ ನೀತಿಯು ದೇಶೀಯ ಸಂಶೋಧನೆ ಹಾಗೂ ವಿಕಾಸಕ್ಕೆ ಪ್ರಯೋಜನಕಾರಿಯೇ ಎಂದು ವಾದಿಸಿ ಕೆಲವರು ಅದಕ್ಕೆ ಜಪಾನಿನ ನಿದರ್ಶನವನ್ನು ನೀಡಬಹುದು. ಆದರೆ ಜಪಾನಿನಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ಚಟುವಟಿಕೆಗಳ ಮೇಲೆ ಮತ್ತು ಅವುಗಳ ಸಂಶೋಧನೆ ಹಾಗೂ ವಿಕಾಸ ಕಾರ್ಯಕ್ರಮಗಳ ಮೇಲೆ ಜಪಾನೀ ಸರಕಾರದ ಕಟ್ಟುನಿಟ್ಟಾದ ನಿಯಂತ್ರಣವಿದ್ದಿತೆಂಬುದನ್ನು ಮರೆಯಲಾಗದು. ಜಪಾನೀ ಸರಕಾರವು ತನ್ನ ಕೈಗಾರಿಕೆಗಳ ರಚನೆಯಲ್ಲಿ ನಾವೀನ್ಯತೆಯನ್ನು ಜಾರಿಗೆ ತಂದು ೧೯೭೨ ರಿಂದಾಚೆಗೆ ತನ್ನ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶೇ. ೭.೨ ರಷ್ಟನ್ನು ವಿಜ್ಞಾನ ತಂತ್ರಜ್ಞಾನಗಳ ವಿಕಸನಕ್ಕಾಗಿ ವ್ಯಯ ಮಾಡತೊಡಗಿತು. ಕೈಗಾರಿಕೆಗಳು, ವಿಶ್ವವಿದ್ಯಾಲಯಗಳು, ಸರಕಾರಿ ಪ್ರಯೋಗ ಶಾಲೆಗಳು, ಇವುಗಳ ನಡುವೆ ದೃಢ ಸಾವಯವ ಸಂಬಂಧ ಏರ್ಪಡಿಸಿತು. ಹಾಗಾಗಿಯೇ ಇಂದು ಜಪಾನ್ ವಿಜ್ಞಾನ ತಂತ್ರಜ್ಞಾನದಲ್ಲಿ ಜಗತ್ತಿನಲ್ಲೇ ಅಗ್ರಸ್ಥಾನ ಪಡೆದಿದೆ.

ಜಪಾನಿನ ಯಶಸ್ಸಿಗೆ ಮತ್ತೊಂದು ಕಾರಣವೆಂದರೆ - ಸಾಮಾನ್ಯ ರೈತನಿಂದ ಹಿಡಿದು ನೊಬೆಲ್ ಪ್ರಶಸ್ತಿ ವಿಜೇತನವರೆಗೆ ಪ್ರತಿಯೊಬ್ಬ ಜಪಾನೀ ಪ್ರಜೆಯೂ ತನ್ನ ದೇಶದ ಏಳಿಗೆಗೆ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುವುದಾಗಿದೆ. ಇದಕ್ಕಾಗಿ ಅವನು ಎಂಥ ತ್ಯಾಗಕ್ಕೂ ಸಿದ್ಧ. ಜಪಾನಿನಲ್ಲಿ ತಯಾರಾದ 'ವಸ್ತುಗಳು' ಜಗತ್ತಿನಲ್ಲೇ ಅತ್ಯುತ್ತಮವಾದವುಗಳನ್ನಾಗಿ ಮಾಡಲು ಅವನು ಸದಾ ಹೆಣಗುತ್ತಿರುತ್ತಾನೆ. ಉದಾಹರಣೆಗೆ, ಜಪಾನೀ ವಿಜ್ಞಾನಿಯೊಬ್ಬನ ಕೆಲಸದ ವೇಳೆ ಜಗತ್ತಿನ ಯಾವುದೇ ಮಟ್ಟದೊಂದಿಗೆ ಹೋಲಿಸಿದರೂ ನಂಬಲಾಗದಷ್ಟು ಅತಿಯಾದುದೆನ್ನಬಹುದು. ನಿಜ, ಇದರಲ್ಲಿ ಸ್ವದೇಶ - ಪ್ರತಿಷ್ಠೆ ಹಾಗೂ ವ್ಯಾಮೋಹದ ಋಣಾತ್ಮಕ ಅಂಶವೂ ಇದೆಯೆನ್ನಿ.

ನಮ್ಮ ದೇಶದಲ್ಲೇ ಇಂದಿನ ರಾಜಕೀಯ, ಸಾಮಾಜಿಕ ಹಾಗೂ ನೈತಿಕ ಪರಿಸ್ಥಿತಿಗಳನ್ನು ಪರಿಗಣಿಸಿದಾಗ, ಇವುಗಳ ನಡುವೆ ಸಾಮಾಜಿಕ ಸಂಯೋಜನೆಯೊಂದು ಏರ್ಪಟ್ಟಿಲ್ಲವೆಂದೇ ಸ್ಪಷ್ಟವಾಗಿ ಕಂಡುಬರುತ್ತದೆ. ಅಂತಹ ಸಂಯೋಜನೆ ಇಲ್ಲದೆ ರಾಷ್ಟ್ರೀಯ ಬೆಳವಣಿಗೆಗೆ ಕಾಣಿಕೆ ನೀಡುವಂತೆ ಭಾರಿ ವೈಜ್ಞಾನಿಕ ಸಮುದಾಯದ ಮೇಲೆ ಒತ್ತಡ ತರಲು ಸಾಧ್ಯವಿಲ್ಲ. ಆದರೆ ಸಾವಯವ ಸ್ವರೂಪದ ಅಂಥ ಸಂಯೋಜನೆ ರಾಜಕೀಯ ನಾಯಕರಿಂದ ಬರುವಂಥದಲ್ಲ. ಬದಲು ಸ್ಥಳೀಯ ಹಾಗೂ ರಾಷ್ಟ್ರೀಯ ಹಿತಗಳನ್ನು ಗಂಡಾಂತರಕ್ಕೊಳಪಡಿಸುವಂಥ ವಿಷಯಗಳಿಗೆ ಸಂಬಂಧಿಸಿ ನಡೆಸುವ ಚಳವಳಿಗಳಲ್ಲಿ ವೈಜ್ಞಾನಿಕ ಸಮುದಾಯದ ಸದಸ್ಯರೂ ಭಾಗವಹಿಸುವಂತೆ ಮಾಡುವ ಮೂಲಕ ಅಂತಹ ಸಂಯೋಜನೆಯನ್ನು ಉಂಟು ಮಾಡುವುದು ಸಾಧ್ಯ. ಈ ಚಳವಳಿ ಹಾಗೂ ಸಂಯೋಜನೆ ಎಷ್ಟು ಚೈತನ್ಯಶೀಲವಾಗಿದ್ದರೆ ಅಷ್ಟೂ ಪ್ರಬಲವಾದ ಶಕ್ತಿಯ ಉದಯವಾಗುತ್ತದೆ. ಆ ಶಕ್ತಿ ಇಂದಿನ ಅಹಿತಕಾರಿ ರಚನೆಯನ್ನು ಭಂಗಗೊಳಿಸಿ ರಾಷ್ಟ್ರ ನಿರ್ಮಾಣದ ಹೊಸ ಕಾರ್ಯಸೂಚಿಯೊಂದನ್ನು ಹಾಕಿಕೊಡಬಲ್ಲುದು. ಇದೊಂದೇ ಇಂದು ಕಾಣಬರುತ್ತಿರುವ ಮುಕ್ತಿ ಮಾರ್ಗ ಹಾಗೂ ಭರವಸೆ.

ಡಾ|| ಸಂಜಯ್ ಕೆ. ಬಿಸ್ವಾಸ್
ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಭಾಗದ ಪ್ರಾಧ್ಯಾಪಕರು,
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೧೨

*'ಹೊಸತು'ಗಾಗಿಯೇ ಬರೆಯಲಾದ ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಪಡಿಸಿಕೊಟ್ಟವರು ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್.*

# ಮಿದುಳು ಬ್ಯಾಂಕ್ : ಒಂದು ಆಶಾದೀಪ

ಡಾ॥ ಎಮ್. ಎಸ್. ಎಸ್. ಮೂರ್ತಿ

*ಅನ್ವೇಷಿಸು, ನನ್ನ ಮಿದುಳಿನ ಮೂಲೆ ಮೂಲೆಗಳನು*
*ಅರಿತುಕೊ ಅಲ್ಲಿನ ನರಕೋಶಗಳ ಮರ್ಮಗಳನು*
*ಮೂಕ ಬಾಲಕನೊಬ್ಬ ಹಕ್ಕಿಹಾಡನು ಕೇಳಿ ಕೇಕೆ ಹಾಕಲಿ ಮುಂದೆ,*
*ಕಿವುಡು ಬಾಲಕಿಯೊರ್ವಳು ಕಿಟಕಿ ಗಾಜಿಗೆ ಬಡಿವ ಮಳೆ ಹನಿಯ ನಾದಕ್ಕೆ ತಾಳ ಹಾಕಲಿ ಇಂದೇ.*
*ಹೂಳಬೇಕಾದರೆ - ಇಕೊ ನನ್ನ ಸೋಲು, ನನ್ನ ನ್ಯೂನತೆ ನಾ ಮಾಡಿದ ಪರನಿಂದೆ.*

*– ಅನಾಮಿಕ*

ಐವತ್ತು ವರ್ಷದ ರಾಮಚಂದ್ರಪ್ಪನಿಗೆ "ಮಂಕು ಬಡಿದಿದೆ." ಈಗ ಕೆಲವು ವರ್ಷಗಳ ಹಿಂದೆ ಆತ ನಿವೃತ್ತಿ ಪಡೆದು, ಸ್ನೇಹಿತರೊಂದಿಗೆ ಸೇರಿ ಸ್ವಂತ ಉದ್ದಿಮೆ ಹಚ್ಚಿಕೊಂಡ. ಪ್ರಾರಂಭದಲ್ಲಿ ಅದು ಉತ್ತೇಜಕ ವಾಗಿದ್ದರೂ ಕ್ರಮೇಣ ನಷ್ಟದ ಹೊರೆ ಹೆಚ್ಚಾಯಿತು. ಸ್ನೇಹಿತರು ಜಾರಿಕೊಂಡರು. ಅವನ ಬಂಡವಾಳವೆಲ್ಲಾ ನೀರು ಪಾಲಾಯಿತು. ಈಗ ಅವನಿಗೆ ಉಳಿದಿರುವುದು ಈ ಮಂಕು ಮಾತ್ರ. ಮನೆಯವರು ಮೊದಮೊದಲು ಅಷ್ಟು ಗಮನ ಕೊಡಲಿಲ್ಲ, ಯಾರೋ ವಿರೋಧಿಗಳು ಮಾಟ ಮಾಡಿದ್ದಾರೆಂದು ನಂಬಿ ಅದರ ಪರಿಹಾರಕ್ಕಾಗಿ ಮತ್ತಷ್ಟು ಕಾಲ ಕಳೆದರು. ಈಗ ಬೆಂಗಳೂರಿನಲ್ಲಿ ಮಾನಸಿಕ ವೈದ್ಯರಿಂದ ಚಿಕಿತ್ಸೆ ನಡೆಯುತ್ತಿದೆ. ರಾಮಚಂದ್ರಪ್ಪನಿಗೆ ಆಗಿರುವುದು ಖಿನ್ನತೆ ಎಂಬ ಮನೋರೋಗ ಎಂದು ವೈದ್ಯರ ಅಭಿಪ್ರಾಯ. ಮಾನಸಿಕ ರೋಗಗಳ ಬಗ್ಗೆ ಈ ರೀತಿ ತಪ್ಪು ತಿಳುವಳಿಕೆಗೆ ರಾಮಚಂದ್ರಪ್ಪ ಮಾತ್ರ ಬಲಿಯಲ್ಲ, ಜನಸಾಮಾನ್ಯರಲ್ಲಿ ಇದು ವಿಪುಲವಾಗಿದೆ.

ಮನುಷ್ಯನ ಮಾನಸಿಕ ಚಟುವಟಿಕೆಗಳ ಮೂಲ ಮಿದುಳು. ನೂರು ದಶಕೋಟಿ ನರಕೋಶಗಳಿಂದ ರಚಿತವಾದ ಮಿದುಳು ಅವನ ದೇಹದ ಪ್ರತಿಯೊಂದು ಕ್ರಿಯೆಯನ್ನು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ನಿಯಂತ್ರಿಸುವುದೇ ಅಲ್ಲದೆ ಅವನನ್ನು ಸೃಜನಶೀಲ ವ್ಯಕ್ತಿಯನ್ನಾಗಿಯೂ ಮಾಡುತ್ತದೆ. ಮನುಷ್ಯನಿಗೆ ಯೋಚಿಸುವ ಶಕ್ತಿ ಇದೆ. ಅವನು ಸಂವೇದನಶೀಲ. ಭಾಷೆ ಕಲಿತು ಸಂಪರ್ಕ ಸಾಧಿಸಬಲ್ಲ, ಭವಿಷ್ಯತ್ತಿಗಾಗಿ ಯೋಜನೆಗಳನ್ನು ತಯಾರಿಸಿ ಅವುಗಳನ್ನು ಕಾರ್ಯ ರೂಪಕ್ಕೆ ತರಬಲ್ಲ. ಈಗ ಕೆಲವು ದಶಕಗಳಿಂದ ನಡೆಯುತ್ತಿರುವ ಮಿದುಳಿನ ಅಧ್ಯಯನದಿಂದ ಅದರ ರಚನೆ ಮತ್ತು ಕ್ರಿಯಾಶೀಲತೆಯ ಬಗ್ಗೆ ಬಹಳಷ್ಟು ಮಾಹಿತಿ ದೊರೆತಿದೆ. ಆದೇ ಮಿದುಳಿನ ಸಂಕೀರ್ಣತೆಯೊಡನೆ ಹೋಲಿಸಿದರೆ ಅದು ಸಮುದ್ರದ ಒಂದು ಹನಿ ನೀರಿನಷ್ಟು ಮಾತ್ರ. ಹಾಗಾಗಿ ಇಷ್ಟು ಮಹತ್ವವಾದ ಅಂಗ ಜನಸಾಮಾನ್ಯರ ದೃಷ್ಟಿಯಲ್ಲಿ ನಿಗೂಢವಾಗಿಯೇ ಉಳಿದಿದೆ. ಜನರಿಗೆ ಮಿದುಳಿನ ಬಗ್ಗೆ ವೈಜ್ಞಾನಿಕ ಪರಿಚಯವನ್ನು ಕೊಡಬೇಕೆನ್ನುವ ಉದ್ದೇಶದಿಂದ ಪ್ರತಿವರ್ಷ ವಿಶ್ವಾದ್ಯಂತ "ಮಿದುಳಿನ ತಿಳುವಳಿಕೆ ಸಪ್ತಾಹ" ಆಚರಿಸಲಾಗುತ್ತದೆ. ಭಾರತದಲ್ಲಿ ಪ್ರಥಮ ಬಾರಿಗೆ ಕಳೆದ ಮಾರ್ಚ್ ೧೩ ರಿಂದ ೧೯ರವರೆಗೆ ಈ ಸಪ್ತಾಹವನ್ನು ಆಚರಿಸಲಾಯಿತು. ಅದರ ಅಂಗವಾಗಿ ದೇಶದ ಪ್ರಮುಖ ನಗರಗಳಲ್ಲಿ ತಜ್ಞರಿಂದ ಉಪನ್ಯಾಸಗಳು, ಚರ್ಚೆಗಳು, ಸಮ್ಮೇಳನಗಳು ಇತ್ಯಾದಿ ಏರ್ಪಾಡಾಗಿದ್ದುವು. ಬೆಂಗಳೂರಿನ ವಿಶ್ವೇಶ್ವರಯ್ಯ ಮ್ಯೂಸಿಯಂನಲ್ಲಿ ಮಿದುಳಿನ ಬಗ್ಗೆ ಮಾಹಿತಿ ಕೊಡಲು ಒಂದು ಪ್ರದರ್ಶನ ಏರ್ಪಾಡಾಗಿದ್ದಿತು. ಅದರಲ್ಲಿ ನನ್ನ ಗಮನ ಸೆಳೆದ ವಿಷಯವೆಂದರೆ ಮಿದುಳು ಬ್ಯಾಂಕ್.

ಹೃದಯ, ಮೂತ್ರಪಿಂಡ ಮುಂತಾದ ಅಂಗಗಳನ್ನು ಒಬ್ಬರಿಂದ ಮತ್ತೊಬ್ಬರಿಗೆ ನಾಟಿ ಮಾಡಬಹುದು. ಆದರೆ ಮಿದುಳನ್ನು ನಾಟಿ ಮಾಡಲು ಇನ್ನೂ ಸಾಧ್ಯವಾಗಿಲ್ಲ. ಹಾಗಾದರೆ, ಮಿದುಳು ಬ್ಯಾಂಕಿನ ಅವಶ್ಯಕತೆಯಾದರೂ ಏನು ಎಂಬ ಪ್ರಶ್ನೆ ಬರುತ್ತದೆ.



*ಆರೋಗ್ಯವಂತ ಮಿದುಳಿನ ಒಂದು ಸೀಳುನೋಟ. ಮಿದುಳಿನ ಮೇಲ್ಪೈಯನ್ನು ಕಾರ್ಟೆಕ್ಸ್ ಎನ್ನುತ್ತಾರೆ. ಅಲ್ಲಿ ನರಕೋಶಗಳ ವಿಪುಲಜಾಲವಿರುತ್ತದೆ. ಕಪೋಲ ಮತ್ತು ಹಿಂಭಾಗದ ನರಕೋಶಗಳು ನೆನಪಿಗೆ ಸಾಧಕಾವಾಗಿರುತ್ತವೆ.*

ಇಷ್ಟು ಸಂಕೀರ್ಣವಾದ ಮಿದುಳಿನ ರಚನೆ ಮತ್ತು ಕ್ರಿಯಾಶೀಲತೆಗಳಲ್ಲಿ ನ್ಯೂನತೆಗಳು ಅಲ್ಲಲ್ಲಿ ಕಂಡುಬಂದರೆ ಆಶ್ಚರ್ಯವೇನಿಲ್ಲ, ಅವುಗಳಲ್ಲಿ ಕೆಲವು ಆನುವಂಶಿಕ, ಕೆಲವು ಆಜನ್ಮ. ಉಳಿದದ್ದು ನಮ್ಮ ಜೀವನ ಶೈಲಿ, ಪರಿಸರ ಮತ್ತು ಇತರ ಚಟುವಟಿಕೆಗಳ ಪ್ರಭಾವದಿಂದ ಉಂಟಾದದ್ದು. ಈ ನ್ಯೂನತೆಗಳು ಮನೋರೋಗಕ್ಕೆ ಕಾರಣವಾಗುತ್ತವೆ.

ಮನುಷ್ಯನ ದೇಹದಲ್ಲಿ ಯಾವುದೇ ರೋಗ ಕಾಣಿಸಿಕೊಂಡಾಗ ಅದರ ಬಗ್ಗೆ ವೈಜ್ಞಾನಿಕ ಅಧ್ಯಯನ ಹೇಗಾಗುತ್ತದೆ? ಪ್ರಾಣಿಗಳಲ್ಲಿ ಅದೇ ರೋಗ ಲಕ್ಷಣ ಗಳನ್ನು ಗುರುತಿಸಿ, ಸಂಬಂಧಪಟ್ಟ ಅಂಗಾಂಗಗಳಲ್ಲಿ ಕಂಡುಬರುವ ನ್ಯೂನತೆಗಳನ್ನು ಪರಿಶೀಲಿಸಿ, ಅದರ ಕಾರಣಗಳನ್ನು ಕಂಡು ಹಿಡಿದು, ಚಿಕಿತ್ಸೆಗಳನ್ನು ಮಾಡಿ ಅದರಿಂದ ಒದಗಿದ ಸಮಗ್ರ ಮಾಹಿತಿಯ ಆಧಾರದ ಮೇಲೆ ಮನುಷ್ಯನ ಚಿಕಿತ್ಸಾ ಕ್ರಮಗಳು ರೂಢಿಯಾಗುತ್ತವೆ. ಮನುಷ್ಯನ ಮತ್ತು ಪ್ರಾಣಿಗಳ ಅಂಗಾಂಗಗಳ ರಚನೆ ಮತ್ತು ಕ್ರಿಯಾ ಶೀಲತೆಯಲ್ಲಿ ಸಾಕಷ್ಟು ಸಾಮ್ಯವಿರುವುದರಿಂದ ಇದು ಸಾಧ್ಯ. ಆದರೆ, ಪ್ರಾಣಿಗಳ ಮಿದುಳಿನ ವಿಕಾಸಕ್ಕೂ, ಮನುಷ್ಯನ ಮಿದುಳಿನ ವಿಕಾಸಕ್ಕೂ ಅಜಗಜಾಂತರ. ಹಾಗಾಗಿ ಪ್ರಾಣಿಗಳ ಮಿದುಳು ಮನುಷ್ಯನ ಮಿದುಳಿಗೆ ಮಾದರಿ ಆಗಲಾರವು ಎಂದು ಬೆಂಗಳೂರಿನಲ್ಲಿರುವ ನಿಮ್ಹಾನ್ಸ್‌ನ ನ್ಯೂರೋಪೆಥಾಲಜಿ ವಿಭಾಗದ ಮುಖ್ಯಸ್ಥ ರಾದ ಡಾ॥ ಕೆ. ಎಸ್. ಶಂಕರ್ ಹೇಳುತ್ತಾರೆ. ಮನೋವಿಕಲ್ಪಕ್ಕೆ ಕಾರಣವಾದ ಸ್ಕಿಜೋಫ್ರೀನಿಯ ಎಂಬ ರೋಗವನ್ನೇ ತೆಗೆದುಕೊಳ್ಳಿ. ಸುಮಾರು ಒಂದು ಸಾವಿರ ಜನರ ನಡುವೆ ಒಬ್ಬರಲ್ಲಿ ಅದು ಕಾಣಿಸಿಕೊಳ್ಳುತ್ತದೆ. ಅದು ರೋಗಿಯ ವ್ಯಕ್ತಿತ್ವದ ಮೇಲೆ ಪ್ರಬಲವಾದ ಪರಿಣಾಮವನ್ನು ಬೀರಿ ಅವನ ಆಲೋಚನೆ, ಭಾವನೆ, ಸಂವೇದನೆ, ಸಾಮಾಜಿಕ ಪ್ರಜ್ಞೆ ಇವುಗಳನ್ನೆಲ್ಲಾ ಅಸ್ವಸ್ಥಗೊಳಿಸುತ್ತದೆ. ಆದರೆ ಈ ರೋಗ ಇಲಿಗಳಿಗಾಗಲೀ, ನಾಯಿಗಳಿಗಾಗಲೀ, ಚಿಂಪಾಂಜಿಗಳಿಗಾಗಲೀ ಬರಬಹುದೆಂಬುದಕ್ಕೆ ನಿದರ್ಶನಗಳಿಲ್ಲ. ಹಾಗಾದರೆ ಇದಕ್ಕೆ ಪರ್ಯಾಯ ವೇನು ? ಮೃತರ ಮಿದುಳನ್ನೇ ಅಧ್ಯಯನ ಮಾಡಿ ರೋಗದ ಬಗ್ಗೆ ಮಾಹಿತಿ ಗಳಿಸುವುದು.

ಉದಾಹರಣೆಗೆ, ಚಿತ್ತವೈಕಲ್ಯ (ಡಿಮೆನ್ಶಿಯಾ) ವೃದ್ಧಾಪ್ಯದಲ್ಲಿ ಕಂಡುಬರುವ ಒಂದು ರೋಗ. ಈಗ ಒಂದು ಶತಮಾನದ ಹಿಂದೆ ಜರ್ಮನಿಯ ಡಾ॥ ಅಲ್‌ಜೈಮರ್, ಚಿತ್ತ ವೈಕಲ್ಯದಿಂದ ಮೃತರಾದ ವರ ಮಿದುಳನ್ನು ತೆಗೆದು, ಹಾಳೆ ಹಾಳೆಯಾಗಿ ಕತ್ತರಿಸಿ, ಸೂಕ್ಷ್ಮದರ್ಶಕದ ಸಹಾಯದಿಂದ ಪರೀಕ್ಷಿಸಿದನು. ಆತ ಕಂಡದ್ದೇನು? ರೋಗಿಯ ಮಿದುಳಿನ ಬಹುಮಟ್ಟಿನ ನರಕೋಶಗಳ ಒಳಗೆ ಮತ್ತು ಹೊರಗೆ ಕೆಲವು ವಿಶಿಷ್ಟ ಪ್ರೋಟೀನ್‌ಗಳು ಶೇಖರಿಸಿದ್ದು, ನರಕೋಶಗಳು ನಶಿಸಿಹೋಗಿದ್ದುವು. ರೋಗಿಗಳಲ್ಲಿ ಕಂಡುಬರುವ ತೀವ್ರ ಮರೆವು ಮತ್ತು ಅವರ ವರ್ತನೆಯಲ್ಲಿ ಆಗುವ ಅತಿರೇಕದ ಬದಲಾವಣೆಗಳಿಗೆ ನರಕೋಶಗಳ ನಾಶವೇ ಕಾರಣವೆಂದು ಡಾ॥ ಅಲ್‌ಜೈಮರ್ ತೀರ್ಮಾನಕ್ಕೆ ಬಂದನು. ಅಂದಿನಿಂದ ಇಂದಿನವರೆಗೆ ನೂರಾರು ರೋಗಿಗಳ ಮಿದುಳನ್ನು ಮರಣಾನಂತರ ಪರೀಕ್ಷಿಸಲಾಗಿದೆ. ಇವುಗಳ ಆಧಾರದ ಮೇಲೆ ಚಿತ್ತವೈಕಲ್ಯಕ್ಕೆ ಅನೇಕ ಕಾರಣಗಳಿವೆ ಎಂದು ತಿಳಿದುಬಂದಿದೆ (ಇದರಲ್ಲಿ ಅಲ್‌ಜೈಮರ್ ರೋಗ ಒಂದು ಪ್ರಮುಖ ಕಾರಣ). ಅಷ್ಟೇ ಅಲ್ಲ ಇವುಗಳಿಗೆ ಚಿಕಿತ್ಸೆಗಳನ್ನೂ ಕಂಡು ಹಿಡಿಯಲು ಸಾಧ್ಯವಾಗಿದೆ. ಅದೇ ರೀತಿ ಖಿನ್ನತೆ, ಸ್ಕಿಜೋಫ್ರೀನಿಯ ಮುಂತಾದ ರೋಗಗಳು ಮಿದುಳಿನ

ನರಕೋಶಗಳು ಉತ್ಪತ್ತಿ ಮಾಡುವ ಕೆಲವು ರಾಸಾಯನಿಕ ವಸ್ತು (ಸಂದೇಶ ವಾಹಕಗಳು)ಗಳ ಏರುಪೇರಿನಿಂದಾಗುತ್ತದೆ ಎಂದೂ ತಿಳಿದುಬಂದಿದೆ.

ಮಿದುಳನ್ನು ಕಾಡುವುದು ನರಕೋಶದ ನ್ಯೂನತೆಗಳು ಮಾತ್ರವೇ ಅಲ್ಲ. ಮಲೇರಿಯಾ, ಟಿ.ಬಿ. ರೋಗಾಣುಗಳು, ಏಡ್ಸ್ ರೋಗಾಣುಗಳು ಮಿದುಳನ್ನು ಸೇರಿ ಹಾನಿಗೆ ಕಾರಣವಾಗಬಹುದು. ಇದಲ್ಲದೆ ಅಪಸ್ಮಾರ, ಲಕ್ವ, ತಲೆಪೆಟ್ಟು, ಮಿದುಳಿನ ರಕ್ತ ಸ್ರಾವ, ಭ್ರಾಂತಿಜನಕ ಮದ್ದಿನ ಸೇವನೆಯಿಂದಾಗುವ ಪರಿಣಾಮಗಳು, ಮಿದುಳಿನ ಕ್ಯಾನ್ಸರ್ ಇವೆಲ್ಲವೂ ಮನೋರೋಗಕ್ಕೆ ಕಾರಣವಾಗಬಹುದು. ಇವೆಲ್ಲದರ ಬಗ್ಗೆಯೂ ನೇರ ಮಾಹಿತಿ ಪಡೆಯಲು ಮರಣಾನಂತರದ ಮಿದುಳಿನ ಪರೀಕ್ಷೆ ಸಹಕಾರಿಯಾಗುತ್ತದೆ.

ಮಿದುಳು ಬ್ಯಾಂಕ್‌ನ ಪರಿಕಲ್ಪನೆ ಹೊಸದೇನಲ್ಲ. ಸುಮಾರು ೩೦ ವರ್ಷಗಳ ಹಿಂದೆಯೇ ಅಮೆರಿಕಾ, ಕೆನಡ, ಯುರೋಪ್, ಜಪಾನ್ ದೇಶಗಳಲ್ಲಿ ಮಿದುಳು ಬ್ಯಾಂಕ್‌ಗಳು ಅಸ್ತಿತ್ವಕ್ಕೆ ಬಂದಿವೆ. ಭಾರತದಲ್ಲಿ, ೧೯೮೫ರಲ್ಲಿ ಬೆಂಗಳೂರಿನ ನಿಮ್ಹಾನ್ಸ್‌ನಲ್ಲಿ ಭಾರತದ ಪ್ರಥಮ ಮಿದುಳು ಬ್ಯಾಂಕ್ ಸ್ಥಾಪಿಸುವ ನಿರ್ಧಾರ ತೆಗೆದುಕೊಳ್ಳಲಾಯಿತು. ಅದು ಕಾರ್ಯರೂಪಕ್ಕೆ ಬಂದದ್ದು ೧೯೯೫ರಲ್ಲಿ.

ಸಾವು ಸಂಭವಿಸಿದ ೨೪ ಗಂಟೆಯೊಳಗೆ ನುರಿತ ವೈದ್ಯರು ಮಿದುಳನ್ನು ಜೋಪಾನವಾಗಿ ಹೊರಕ್ಕೆ ತೆಗೆದು ಎರಡು ತುಂಡುಗಳಾಗಿ ಮಾಡುತ್ತಾರೆ. ಒಂದನ್ನು -೭೦° ಸೆಲ್‌ಸಿಯಸ್‌ನಲ್ಲಿಟ್ಟು ಘನೀಕರಿಸುತ್ತಾರೆ. ಎರಡನೇ ತುಂಡನ್ನು ಹಾಳೆ, ಹಾಳೆಯಾಗಿ ಕತ್ತರಿಸಿ ಫಾರ್ಮಲಿನ್ ದ್ರಾವಣದಲ್ಲಿ ಸಂರಕ್ಷಿಸುತ್ತಾರೆ. ಬೆಂಗಳೂರಿನ ಮಿದುಳು ಬ್ಯಾಂಕಿನಲ್ಲಿ ಟಿ.ಬಿ., ಮಲೇರಿಯಾ, ಏಡ್ಸ್, ಬಾಣಂತಿರೋಗ, ಅಲ್‌ಜೈಮರ್ಸ್ ರೋಗ, ಹಂಟಿಂಗ್‌ಟನ್ ರೋಗ, ಚಿತ್ತವೈಕಲ್ಯ, ಮಿದುಳಿನ ರಕ್ತಸ್ರಾವ, ಅಪಸ್ಮಾರ, ಇತ್ಯಾದಿ ೬೦೦ ವಿಧವಾದ ರೋಗಗ್ರಸ್ಥ ಮಿದುಳಿನ ತುಂಡುಗಳು ಲಭ್ಯವಿವೆ. ಇವುಗಳನ್ನು ಉಪಯೋಗಿಸಿ, ಭಾರತದ ನರವಿಜ್ಞಾನಿಗಳು ಅನೇಕ ಮೂಲಭೂತ ಸಂಶೋಧನೆಗಳನ್ನು ನಡೆಸಿದ್ದಾರೆ, ನಡೆಸುತ್ತಿದ್ದಾರೆ. ಅದರಿಂದ ರೋಗದ ಲಕ್ಷಣಗಳು, ಅದು ಬಲಿಯುವ ರೀತಿ, ಅದರ ನಿದಾನ (ಡಯಗ್ನೋಸಿಸ್) ಸರಿಯಿತ್ತೆ, ಚಿಕಿತ್ಸೆ ಪರಿಣಾಮಕಾರಿಯಾಗಿತ್ತೆ, ಅದು ಆನುವಂಶಿಕವೇ ಮುಂತಾದ ಮಾಹಿತಿಗಳು ದೊರೆಯುತ್ತವೆ. ಇತರರಲ್ಲಿ ರೋಗ ಲಕ್ಷಣಗಳು ತೋರಿದೊಡನೆ ಈ ಮಾಹಿತಿಗಳ ಆಧಾರದ ಮೇಲೆ ರೋಗನಿದಾನ ನಡೆಸಿ, ಸೂಕ್ತ ಪರಿಹಾರವನ್ನು ಸೂಚಿಸಬಹುದು. ಅಷ್ಟೇ ಅಲ್ಲ, ರೋಗ ಕಾಣಿಸಿಕೊಳ್ಳುವ ಸಾಧ್ಯತೆ ಅಧಿಕವಾಗಿರುವವರಿಗೆ ಮುನ್ನೆಚ್ಚರ ಕೊಡಲೂ ಸಾಧ್ಯವಾಗುವುದು. ಆದರೆ ಮಿದುಳು ಬ್ಯಾಂಕಿನ ನಿರ್ವಹಣೆಯಲ್ಲಿ ಒಂದು ಮುಖ್ಯ ಸಮಸ್ಯೆ ಇದೆ. ವ್ಯಾಪಾರಿ ಬ್ಯಾಂಕಿನಲ್ಲಿಟ್ಟ ಹಣ ಕೊಳೆಯುವುದಿಲ್ಲ, ಅದರಿಂದ ಬಡ್ಡಿ ಬರುತ್ತದೆ. ಆದರೆ ಮಿದುಳು ಬ್ಯಾಂಕಿನಲ್ಲಿಟ್ಟ ಸರಕಿನ ವಿಷಯ ಬೇರೆ. ಈ ತುಂಡುಗಳ ಜೀವಾವಧಿ ಕೇವಲ ೩-೪ ವರ್ಷಗಳು. ಅನಂತರ ಅವುಗಳು ಶಿಥಿಲಗೊಂಡು ನಿಷ್ಪ್ರಯೋಜಕವಾಗುತ್ತವೆ. ಆದ್ದರಿಂದ ಹೊಸ ತುಂಡುಗಳ ಸರಬರಾಜು ನಿರಂತರವಾಗಿ ಆಗುತ್ತಿರಬೇಕು. ಅದಕ್ಕೆ ಸಾರ್ವಜನಿಕರ ಸಹಕಾರ ಅಗತ್ಯ.

ಸಾರ್ವಜನಿಕರು ಈ ಶ್ರೇಷ್ಠ ಕಾರ್ಯದಲ್ಲಿ ಯಾವ ರೀತಿ ಸಕ್ರಿಯವಾಗಿ ಭಾಗವಹಿಸಬಹುದು? ಮರಣಾನಂತರ ಕಣ್ಣು, ಮೂತ್ರಪಿಂಡ, ಹೃದಯ ಇತ್ಯಾದಿ ಅಂಗಗಳನ್ನು ಬೇರೆ ರೋಗಿಗಳಿಗೆ ನಾಟಿ ಮಾಡಲು ದಾನ ಮಾಡುವಂತೆ, ಮಿದುಳನ್ನೂ ದಾನ ಮಾಡಲು ಮುಂಗಡವಾಗಿ ಒಪ್ಪಿಗೆ ಕೊಡಬಹುದು. ಆದರೆ ನಮ್ಮಲ್ಲಿ ಅಂಗಾಂಗಗಳನ್ನು ದಾನ ಮಾಡುವವರ ಸಂಖ್ಯೆ ಕಡಿಮೆ. ಮಿದುಳನ್ನು ದಾನ ಮಾಡುವವರ ಸಂಖ್ಯೆ ಇನ್ನೂ ಕಡಿಮೆ. ಈಚೆಗೆ ಪ್ರಕಟವಾದ ಒಂದು ಸಮೀಕ್ಷೆಯ ಪ್ರಕಾರ ಈ ಮನೋಭಾವಕ್ಕೆ ಮುಖ್ಯ ಕಾರಣಗಳೆಂದರೆ ಸಾರ್ವಜನಿಕರಲ್ಲಿ ಇರುವ ಅಜ್ಞಾನ ಮತ್ತು ಧಾರ್ಮಿಕ ಸಂದೇಹಗಳು. ಮಿದುಳು ತಿಳುವಳಿಕೆ ಸಪ್ತಾಹದ ಉದ್ದೇಶ ಇವೆರಡನ್ನೂ ನಿವಾರಿಸುವುದು. ಇಂತಹ ಕೆಲವು ಪ್ರಶ್ನೆಗಳಿಗೆ ಸೂಕ್ತ ಉತ್ತರ ಕೊಟ್ಟು ಜನರ ಅನುಮಾನಗಳನ್ನು ತೊಡೆದುಹಾಕುವ ಸಲುವಾಗಿ, ಡಾ॥ ಶಂಕರ್ ಒಂದು ಸಣ್ಣ ಪುಸ್ತಕವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಚರ್ಚಿಸಿರುವ ಕೆಲವು ಪ್ರಶ್ನೆ ಮತ್ತು ಉತ್ತರಗಳು ಹೀಗಿವೆ :




*ಚಿತ್ತವೈಕಲ್ಯದಿಂದ ನರಳಿದ ವ್ಯಕ್ತಿಯ ಮಿದುಳಿನ ಸೀಳುನೋಟ. ಕಪೋಲ, ಪಾರ್ಶ್ವ ಮತ್ತು ಹಿಂಭಾಗಗಳಲ್ಲಿ ನರಕೋಶಗಳು ನಶಿಸಿಹೋಗಿರುವುದನ್ನು ಕಾಣಬಹುದು*

❖ ಮಿದುಳನ್ನು ಯಾರು ದಾನ ಮಾಡಬಹುದು ?

ತಮ್ಮ ಜೀವಿತ ಕಾಲದಲ್ಲಿ ಯಾರು ಬೇಕಾದರೂ ಮರಣಾನಂತರ ಮಿದುಳು ದಾನಕ್ಕೆ ಸಮ್ಮತಿ ಕೊಡಬಹುದು. ದಾನ ಮಾಡುವಾತ ಮಿದುಳು ರೋಗಿಯಾಗಿರಬೇಕೆಂಬ ನಿಯಮವೇನಿಲ್ಲ. ಬೇರೆ ಕಾರಣಗಳಿಂದ, ಉದಾಹರಣೆಗೆ ರಸ್ತೆ ಅಪಘಾತದಿಂದ, ನೈಸರ್ಗಿಕ ಕಾರಣಗಳಿಂದ ಮೃತರಾದವರ ಮಿದುಳಿನ ಅವಶ್ಯಕತೆಯೂ ಬ್ಯಾಂಕಿಗೆ ಇದೆ. ರೋಗಿಯ ಮಿದುಳನ್ನು ಆರೋಗ್ಯವಂತರ ಮಿದುಳಿನೊಂದಿಗೆ ಹೋಲಿಸಿದಾಗಲೇ ರೋಗಕ್ಕೆ ಕಾರಣಗಳು ಸ್ಪಷ್ಟವಾಗುವುದು. ರೋಗ ರಹಿತ ಮಿದುಳು ಒಂದು ಸೂಚಕ ಪ್ರಮಾಣ. ಇದು ಬಹಳ ಮುಖ್ಯ. ರೋಗಿ ದಾನದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲದಿದ್ದರೆ ಹತ್ತಿರದ ಸಂಬಂಧಿಕರು ಒಪ್ಪಿಗೆ ನೀಡಬಹುದು. ಸಾವು ಸಂಭವಿಸಿದ ನಂತರ ಆದಷ್ಟು ಜಾಗ್ರತೆ (೨೪ ಗಂಟೆಗಳ ಒಳಗೆ) ನಿಮ್ಹಾನ್ಸ್‌ಅನ್ನು ಸಂಪರ್ಕಿಸಬೇಕು. ಇದರ ಬಗ್ಗೆ ಮೃತರ ಸಂಬಂಧಿಕರಿಗೆ ಯಾವ ಖರ್ಚೂ ಇಲ್ಲ. ಬೆಂಗಳೂರು ನಗರದಿಂದ ಹೊರಗಿದ್ದವರಾದರೆ ದೇಹವನ್ನು ಶೀತೋಗ್ರಾಣದಲ್ಲಿಟ್ಟು ಸಂರಕ್ಷಿಸಬೇಕಾಗುತ್ತದೆ.

❖ ದಾನ ಮಾಡಿದ ಮಿದುಳಿನ ದುರುಪಯೋಗ ಸಾಧ್ಯವೆ ?

ಮೂತ್ರಪಿಂಡ, ಕಣ್ಣು, ಹೃದಯಗಳನ್ನು ನಾಟಿ ಮಾಡುವಂತೆ ಮಿದುಳನ್ನು ನಾಟಿ ಮಾಡುವುದು ಸಾಧ್ಯವಿಲ್ಲದಿರುವುದರಿಂದ ಅದರ ದುರುಪಯೋಗಕ್ಕೆ ಅವಕಾಶವಿಲ್ಲ. ಅದು ಕೇವಲ ಅನುಸಂಧಾನ ಮತ್ತು ವೈದ್ಯ ವಿದ್ಯಾರ್ಥಿಗಳ ತರಪೇತಿಗೆ ಬಳಕೆಯಾಗುತ್ತದೆ.

❖ ಮಿದುಳನ್ನು ತೆಗೆಯುವುದರಿಂದ ದೇಹ ವಿಕಾರವಾಗುವುದೆ ?

ಇಲ್ಲ. ತರಪೇತಿ ಪಡೆದ ವೈದ್ಯರು ತಲೆಬುರುಡೆಯಲ್ಲಿ ಒಂದು ಸೀಳು ಮಾಡಿ ಅದರ ಮೂಲಕ ಮಿದುಳನ್ನು ಜೋಪಾನವಾಗಿ ಹೊರತೆಗೆಯುತ್ತಾರೆ. ಅನಂತರ ಸೀಳನ್ನು ಓರಣವಾಗಿ ಹೊಲೆದು ಕೂದಲಿಂದ ಮುಚ್ಚುತ್ತಾರೆ. ಹಾಗಾಗಿ ಯಾವ ವಿಕಾರವೂ ಕಾಣುವುದಿಲ್ಲ.

ಇನ್ನು ಕೆಲವು ಧಾರ್ಮಿಕ ಸಂದೇಹಗಳು ಇವೆ. ಅಂಗಾಂಗ ದಾನದ ಬಗ್ಗೆ ಹಿಂದೂ, ಇಸ್ಲಾಮ್, ಕ್ರೈಸ್ತ ಬೌದ್ಧ ಮುಂತಾದ ಧರ್ಮಗಳ ಧೋರಣೆಯನ್ನು ವಿಸ್ತೃತವಾಗಿ ಅಧ್ಯಯನ ಮಾಡಿದ ತಜ್ಞರು, ಯಾವ ಧರ್ಮವೂ ಅದನ್ನು ನಿಷೇಧಿಸಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಅಷ್ಟೇ ಅಲ್ಲ, ಅಂಗಾಂಗ ದಾನದಿಂದ ಜೀವಂತ ವ್ಯಕ್ತಿಗೆ ಉಪಯೋಗವಾಗುವಂತಿದ್ದರೆ, ಹಾಗೆ ಮಾಡುವುದು ಸೂಕ್ತವೆಂದೂ ವಿವಿಧ ಧರ್ಮಗಳ ಅಭಿಮತ. ಆದರೆ ಅದರಿಂದ ಮೃತ ದೇಹ ವಿಕಾರಗೊಳ್ಳಬಾರದೆಂದು ಮಾತ್ರ ಕಡ್ಡಾಯ.

ಮರಣಾನಂತರ ಮಾಡಿದ ಮಿದುಳು ದಾನ ಮಿದುಳು ರೋಗದ ನಿದಾನ, ಚಿಕಿತ್ಸೆ ಮತ್ತು ನಿವಾರಣೆಗೆ ಒಂದು ಮಹತ್ವದ ಆಶಾದೀಪ. ಅಂತಹ ಒಂದು ಬಳುವಳಿಯನ್ನು ಮುಂದಿನ ಪೀಳಿಗೆಗೆ ನೀಡಲು ನೀವು ಸಿದ್ಧರಿದ್ದೀರಾ? ಹಾಗಿದ್ದಲ್ಲಿ, ಡಾ॥ ಕೆ. ಎಸ್. ಶಂಕರ್ ಅವರನ್ನು ಸಂಪರ್ಕಿಸಿ. **(ವಿಳಾಸ : ನ್ಯೂರೋಪೆತಾಲಜಿ ವಿಭಾಗದ ಮುಖ್ಯಸ್ಥರು, ನಿಮ್ಹಾನ್ಸ್, ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯ ದೂರವಾಣಿ : (೦೮೦) ೬೯೫೧೩೦)**

**ಡಾ॥ ಎಮ್. ಎಸ್. ಎಸ್. ಮೂರ್ತಿ**
'ಬಿ' ೧೦೪, ಟೆರ್ರೆಸ್ ಗಾರ್ಡನ್ ಅಪಾರ್ಟ್‌ಮೆಂಟ್ಸ್, ೨ನೇ ಮುಖ್ಯರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೮೫

# ರಾಮಾಯಣದಲ್ಲಿ ವಿಮಾನ

*ಮೈಸೂರಿನ ಖ್ಯಾತ ವಿದ್ವಾಂಸರಾಗಿದ್ದ ಮಾನ್ಯ ಶ್ರೀ ಜಿ. ಆರ್. ಜೋಸ್ಯರ್ ಅವರು ವಿಮಾನಗಳನ್ನು ಮಾಡಲು ತಂತ್ರಜ್ಞಾನ ಒದಗಿಸುತ್ತದೆನ್ನಲಾದ ಸಂಸ್ಕೃತ ಗ್ರಂಥ ಹಾಗೂ ಬಿಡಿ ಶ್ಲೋಕಗಳನ್ನು ತಮ್ಮಲ್ಲಿ ಇಟ್ಟುಕೊಂಡಿದ್ದರು ಮತ್ತು ಪ್ರಕಟಿಸಿದ್ದರು. ಅವನ್ನು ತೆಗೆದುಕೊಂಡು ಹೋಗಿ ಜರ್ಮನರು ವಿಮಾನ ನಿರ್ಮಿಸಿದರೆಂದು ಅವರ ನಿಶ್ಚಲ ನಂಬಿಕೆಯಾಗಿತ್ತು. "ಅದೆಲ್ಲಾ ನಮ್ಮಲ್ಲೇ ಇದ್ದಿತಲ್ಲಾ, ನಾವೇಕೆ ವಿಮಾನ ನಿರ್ಮಿಸಲಿಲ್ಲ? ಈಗಲೂ ಅದನ್ನಾಧರಿಸಿ ನಿರ್ಮಿಸಬಹುದಲ್ಲವೆ?" ಎಂದು ಕೇಳಿದರೆ ಅವರಿಗೆ ಮುನಿಸು ಬರುತ್ತಿತ್ತು. ಚಲನಚಿತ್ರಗಳಲ್ಲಿ ಪುಷ್ಪಕ ವಿಮಾನ ಚೆನ್ನಾಗಿ ಹಾರಾಡಿದೆ. ಆದರೆ ನಿಜಕ್ಕೂ ಈ 'ವಿಮಾನ' ಅಂದರೆ ಯಾವುದು? ಅದರ ಜಿಜ್ಞಾಸೆ ಇಲ್ಲಿದೆ.*

ರಾಮಾಯಣ ಒಂದು ಮಹಾಕಾವ್ಯ. ಅದು ಭಾರತದ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಭಾರತದ ಅವಿದ್ಯಾವಂತನಿಗೂ, ಹಳ್ಳಿಗನಿಗೂ ರಾಮನ ಜೀವನದ ಬಗ್ಗೆ ತಿಳಿದಿದೆ. ಪ್ರತಿಯೊಬ್ಬ ಪ್ರಜೆಗೂ ಆತ ಒಬ್ಬ ಆದರ್ಶ. ನಮ್ಮ ಎಲ್ಲ ಜನರಿಗೂ ಮಂಥರೆ ಕೈಕೇಯಿಯರು ಯಾರೆಂದು ಗೊತ್ತು. ರಾಕ್ಷಸರ ರಾಕ್ಷಸೀ ಕೃತ್ಯಗಳು ತಿಳಿದಿವೆ. ಲಕ್ಷ್ಮಣರೇಖೆಯಂತೂ ಮನೆಮಾತು. ಶಬರಿಯ ಎಂಜಲು ಬೋರೆಹಣ್ಣುಗಳು ಗೊತ್ತು. ರಾವಣನ ಪುಷ್ಪಕ ವಿಮಾನ ಗೊತ್ತು. ರಾಮಾಯಣದ ಚಿಕ್ಕ ಚಿಕ್ಕ ಘಟನೆಗಳನ್ನೂ ಕೇಳಿದ್ದಾರೆ. ಅವರು ಯಾವುದೋ ರಾಮಾಯಣವನ್ನು ಓದಿರುತ್ತಾರೆ ಅಥವಾ ಪಾರಾಯಣ ಮಾಡಿರುತ್ತಾರೆ. ಅದು ಕುವೆಂಪು ಅವರ "ರಾಮಾಯಣ ದರ್ಶನಂ" ಆಗಿರಬಹುದು, "ಜನಪ್ರಿಯ ವಾಲ್ಮೀಕಿ ರಾಮಾಯಣ" ಆಗಿರಬಹುದು, "ವಚನ ರಾಮಾಯಣ" ಆಗಿರಬಹುದು, "ಕಂಬ ರಾಮಾಯಣ" "ತುಲಸೀ ರಾಮಾಯಣ" ಆಗಿರಬಹುದು. ಇವುಗಳನ್ನು ಯಾಂತ್ರಿಕವಾಗಿ ಅಥವಾ ಭಕ್ತಿಯಿಂದ ಓದುವವರೇ ಜಾಸ್ತಿ. ಓದಿದ್ದನ್ನು ಅರ್ಥಮಾಡಿಕೊಂಡು ಸಂಶಯ ಬಂದಲ್ಲಿ ಪ್ರಶ್ನಿಸಿ, ಪರಾಮರ್ಶಿಸಿ, ವಿಮರ್ಶಿಸಿ, ಪರೀಕ್ಷಿಸಿ ನೋಡುವವರು ಕೆಲವೇ ಮಂದಿ. ಆದರೂ ಅಂಥವರು ಇದ್ದಾರೆಂಬುದು ನಿಜ ಮತ್ತು ಸಂತೋಷದ ವಿಷಯ. ಅವರಲ್ಲಿ ಪೋಲಂಕಿ ರಾಮಮೂರ್ತಿ, ಗೌರೀಶ ಕಾಯ್ಕಿಣಿ ಕೆಲವರು. ತೆಲುಗಿನಲ್ಲಿ ಆರುದ್ರ, ನಾರ್ಲ ವೆಂಕಟೇಶ್ವರರಾವ್ ಅವರ ಹೆಸರನ್ನು ಹೇಳಬಹುದು. ಈ ಮೇಲೆ ತಿಳಿಸಿದವರ ಪುಸ್ತಕಗಳನ್ನು ಓದಿದಾಗ ನನಗೆ ಮೂಲ ರಾಮಾಯಣವನ್ನು ಓದಬೇಕೆಂಬ ಕುತೂಹಲ ಉಂಟಾಯಿತು. ಆಗ ನನಗೆ ಸಿಕ್ಕಿದ್ದು ವಿದ್ವಾನ್ ರಂಗನಾಥ ಶರ್ಮರು ಅನುವಾದಿಸಿದ ಮೂಲ ವಾಲ್ಮೀಕಿ ರಾಮಾಯಣ. ಅದನ್ನು ಓದಿದಾಗ ನನ್ನ ಗಮನ ಸೆಳೆದದ್ದು "ವಿಮಾನ". ವಿಮಾನ ಎಂದಾಗ ನಮ್ಮ ಮನಸ್ಸಿನಲ್ಲಿ ಮೂಡುವುದು ಇಂದಿನ ವಿಮಾನ, ಆಕಾಶದಲ್ಲಿ ಹಾರಾಡುವ ಯಂತ್ರವಿಮಾನ. ರಾಮಾಯಣವನ್ನು ಓದುವಾಗ ಅನೇಕ ಕಡೆಗಳಲ್ಲಿ ವಿಮಾನದ ವಿಷಯ ಬರುತ್ತದೆ. ಈಗಿನ ವಿಮಾನವನ್ನು ಪಾಶ್ಚಾತ್ಯರು ಕಂಡುಹಿಡಿದಿದ್ದರೂ ರಾಮಾಯಣದಲ್ಲಿ ಬರುವ ವಿಮಾನವನ್ನು ನೋಡಿ ನಮ್ಮಲ್ಲಿ ಕೆಲವರು "ವಿಮಾನ ಭಾರತದಲ್ಲೂ ಇತ್ತು. ನಮ್ಮ ವೇದ ಉಪನಿಷತ್ತುಗಳನ್ನು ಓದಿ ಅದರಲ್ಲಿ ಬರುವ ವಿಷಯಗಳನ್ನು ತಿಳಿದು ಪಾಶ್ಚಾತ್ಯರು ವಿಮಾನವನ್ನು ಕಂಡುಹಿಡಿದರು" ಎಂದು ಹೇಳುವುದನ್ನು ನಾನು ಕೇಳಿದ್ದೇನೆ. ಅದನ್ನು ಕೇಳಿ ನಾನು ಕೂಡಾ ಹಾಗೆಯೇ ತಿಳಿದಿದ್ದೆ, ಬಹಳ ಅಭಿಮಾನಪಟ್ಟಿದ್ದೆ. ರಾಮಾಯಣವನ್ನು ಓದಲು ಪ್ರಾರಂಭಿಸಿದ ಮೇಲೆ ನಾನು ನನ್ನ ಅಭಿಪ್ರಾಯವನ್ನು ಬದಲಿಸಿಕೊಳ್ಳಬೇಕಾಗಿದೆ.

ರಾಮಾಯಣದಲ್ಲಿ ಬರುವ ವಿಮಾನ ಉಲ್ಲೇಖಗಳನ್ನು ನಾವು ಈಗ ಗಮನಿಸೋಣ. ರಾಮ ತಂದೆಯ ಆದೇಶದಂತೆ ಕಾಡಿಗೆ ಹೊರಡಬೇಕಾಗಿದೆ. ತನ್ನ ಸಂಪತ್ತನ್ನೆಲ್ಲಾ ದಾನ ಮಾಡಿ, ಸೀತಾ ಲಕ್ಷ್ಮಣರನ್ನು ಕೂಡಿಕೊಂಡು ತನ್ನ ತಂದೆಯನ್ನು ನೋಡಲು ಅಯೋಧ್ಯಾ ನಗರದ ಬೀದಿಯಲ್ಲಿ ಹೋಗುತ್ತಿರಲು ಜನರು ರಸ್ತೆಯಲ್ಲಿ ಕಿಕ್ಕಿರಿದು ಜಾಗವಿಲ್ಲದೆ ಪ್ರಾಸಾದ, ಹರ್ಮ್ಯ ಮತ್ತು ವಿಮಾನಗಳನ್ನು ಹತ್ತಿ ನೋಡುತ್ತಿದ್ದರಂತೆ. ಅನುವಾದಕರಾದ ವಿದ್ವಾನ್ ರಂಗನಾಥಶರ್ಮರು ಅಡಿ ಟಿಪ್ಪಣಿಯಲ್ಲಿ ಪ್ರಾಸಾದ= ಅರಮನೆ, ದೇವಾಲಯ; ಹರ್ಮ್ಯ= ಶ್ರೀಮಂತರ ವಿಶಾಲ ಭವನ, ವಿಮಾನ= ಏಳು ಮಹಡಿಗಳಿರುವ ಉನ್ನತ ಗೃಹ ಎಂದಿದ್ದಾರೆ. ಜನರು ತಮ್ಮ ತಮ್ಮ ಮನೆಯ ಮೇಲೆ ಹತ್ತಿ ನಿಂತು ನೋಡುತ್ತಿದ್ದರು. ಇಲ್ಲಿ ವಿಮಾನ ಎಂದರೆ ಗೋಪುರ



ಎಂದಾಗುತ್ತದೆ. ಅದೇ ರೀತಿ ದೇವಾಲಯದ ಗೋಪುರಕ್ಕೆ ನಾವು ಈಗಲೂ 'ವಿಮಾನ' ಎನ್ನುತ್ತೇವೆ. ಇದು ಜನಸಾಮಾನ್ಯರ ಬಳಕೆಯಲ್ಲಿ ಇಲ್ಲದಿದ್ದರೂ ದೇವಾಲಯದ ಗೋಪುರಕ್ಕೆ 'ವಿಮಾನ' ಎನ್ನವುದು ತಾಂತ್ರಿಕ ಹೆಸರು. ಶಿಲ್ಪ ಶಾಸ್ತ್ರ ಗ್ರಂಥಗಳಲ್ಲಿ ಹಾಗೆಂದೇ ಉಲ್ಲೇಖವಿರುತ್ತದೆ. ಮೊದಲು ಮನೆಗಳ ಗೋಪುರಕ್ಕೆ ವಿಮಾನವೆಂದೇ ಹೇಳುತ್ತಿರಬೇಕು. ಕಾಲ ಕ್ರಮೇಣ ದೇವಾಲಯಗಳ ಗೋಪುರಕ್ಕೆ ಮಾತ್ರ ಆ ಹೆಸರು ಉಳಿದು ಈಗ ಕೇವಲ ತಾಂತ್ರಿಕ ಭಾಷೆಯಲ್ಲಿ ಉಳಿದು ವಿಮಾನಕ್ಕೆ ಬೇರೆ ಅರ್ಥವೇ ಬಂದಿರಬೇಕು. ವಿಮಾನದ ಬದಲು ಗೋಪುರ ಶಬ್ದವೇ ಹೆಚ್ಚು ರೂಢಿಯಲ್ಲಿ ಬಂದಿರಬೇಕು.

ಭರತ ಕಾಡಿನಿಂದ ರಾಮನನ್ನು ಮರಳಿ ಅಯೋಧ್ಯೆಗೆ ಕರೆದೊಯ್ಯಬೇಕೆಂದು ಸಕಲ ರಾಜ ಪರಿವಾರದೊಂದಿಗೆ, ಸೈನ್ಯದೊಂದಿಗೆ ಹೊರಡುತ್ತಾನೆ. ಗಂಗಾನದಿಯ ದಡಕ್ಕೆ ಬಂದಾಗ ಆತನಿಗೆ ಗುಹನ ಭೇಟಿಯಾಗುತ್ತದೆ. ರಾಮ - ಸೀತೆಯರು ಮಲಗಿದ್ದ ಸ್ಥಳವನ್ನು ಗುಹ ಭರತನಿಗೆ ತೋರಿಸುತ್ತಾನೆ. ಅದನ್ನು ನೋಡಿದ ಭರತ ಪರ್ಯಂಕದ ಮೇಲೆ ಮಲಗುವ ರಾಮ ಇಲ್ಲಿ ಹೇಗೆ ಮಲಗಿದ್ದಾನು ಎಂದು ದುಃಖಪಡುತ್ತಾನೆ. ಮುಂದುವರಿದು ಆತ ಹೇಳುವ ಮಾತುಗಳನ್ನು ಕೇಳಿ: "ಸೌಧಗಳಲ್ಲಿ ವಿಮಾನ ಸದೃಶವಾದ ಮಹಡಿಗಳಲ್ಲಿಯೂ ಉನ್ನತವಾದ ಮೇಲ್ಮನೆಗಳಲ್ಲಿಯೂ... ಹಾಸಿಗೆಯಲ್ಲಿ ಮಲಗುತ್ತಿದ್ದನು" (ಅಯೋಧ್ಯಾಕಾಂಡ ೮೮ನೇ ಸರ್ಗ, ೫ನೇ ಶ್ಲೋಕ). ಮೂಲದಲ್ಲಿ "ಪ್ರಾಸಾದಾಗ್ರ ವಿಮಾನೇಷು" ಎಂದಿದೆ. ಇಲ್ಲಿ ವಿಮಾನ ಎಂಬುದು ನಾವು ಈಗ ಉಪಯೋಗಿಸುವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿಲ್ಲ ಎಂಬುದು ಸ್ಪಷ್ಟವಾಗಿದೆ. ಹಾಗಾದರೆ ಯಾವ ಅರ್ಥದಲ್ಲಿ ಇದನ್ನು ಉಪಯೋಗಿಸಲಾಗಿದೆ ನೋಡೋಣ. "ಸೌಧಗಳಲ್ಲಿ ವಿಮಾನಸದೃಶ ಮಹಡಿಗಳಲ್ಲಿ" ಎಂದು ವಿದ್ವಾನ್ ರಂಗನಾಥಶರ್ಮರು ಅನುವಾದ ಮಾಡಿದ್ದಾರೆ. ಶಬ್ದಕೋಶಗಳಲ್ಲಿ ಅನೇಕ ಅರ್ಥಗಳನ್ನು ಕೊಟ್ಟಿದ್ದಾರೆ. ಸಭಾಂಗಣ, ಏಳು ಉಪ್ಪರಿಗೆಯ ಅರಮನೆ, ಎಂದಿದೆ. ಬಹುಶಃ ದೊಡ್ಡದು, ರಾಜಯೋಗ್ಯವಾದದ್ದು ಎಂಬ ಅರ್ಥ ಅದಕ್ಕೆ ಇದ್ದಿರಬೇಕು. ಹಾರುವ, ಆಕಾಶಯಾನ ಮಾಡುವ, ಎಂಬ ಅರ್ಥ ಕ್ರಮೇಣ ಬಂದಿರಬೇಕು. ಅದೇ ರೀತಿ 'ಪ್ರಯಾಣಿಸಲು ಒಂದು ವಾಹನ' ಎಂದು ಕೂಡಾ ಕೊಟ್ಟಿದೆ. 'ರಾಜಯೋಗ್ಯವಾದ' ಎಂಬ ಅರ್ಥ ಇದರಲ್ಲೂ ಅಡಗಿದೆ. ಏಕೆಂದರೆ ವಿಮಾನಗಳಲ್ಲಿ ಜನಸಾಮಾನ್ಯರು ಪ್ರಯಾಣಿಸುವ ವಿಷಯ ಎಲ್ಲೂ ಬಂದಿಲ್ಲ. ಆಕಾಶಯಾನ ಮಾಡುವ ವಿಮಾನದ ಉಲ್ಲೇಖ ಇರುವುದು ಎರಡೇ ಕಡೆಗಳಲ್ಲಿ: ರಾವಣನ ಪುಷ್ಪಕ ವಿಮಾನ ಮತ್ತು ದೇವೇಂದ್ರನ ವಿಮಾನ; ಎರಡೂ ರಾಜಯೋಗ್ಯವಾದವುಗಳೇ ಹೊರತು ಸಾಮಾನ್ಯವಾದವಲ್ಲ.

**ಎಸ್. ನಳಿನಿ**

ಸುಂದರ ಕಾಂಡದಲ್ಲಿ ಹನುಮಂತ ಸಾಗರವನ್ನು ದಾಟಿ ಬಂದು ಸೀತೆಯನ್ನು ಹುಡುಕುತ್ತ ಅರಮನೆಗೆ ಬರುತ್ತಾನೆ. ಅಲ್ಲಿಯೂ ಸೀತೆಯನ್ನು ಕಾಣದೆ ಬೇರೆ ಪ್ರದೇಶಗಳಲ್ಲಿ ಹುಡುಕಿ ಎಲ್ಲಿಯೂ ಕಾಣದೆ ಕೊನೆಗೆ ತಾನು ನಿಂತಿದ್ದ 'ವಿಮಾನ'ದಿಂದ ಕೆಳಗಿಳಿದು ಏನೂ ತೋರದೆ ದುಃಖಿತನಾಗಿ ನಿಂತುಕೊಂಡನು (ಸುಂದರಕಾಂಡ ಸರ್ಗ ೧೩, ಶ್ಲೋಕ ೨೫). ಇಲ್ಲಿ 'ವಿಮಾನ' ಎಂಬುದಕ್ಕೆ ಭಾವಣಿ ಎಂಬ ಅರ್ಥ ಬರುತ್ತದೆ. ಹಾಗೆಯೇ ರಾವಣನ 'ವಿಮಾನ' ಭಾವಣಿ ಇರುವ ರಥ ಆಗಿರಬೇಕು. ಏಕೆಂದರೆ 'ವಿಮಾನ' ಎಂದರೆ ಭಾವಣಿ, 'ವಿಮಾನ' ಎಂದರೆ ವಾಹನ. ಒಟ್ಟಾರೆ 'ವಿಮಾನ' ಎಂದರೆ ಭಾವಣಿ ಇರುವ ವಾಹನ ಇರಬಹುದು.

ರಾಮಾಯಣದಲ್ಲಿ ಬರುವ ಪುಷ್ಪಕ ವಿಮಾನವನ್ನು ಬ್ರಹ್ಮ ಕುಬೇರನಿಗೆ ಕೊಟ್ಟಿದ್ದು. ರಾವಣ ಕುಬೇರನನ್ನು ಸೋಲಿಸಿ ಅವನಿಂದ ಆ ವಿಮಾನವನ್ನು ಕಸಿದುಕೊಂಡದ್ದು.

ಕೈಲಾಸಪರ್ವತಂ ಗತ್ವಾ ವಿಜಿತ್ಯ ನರವಾಹನಂ।

ವಿಮಾನಂ ಪುಷ್ಪಕಂ ತಸ್ಯ ಕಾಮಗಂ ವೈ ಜಹಾರ ಯಃ॥

ಪುಷ್ಪಕ ವಿಮಾನ ಒಂದು 'ನರವಾಹನ'; ಅಂದರೆ ಮನುಷ್ಯರು ಉಪಯೋಗಿಸುವ ವಾಹನ. ಅದು 'ಕಾಮಗಂ', ಅಂದರೆ ಬೇಕೆಂದಲ್ಲಿಗೆ ಹೋಗುವ ವಾಹನ. ಇಲ್ಲಿ ಎಲ್ಲಿಯೂ 'ಆಕಾಶಗಮನ' ಎಂಬ ಶಬ್ದ ಬಂದಿಲ್ಲ ಎಂಬುದನ್ನು ಗಮನಿಸಿ. ರಾವಣನ ಮರಣದ ನಂತರ ಅದು ರಾಮನಿಗೆ ಸೇರಿತು. ಲಂಕೆಯಿಂದ ಅಯೋಧ್ಯೆಗೆ ಅದರಲ್ಲಿಯೇ ಪ್ರಯಾಣಿಸುತ್ತಾರೆ ರಾಮ, ಲಕ್ಷ್ಮಣ, ಸೀತೆ, ಸುಗ್ರೀವ, ಅಂಗದ ಮತ್ತು ವಾನರ ವೀರರು. ವಾನರ ಸೈನ್ಯ, ಲಂಕೆಯಿಂದ ಕಿಷ್ಕಿಂಧೆಗೆ ಬಂದ ಮೇಲೆ ವಾನರ ಸ್ತ್ರೀಯರು ಕೂಡಾ ಅದರಲ್ಲಿ ಕುಳಿತುಕೊಳ್ಳುತ್ತಾರೆ. ಇಡೀ ಸೈನ್ಯ ಅದರಲ್ಲಿ ಕುಳಿತು ಪ್ರಯಾಣಿಸಬೇಕಾದರೆ ಅದು ಎಷ್ಟು ದೊಡ್ಡದಿರಬಹುದು ಎಂದು ಆಶ್ಚರ್ಯವಾಗುತ್ತದೆ. ಈಗಿನ ಒಂದು ರೈಲಿನಲ್ಲಿ ಅಥವಾ ವಿಮಾನದಲ್ಲಿ ಕೂಡಾ ಇಷ್ಟೊಂದು ಜನರು ಒಮ್ಮೆಲೇ ಕುಳಿತುಕೊಳ್ಳಲು ಸ್ಥಳವಿರುವುದಿಲ್ಲ. ಅಂದಮೇಲೆ ಅದರಲ್ಲಿ ಇಷ್ಟೊಂದು ಸ್ಥಳವಿತ್ತು, ಅದು ಹೇಗೆ ಎಂಬ ಸಂಶಯ ಯಾರಿಗೂ ಬರುವುದಿಲ್ಲವೇ ?

ಪುಷ್ಪಕ ವಿಮಾನದಲ್ಲಿ ಕುಳಿತು ಲಂಕೆಯಿಂದ ಹೊರಟಾಗ ರಾಮ ಸೀತೆಗೆ ಅಲ್ಲಿಯ ಪ್ರದೇಶಗಳನ್ನು ತೋರಿಸುತ್ತಾ ಹೋಗುತ್ತಾನೆ. ಅದನ್ನು ಕೇಳುವಾಗ ವಿಮಾನದಲ್ಲಿ ಕ್ಷಣಮಾತ್ರದಲ್ಲಿ ಹಾರಿ ಹೋಗುವಾಗ ತೋರಿಸುವಂತೆ ಅನಿಸುವುದಿಲ್ಲ. ಏಕೆಂದರೆ ಅದು ಆಕಾಶದಲ್ಲಿ ಹಾರುವ ವಿಮಾನವಾಗಿದ್ದರೆ ಆ ಕ್ಷಣದಲ್ಲಿಯೇ ಬಹಳ ದೂರ ಹೋಗಬೇಕಿತ್ತು. ಸೀತೆಗೆ ಲಂಕೆಯನ್ನೂ ರಣಭೂಮಿಯನ್ನೂ ತೋರಿಸುತ್ತಾನೆ. ಅಲ್ಲಿ ರಾಕ್ಷಸ ಯೋಧರನ್ನು ಒಬ್ಬೊಬ್ಬರನ್ನೇ ಲಕ್ಷ್ಮಣ, ಸುಗ್ರೀವ, ಅಂಗದ ಮತ್ತು ತಾನು ಹೇಗೆ ಎಲ್ಲಿ ಕೊಂದೆವೆಂದು ತೋರಿಸುತ್ತಾನೆ. ಅಂದರೆ ಅಷ್ಟೊಂದು ವಿವರಣೆ ಆಗುವವರೆಗೆ ಅವರು ರಣಭೂಮಿಯನ್ನು ದಾಟುತ್ತಿದ್ದರು ಎಂದರ್ಥವಲ್ಲವೆ ? ಇದು ರಥದಲ್ಲಿ ಆದರೆ ಮಾತ್ರ ಸಾಧ್ಯ. ಆಕಾಶಯಾನದಲ್ಲಿ ಸಾಧ್ಯವಿಲ್ಲ. ಇದೇ ಅಭಿಪ್ರಾಯವನ್ನು ಬಂಜಗೆರೆ ಜಯಪ್ರಕಾಶ್ ಅವರು ತಮ್ಮ ''ಇದೇ ರಾಮಾಯಣ'' ಎಂಬ ಪುಸ್ತಕದಲ್ಲಿ ವ್ಯಕ್ತಪಡಿಸಿದ್ದಾರೆ. ಆಕಾಶಯಾನ ಒಂದು ಕಲ್ಪನೆ ಮಾತ್ರ. ಆದ್ದರಿಂದಲೇ ಅವರು ಹೋಗುವ ದಾರಿ ಕಾಲುದಾರಿಗುಂಟವೇ ಸಾಗುತ್ತದೆ. ಆಕಾಶದಲ್ಲಿ ನೇರವಾಗಿ ಹೋಗದೆ ಅವರು ಕಾಲುದಾರಿಯ ಬಳಸುದಾರಿಯನ್ನು ಉಪಯೋಗಿಸಿದ್ದು ಏಕೆ ಎಂಬ ಸಂಶಯವನ್ನು ವ್ಯಕ್ತಪಡಿಸಿದ್ದಾರೆ. ಯುದ್ಧಕಾಂಡದ ಸರ್ಗ ೧೨೬ನ್ನು ಓದುವಾಗ ನನಗೂ ಕೂಡಾ ಈ ಅಭಿಪ್ರಾಯ ಬಂದಿದೆ. ನಾವು ಓದುವಾಗ ''ಅವರು ಆಕಾಶದಲ್ಲಿ ಹಾರಿದರು. ಕೋಟ್ಯಾವಧಿ ವಾನರ ಸೈನಿಕರು ಅವರ ಹೆಂಡತಿಯರು ಪುಷ್ಪಕ ವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಹಾರಿದರು'' ಎಂಬ ಅಭಿಪ್ರಾಯಕ್ಕೆ ಒಪ್ಪಿಗೆಕೊಟ್ಟು ಅದು ಆ ಕಾಲದಲ್ಲಿ ಸಾಧ್ಯವಿತ್ತು ಎಂದು ಓದಿದರೆ ನಮಗೆ ಯಾವುದೂ ಅಸಾಧ್ಯ ವಿಚಿತ್ರ ಎನಿಸುವುದೇ ಇಲ್ಲ. ಯಾವ ಪೂರ್ವಾಗ್ರಹವೂ ಇಲ್ಲದೆ ಓದಿದರೆ ಖಂಡಿತ ನಮಗೆ ಸಂಶಯ ಬರದೇ ಇರುವುದಿಲ್ಲ.

ಯುದ್ಧಕಾಂಡದ ಸರ್ಗ ೧೩೦ರಲ್ಲಿ ಎಲ್ಲ ಸಿದ್ಧತೆಗಳನ್ನು ಮಾಡಿ ಭರತ ಶತ್ರುಘ್ನರು ರಾಮನ ಆಗಮನಕ್ಕಾಗಿ ಕಾಯುತ್ತಿದ್ದರು. ಎಷ್ಟು ಹೊತ್ತಾದರೂ ರಾಮ ಬರಲಿಲ್ಲವೇಕೆ ಎಂದು ಭರತ ಹನುಮಂತನನ್ನು ಕೇಳುತ್ತಾನೆ. ಆಗ ಹನುಮಂತ ಕೊಡುವ ಉತ್ತರವನ್ನು ಕೇಳಿ: ''ಭರತ, ಭರದ್ವಾಜರ ಅನುಗ್ರಹದಿಂದ ದಾರಿಯ ಮರಗಳಲ್ಲಿ ಹೂ ಹಣ್ಣುಗಳು ತುಂಬಿವೆ, ಜೇನು ಹರಿಯುತ್ತಿದೆ, ಮದಿಸಿದ ದುಂಬಿಗಳು ಝೇಂಕರಿಸುತ್ತಿವೆ. ದೇವೇಂದ್ರನೂ ಇದೇ ಬಗೆಯ ವರವನ್ನು ಕೊಟ್ಟಿದ್ದಾನೆ. ಅಲ್ಲದೆ ಶ್ರೀರಾಮನಿಗೂ ವಾನರಯೋಧರಿಗೂ ಭರದ್ವಾಜ ಮುನಿಗಳು ಆಶ್ರಮದಲ್ಲಿ ಸರ್ವೋತ್ತಮವಾದ ಔತಣವನ್ನೇರ್ಪಡಿಸಿದ್ದರು.'' ಈ ಮೇಲಿನ ಎರಡು ಸಾಧ್ಯತೆಗಳಲ್ಲಿ ಮೊದಲಿನ ಸಾಧ್ಯತೆಯನ್ನು ನೋಡಿ. ವಿಮಾನ ಆಕಾಶದಲ್ಲಿ ಹಾರಿಬರುವಾಗ ಗಿಡಮರಗಳಲ್ಲಿ ಹಣ್ಣು, ಜೇನು ಇದ್ದರೆ ಅದರಿಂದ ತಡವಾಗಬೇಕಿಲ್ಲ. ಲಂಕೆಯಿಂದ ಹೊರಡುವಾಗ ನಾವು ನೋಡಿದ್ದೇವೆ, ಎಲ್ಲರೂ ವಿಮಾನದಲ್ಲಿ ಪ್ರಯಾಣಿಸುತ್ತಿದ್ದಾರೆ. ಆದರೆ ಅವರು ಪ್ರಯಾಣಿಸುತ್ತಿರುವುದು ರಥದಲ್ಲಿಯಾದರೆ ಇಳಿದು ಹಣ್ಣು ತಿನ್ನಬಹುದು, ಜೇನು ಕಿತ್ತು ಸವಿಯಬಹುದು. ಆಗ ಪ್ರಯಾಣ ತಡವಾಗುತ್ತದೆ. ಅದಕ್ಕಿಂತಲೂ ನಡೆದು ಬರುವುದಾದರೆ ಅಕ್ಕಪಕ್ಕದಲ್ಲಿ ಇದ್ದ ಮರಗಳ ಹಣ್ಣುಗಳನ್ನು ಕಿತ್ತು ತಿನ್ನುತ್ತಾ ಜೇನು ಸವಿಯುತ್ತಾ ಬರುತ್ತಾರೆ. ಆದ್ದರಿಂದ ತಡವಾಗುವುದು ನಿಶ್ಚಿತ. ಮೇಲಿನ ಎಲ್ಲ ಸಂದರ್ಭಗಳನ್ನೂ ಪರಿಶೀಲಿಸಿದಾಗ ನಮಗೆ ತಿಳಿದುಬರುವುದೇನೆಂದರೆ ಪುಷ್ಪಕ ವಿಮಾನ ಒಂದು ರಥ ಅಥವಾ ಬಂಡಿಯಾಗಿರಬೇಕು. ಪ್ರಮುಖ ವ್ಯಕ್ತಿಗಳು ಅದರಲ್ಲಿ ಕುಳಿತು ಪ್ರಯಾಣಿಸಿದ್ದಾರೆ. ಉಳಿದ ಸೈನಿಕರು ಅದರ ಹಿಂದಿನಿಂದ ನಡೆಯುತ್ತಾ ಬಂದಿದ್ದಾರೆ (ವಿಮಾನದ ವೇಗ ನಡಿಗೆಗಿಂತ ಹೆಚ್ಚಾಗಿರಲಾರದು).

ಮುಂದೆ ಹನುಮಂತ ಭರತನಿಗೆ ಹೇಳುತ್ತಾನೆ : ''ಅದೋ ಕೇಳು, ಆನಂದ ತುಂದಿಲರಾದ ವಾನರರು ಕೋಲಾಹಲ ಮಾಡುತ್ತಿದ್ದಾರೆ! 'ವಾನರ ಸೇನೆಯು ಗೋಮತಿ ನದಿಯನ್ನು ದಾಟಿ ಬರುತ್ತಿರಬೇಕು. ಮೇಲೇಳುವ ಧೂಳಿಯನ್ನು ನೋಡು''. ಧೂಳು ಮೇಲೇಳಬೇಕಾದರೆ ವಾನರರು ನಡೆದುಬರಬೇಕು ಅಥವಾ ಕುದುರೆಗಳ ಮೇಲೇರಿ ಬರಬೇಕು ಇಲ್ಲವೇ ರಥದಲ್ಲಿ ಬರಬೇಕು. ಹಾಗೆಯೇ ಮುಂದಿನದನ್ನು ನೋಡಿ : ''ಆಹಾ ರಾಜಪುತ್ರ, ಮೇಲೆ ನೋಡು! ಚಂದ್ರನಂತೆ ನಿರ್ಮಲವಾಗಿ ಹೊಳೆಯುವ ಅದೇ ಪುಷ್ಪಕ ವಿಮಾನ''. ''ಮೇಲೆ ನೋಡು'' ಎಂಬುದನ್ನು ಓದಿಯೇ ಪುಷ್ಪಕ ವಿಮಾನ ಆಕಾಶದಲ್ಲಿ ತೇಲಿ ಬಂದಿತೆಂದು ಅಂದುಕೊಳ್ಳಬೇಡಿ. ಮೂಲದಲ್ಲಿ

ತದೇತದ್ದೃಶ್ಯತೇ ದೂರಾದ್ವಿಮಲಂ ಚಂದ್ರ ಸನ್ನಿಭಮ್ ।

ವಿಮಾನಂ ಪುಷ್ಪಕಂ ದಿವ್ಯಂ ಮನಸಾ ಬ್ರಹ್ಮ ನಿರ್ಮಿತಮ್ ॥ ಎಂದಿದೆ.

''ದೂರಾತ್'' ಎಂದರೆ ದೂರದಲ್ಲಿ ಎಂದು ಅರ್ಥವೇ ಹೊರತು ''ಮೇಲೆ'' ಎಂದು ಸರ್ವಥಾ ಆಗುವುದಿಲ್ಲ. ದೂರ ಎಂದರೆ ಅದು ಮೇಲೆಯೇ ಆಗಿರಬೇಕೆಂದು ಅನುವಾದಕರು ಹಾಗೆಯೇ ಅನುವಾದಿಸಿದ್ದಾರೆ. ವಿಮಾನ ಎಂದರೆ ಈಗಿನ ವಿಮಾನದಂತೆ ಮೇಲೆ ಆಕಾಶದಲ್ಲಿ ಹಾರಾಡುವ ವಿಮಾನ ಎಂಬ ಪೂರ್ವಾಗ್ರಹದಿಂದ ಹಾಗೆ ಅನುವಾದಿಸಿದ್ದಾರೆ ಎಂದು ಹೇಳದೇ ಬೇರೆ ವಿಧಿಯಿಲ್ಲ.

ಸುತೀಕ್ಷ್ಣ ಮುನಿಗಳ ಆಶ್ರಮಕ್ಕೆ ರಾಮ ಹೋಗುವಾಗ ಅಲ್ಲಿಗೆ ಆಗಲೇ ದೇವೇಂದ್ರ ಬಂದಿರುತ್ತಾನೆ. ಆತನ ವಿಮಾನವನ್ನು ರಾಮ ಲಕ್ಷ್ಮಣರು ಕಾಣುತ್ತಾರೆ. ಈ ವಿಮಾನವೂ ಆಕಾಶದಲ್ಲಿ ಹಾರಾಡುತ್ತದೆ. ರಾಮನ ಬರವನ್ನು ಕಂಡು ದೇವೇಂದ್ರ ವಿಮಾನದಲ್ಲಿ ಕುಳಿತು ವೇಗವಾಗಿ ಹಾರಿಹೋಗುತ್ತಾನೆ. ಆದರೆ ಆಶ್ಚರ್ಯ ನೋಡಿ. ಆತನ ವಿಮಾನಕ್ಕೆ ಬಿಳಿಕುದುರೆಗಳನ್ನು ಹೂಡಲಾಗಿರುತ್ತದೆ. ಆಕಾಶದಲ್ಲಿ ಹಾರಾಡುವ ವಿಮಾನಕ್ಕೆ ಕುದುರೆಗಳು ಏಕೆ?

ಖರ ದೂಷಣರು ಮತ್ತು ಅವರ ಸೈನ್ಯ ಹತವಾದ ಮೇಲೆ ಶೂರ್ಪಣಖಿ ರಾವಣನಲ್ಲಿಗೆ ಹೋಗುತ್ತಾಳೆ. ಆಗ ರಾವಣ ತನ್ನ ಅರಮನೆಯ ಉಪ್ಪರಿಗೆಯಲ್ಲಿ ಕುಳಿತಿದ್ದ. ಮೂಲ ಶ್ಲೋಕದಲ್ಲಿ ಹೇಗಿದೆ ನೋಡೋಣ :

''ಸಾ ದದರ್ಶ ವಿಮಾನಾಗ್ರೇ ರಾವಣಂ ದೀಪ್ತ ತೇಜಸಮ್''. ಇಲ್ಲಿ ವಿಮಾನ ಎಂಬುದನ್ನು ಉಪ್ಪರಿಗೆ ಎಂದೇ ಅನುವಾದಿಸಿದ್ದಾರೆ ಎಂಬುದನ್ನು ಗಮನಿಸಿ.

ಈ ಎಲ್ಲ ಸಂದರ್ಭಗಳನ್ನು ಪರಿಶೀಲಿಸಿದಾಗ ರಾಮಾಯಣದ ವಿಮಾನ ಖಂಡಿತ ಇಂದಿನ ವಿಮಾನದಂತೆ ಆಕಾಶದಲ್ಲಿ ಹಾರಾಡುತ್ತಿರಲಿಲ್ಲ, ಅದು ವೇಗವಾಗಿಯೂ ಹೋಗುತ್ತಿರಲಿಲ್ಲ, ಎಂಬುದು ತಿಳಿಯುತ್ತದೆ. ಅಂದಿನ ಕಾಲಕ್ಕೆ ತಕ್ಕಂತೆ ಕುದುರೆಗಳಿಂದ ಎಳೆಯಲ್ಪಡುವ ಭಾವಣಿ ಇರುವ ಬಂಡಿ ಅಥವಾ ರಥ ಆಗಿರಬೇಕಲ್ಲದೆ ಬೇರೆ ಯಾವುದೂ ಆಗಿರಲು ಸಾಧ್ಯವಿಲ್ಲ.

ಎಸ್. ನಳಿನಿ
೪೪, ಲಕ್ಷ್ಮೀ ಕೇಶವ, ಕರುಣೇಶ್ವರ ನಗರ, ಗುಲಬರ್ಗಾ - ೫೮೫ ೧೦೩

# ಹಚ್ಚಿಕೊಂಡಿ...ರಾ ನೀವು?

ಹಾಂ, ಹಚ್ಚಿಕೊಳ್ಳುವುದು ಅಂದರೆ ಲಿಪ್‌ಸ್ಟಿಕ್, ನೇಲ್‌ಪಾಲಿಶ್, ಪೌಡರ್, ಕ್ರೀಮ್,....... ಇತ್ಯಾದಿ ಅಂದ್ಕೊಂಡಿರಾ......? ಅಲ್ಲಲ್ಲ, ಈ ಹಚ್ಚಿಕೊಳ್ಳುವುದು ಅರ್ಥ ನಮ್ಮನ್ನು ಯಾರಾದರೂ ಹಚ್ಚಿಕೊಳ್ಳುವುದು ಅರ್ಥಾತ್ ನೆಚ್ಚಿಕೊಳ್ಳುವುದು. ಈ ಹಚ್ಚಿಕೊಳ್ಳುವ ಶಬ್ದದ ಅರ್ಥ ನನಗೆ ನನ್ನೂರು ಬಿಟ್ಟು ಬರುವ ಮೊದಲು ಗೊತ್ತಿರಲಿಲ್ಲ. ಆಮೇಲೆ ಕಟ್ಟಿಕೊಂಡವನೊಂದಿಗೆ ಊರೂರು ಅಂತ ವರ್ಷಕ್ಕೊಮ್ಮೆ ಅಲೆದಾಡಲು ಪ್ರಾರಂಭ ಮಾಡಿದೆ ನೋಡಿ, ಅಂದಿನಿಂದ ಈ 'ಹಚ್ಚಿಕೊಳ್ಳುವ' ಚಟ ಅಂಟಿತೆನ್ನಬೇಕು. ಚಟ ಅಂತ ಯಾಕೆ ಹೇಳಿದೆ ಅಂದರೆ ಎಷ್ಟೋ ಸಲ ಈ ಹಚ್ಚಿಕೊಳ್ಳುವಿಕೆಯಿಂದ ನನ್ನವರ ಹತ್ತಿರ.. ಇತ್ತೀಚೆಗೆ ನನ್ನ ಮಕ್ಕಳಿಂದಲೂ ಅನ್ನಿಸಿಕೊಳ್ಳುವುದುಂಟು... ಅಂದ ಮೇಲೆ ಇದೊಂದು ವೈಯಕ್ತಿಕ 'ಚಟ'ವೆನ್ನುವುದರಲ್ಲಿ ತಪ್ಪೇನು....?

ಮೊದಮೊದಲಿಗೆ, ಅಂದರೆ ಮದುವೆಯಾದ ಹೊಸತರಲ್ಲಿ ಊರುಬಿಟ್ಟು ದೂರದ ಊರಿಗೆ ಬಂದು ನೆಲೆಸಿದಾಗ ಆಚೆ - ಈಚೆಯವರನ್ನೆಲ್ಲ ನಾನು ಹಚ್ಚಿಕೊಂಡಂತೆ ಅವರೂ ಹಚ್ಚಿಕೊಂಡಿದ್ದು ನಾವು ವರ್ಗವಾಗಿ ಊರುಬಿಟ್ಟು ಬರುವಾಗ ತಿಳಿಯುತ್ತಿತ್ತು. ಆಗಾಗ ಹೊಸ ತಿನಿಸು, ಉಪ್ಪಿನಕಾಯಿ, ಊರಿಂದ ತಂದ ನುಚ್ಚಿನುಂಡೆ ನಮ್ಮ ಮನೆಗೆ ಬಂದು ನಮ್ಮ ಕರಾವಳಿಯ ನೀರು ದೋಸೆ, ಪತ್ರೊಡೆ ಇನ್ನಿತರ ತಿಂಡಿ ಅವರಲ್ಲಿ ಹೋಗಿ ಒಂಥರಾ 'ಕೊಡುಕೊಳ್ಳುವಿಕೆ'ಯ ರೀತಿಯ ನಂತರ ನಾವು ನೆರೆಯವರು ಪರಸ್ಪರ ಹಚ್ಚಿಕೊಂಡಿದ್ದು. ವರ್ಗವಾಗಿ ಊರು ಬಿಡುವ ದಿನ ನನ್ನ ಹಚ್ಚಿಕೊಂಡವರೆಲ್ಲ ಕರೆದು ಕುಂಕುಮ ಕೊಟ್ಟು ಉಡಿ ತುಂಬಿಸಿ ಕಣ್ಣೀರು ಹರಿಸುತ್ತಾ ಕಳಿಸುವಾಗ ಅಳದೇ ನಾನೇನು ಮಾಡಲಿ....? ನನಗೂ ಅಳು ಉಕ್ಕಿಯೇ ಬರುತ್ತಿತ್ತು. ನನ್ನ ಮತ್ತು ನನ್ನ ಹಚ್ಚಿಕೊಂಡ ನೆರೆಯವರ ಮಧ್ಯ ಒಂಥರಾ ಅಳು ಸ್ಪರ್ಧೆ ಏರ್ಪಟ್ಟು...... ನನ್ನವರಿಗೆ ಇದೊಂದು ತರದ ಮುಜುಗರವಾಗಿ ಈ ಹಚ್ಚಿಕೊಳ್ಳುವ ಚಟಕ್ಕೆ ಮೊದಲ ಸಲ ನನ್ನವರಿಂದ ಅನ್ನಿಸಿಕೊಂಡೆ. ನಂತರ ಹೋದ ಊರನ್ನೆಲ್ಲ ಬಿಡುವಾಗ ಇದೇ ಪುನರಾವರ್ತನೆ. ಮಕ್ಕಳು ಹುಟ್ಟಿದ ನಂತರ ನನ್ನ ಜೊತೆ ಮಕ್ಕಳೂ ಸೇರಿಕೊಂಡವು. ಹೋದ ಊರಲ್ಲೆಲ್ಲ ನೆರೆಯವರನ್ನೆ ತಾತಾ, ಅಜ್ಜಿ ಅಂಕಲ್, ಆಂಟಿ, ಎಂದೆಲ್ಲಾ ಹಚ್ಚಿಕೊಂಡ ಮಕ್ಕಳು ಊರು ಬಿಡುವಾಗ ಮಾಡುವ ಹಾರಾಟವೆಷ್ಟು? ಈ ಮಕ್ಕಳ 'ಹಚ್ಚಿಕೊಳ್ಳುವಿಕೆ'ಯಿಂದ ಊರುಬಿಟ್ಟು ದೂರದ ಊರಿಗೆ ವರ್ಗವಾಗಿ ಹೋದರೂ ಮಕ್ಕಳ ಹಟಕ್ಕೆ ಕಟ್ಟು ಬಿದ್ದು ವರ್ಷಕ್ಕೆ ಒಂದೆರಡು ಸಾರಿಯಾದರೂ ಬಿಟ್ಟು ಬಂದ ಊರಿಗೆ ಹೋಗಿಬರಬೇಕಾಗಿತ್ತು. ಅಲ್ಲದೆ ನಾಯಿ, ಬೆಕ್ಕುಗಳನ್ನು ಹಚ್ಚಿಕೊಂಡ ಮಕ್ಕಳು ಮನೆಯ ಸಾಮಾನಿನೊಂದಿಗೆ ನಾಯಿ, ಬೆಕ್ಕುಗಳನ್ನೂ ಪ್ಯಾಕ್ ಮಾಡಿ ಲಾರಿ ಏರಿಸುತ್ತಿದ್ದರು.

ಹೀಗೆ ದಿನ ಉರುಳಿದಂತೆ, ಮಕ್ಕಳು ದೊಡ್ಡವರಾದಂತೆ ಹಚ್ಚಿಕೊಳ್ಳುವುದರಿಂದ ದೂರವಾದರೂ ನಾನು ಬಲವಾಗಿ ಅಂಟಿಕೊಂಡು ಬಿಟ್ಟಿದ್ದೆ.

ಒಮ್ಮೊಮ್ಮೆ ಈ 'ಹಚ್ಚಿಕೊಳ್ಳುವ ಚಟ' ನಮ್ಮನ್ನು ಬಹಳ ಇಕ್ಕಟ್ಟಿಗೆ ಸಿಕ್ಕಿಸಿದ್ದೂ ಉಂಟು....

ಕಳೆದ ತಿಂಗಳು ಪಕ್ಕದ ಮನೆ ಅಂಬುಜ ಊರಿಗೆ ತನ್ನ ತಂಗಿಯ ಮದುವೆಗೆಂದು ಹೊರಟು ನಿಂತವಳು ತನ್ನ ಆರು ವರ್ಷದ ಮಗಳು 'ಪಿಂಕಿ'ಯನ್ನು ಊರಿಗೆ ಒಯ್ಯದೆ - ಸ್ಕೂಲು ತಪ್ಪುತ್ತೆ ಎನ್ನುವ ನೆವ ಮಾಡಿಕೊಂಡು- 'ಹಚ್ಚಿಕೊಂಡ' ನಮ್ಮ ಮನೆಯಲ್ಲಿ ಬಿಟ್ಟು ಹೋಗಬೇಕೆ....? ತಾಯಿ - ತಂದೆಯನ್ನು ಬಿಟ್ಟು ಎಂದೂ ಇಲ್ಲದ ಆ ಪೋರಿಯನ್ನು ಸಂಭಾಳಿಸುವುದು ನಮಗೆ ಸಾಕು ಸಾಕಾಯಿತು.



ಹೆಣ್ಣು ಮಕ್ಕಳಿಲ್ಲದ ನಮ್ಮ ಮನೆಯಲ್ಲಿ ಪಿಂಕಿಯನ್ನು ತುಸು ಹೆಚ್ಚೇ ಹಚ್ಚಿಕೊಂಡಿದ್ದು ನಿಜ. ಆಕೆ ನಮ್ಮನೆಗೆ ಬಂದಾಗೆಲ್ಲ ಕಲ್ಲು ಸಕ್ಕರೆ, ಮಂಡಕ್ಕಿ, ಹುರಿಗಡಲೆ ಕೊಡುತ್ತಿದ್ದ ನನ್ನನ್ನೇ ತನ್ನಮ್ಮನಿಗಿಂತ ಹೆಚ್ಚು ಹಚ್ಚಿಕೊಂಡಿದ್ದಾಳಂತ ಅವಳನ್ನು ನಮ್ಮನೆಗೆ ಕೇಳುವಂತೆ ಎದುರುಮನೆ ಭಾರತಿಯ ಹತ್ತಿರ ಹೇಳುತ್ತಿರುವುದನ್ನು ಅಂದು ಕೇಳಿಸಿಕೊಂಡಿದ್ದೆ. ಮದುವೆಗೆಂದು ಊರಿಗೆ ಪಿಂಕಿಯ ಅಮ್ಮ-ಅಪ್ಪ ಹೊರಡುವುದೆಂದು ತೀರ್ಮಾನಿಸಿದಾಗ ಮಗುವನ್ನು ರಮಿಸಿ ''ಪಕ್ಕದ ಮನೆ ಆಂಟಿ ಮನೇಲಿ ಇರ್ತೀಯಾ? ನಾವು ಊರಿಂದ ಬೇಗ ಬಂದು ಬಿಡ್ತೀವಿ'' ಅಂತ ಕೇಳಿದ್ದಕ್ಕೆ ಆ ಪೋರಿಗೆ ನಾವು ಕೊಡುವ ಕಲ್ಲು ಸಕ್ಕರೆ, ಮಂಡಕ್ಕಿ ನೆನಪಾಯಿತೇನೋ....! 'ಹುಂ' ಅಂತ ಒಪ್ಪೇ ಬಿಟ್ಟಳಂತೆ. ಅವರಮ್ಮ 'ಬೇಗ ಬರ್ತೀನಿ' ಎಂದಿದ್ದಕ್ಕೆ ಆಕೆ 'ಸಂತೆಯಿಂದ ಬೇಗ ಬರ್ತಾಳಲ್ಲಾ..... ಅಷ್ಟೇ ಬೇಗ ಬರ್ತಾಳೆ' ಅಂತ ಅಂದುಕೊಂಡಿರಬಹುದು. ಊರಿಗೆ ಹೊರಡುವಾಗ ಪಿಂಕಿಯನ್ನು ನಮ್ಮನೆಗೆ ಕರೆತಂದು ಆಕೆಯ ತಾಯ್ತಂದೆ ''ರೀ, ಈಕೆ ಊರಿಗೆ ನಾನು ಬರೋದೆ ಇಲ್ಲಾ, ಆಂಟೀ ಮನೇಲಿ ಇರ್ತೀನಿ... ಅನ್ತಾ ಇದ್ದಾಳೆ'' ಎಂದಾಗ ನಾನು ಹೇಗೆ ಬೇಡವೆನ್ನಲಿ? ಅಳುಕುತ್ತಾ ''ಆಕೆ ಇರೋದಾದ್ರೆ ನಮ್ಗೂ ಸಂತೋಷ ಇರ್ಲಿ ಬಿಡಿ, ನಮಗೇನೂ ತೊಂದರೆ ಇಲ್ಲ, ನೀವು ಊರಿಗೆ ಹೋಗಿ ಬನ್ನಿ'' ಎನ್ನಬೇಕಾಯಿತು. ಅಂತೇ ಹೇಳಿದೆ.

ಅಪ್ಪ ಅಮ್ಮ ಹೊರಟಾಗ ನಗುತ್ತಾ ಟಾ ಟಾ ಮಾಡಿದ ಪಿಂಕಿ ಅವರೆಲ್ಲಾ ಹೊರಟೊಡನೆ ಮಂಕಾಗಿ ಕುಳಿತಳು. ಕರುಳು ಚುರ್ ಅನಿಸಿ ಪಾಪ ಪುಟ್ಟ ಮಗು ಎಂದು ಕಲ್ಲು ಸಕ್ಕರೆ ಕೊಟ್ಟೆ, ಮಂಡಕ್ಕಿ ಕೊಟ್ಟೆ, ಹುರಿಗಡಲೆ ಕೊಟ್ಟೆ, ನೆಲಗಡಲೆ, ಕೊಬ್ಬರಿ, ಸಕ್ಕರೆ..... ಒಂದಾದ ನಂತರ ಒಂದರಂತೆ ಕೊಡುತ್ತಾ ಹೋದೆ. ಕೊಡಲು ಸ್ವಲ್ಪ ನಿಧಾನವಾದರೆ ತುಟಿ ಬಿಕ್ಕಲು ಸಜ್ಜಾಗಿ ನಿಂತಂತೆ ಅನಿಸುತ್ತಿತ್ತು. ಗಂಟೆಯಲ್ಲಿ ಎಲ್ಲಾ ಖಾಲಿಯಾಯಿತು. ಅಲ್ಲಿಯವರೆಗೆ ಮೌನವಾಗಿ ನೋಡುತ್ತಲಿದ್ದ ನನ್ನವರು ''ಲೇ, ನೀನು ಆ ರೀತಿ ತಿನ್ನಿಸಿದ್ರೆ, ನಾಳೆ ಖಂಡಿತ ಆಸ್ಪತ್ರೆಗೆ ಕರ್ಕೊಂಡು ಹೋಗ್ಬೇಕಾಗುತ್ತೆ ಕಣೆ'' ಎಂದರು. ನನಗೂ ಹೌದೆನ್ನಿಸಿತು. ಪಿಂಕಿಯನ್ನು ರಮಿಸುತ್ತ ''ಈಗ ಇಷ್ಟು ಸಾಕು ಇನ್ನು ಆಟ ಆಡ್ಕೋ....'' ಎಂದೆ. ಹೇಳಿ ಮುಗಿಸುವಷ್ಟರಲ್ಲಿ ಆ ಭೂಪೆ ಅಳಲಿಕ್ಕೆ ಶುರುಮಾಡಿಬಿಟ್ಟಳು. ಬಿಸ್ಕಿಟು, ಚಾಕಲೇಟು ತರಿಸಿಕೊಟ್ಟೆ. ನಿಮಿಷದಲ್ಲಿ ಮಾಯ. ಮತ್ತೆ ಅಳು ಪ್ರಾರಂಭಿಸಿದಳು. ಕೈಗೆ ಬಳೆ, ಜಡೆಗೆ ರಿಬ್ಬನ್ನೂ, ಹೇರ್‌ಪಿನ್, ನೇಲ್‌ಪಾಲಿಶ್...... ಅಬ್ಬಬ್ಬಾ! ಒಂದೇ.... ಎರಡೇ.... ಅವಳು ಹೇಳಿದ್ದನ್ನೆಲ್ಲಾ ಕೊಡಿಸಿದೆ. ನಿಮಿಷ ನಿಮಿಷಕ್ಕೆ ಪಿಂಕಿಯ ಬೇಡಿಕೆ ಏರುತ್ತಲೇ ಇತ್ತು. ಸಂಜೆ ಅಪ್ಪ - ಅಮ್ಮ ಬಂದುಬಿಟ್ಟರೆ ತನ್ನ ಕೋರಿಕೆ ನೆರವೇರದು ಎಂದುಕೊಂಡೋ ಏನೋ, ಪಿಂಕಿ ತನಗೆ ಬೇಕೆನಿಸಿದ್ದನ್ನೆಲ್ಲಾ ಕತ್ತಲಾಗುವಷ್ಟರಲ್ಲಿ ತರಿಸಿಕೊಂಡು ಬಿಟ್ಟಳು.

ತನ್ನ ಬೇಡಿಕೆಯನ್ನೆಲ್ಲಾ ಈಡೇರಿಸಿಕೊಳ್ಳುತ್ತಾ ನಾಲ್ಕು ದಿನ ಪಿಂಕಿ ಹಾಯಾಗಿ ಕಳೆದುಬಿಟ್ಟಳು - ನಮ್ಮನೆಯಲ್ಲಿ. ಎರಡು ದಿನಕ್ಕೆ ಬರುತ್ತೇನೆಂದು ಊರಿಗೆ ಹೋದ ಪಿಂಕಿಯ

ಜಯಾ ಯಾಜಿ. ಶಿರಾಲಿ

ಅಪ್ಪ - ಅಮ್ಮ ನಾಲ್ಕನೆಯ ದಿನವೂ ಬರಲಿಲ್ಲ. ತಮ್ಮ ಮಗಳು ಹೇಗಿದ್ದಾಳೆ? ನಿಮಗೆ ಉಪದ್ರವ ಕೊಟ್ಟಳಾ ಎಂದು ಕೇಳಿ ಒಂದು ಫೋನ್ ಮಾಡದಿದ್ದಾಗ ನನ್ನವರು, ಮಕ್ಕಳು ಜೊತೆಯಾಗಿ ಬಯ್ಯತೊಡಗಿದರು ನನಗೆ. ''ಪಿಂಕಿಯ ಅಪ್ಪ - ಅಮ್ಮ ತಮ್ಮ ಮಗುವನ್ನು ಅಷ್ಟು ಹಚ್ಚಿಕೊಂಡಿಲ್ಲ ಬಿಡು'' ಎಂದು ಹಾಸ್ಯ ಮಾಡತೊಡಗಿದರು.

ಪಿಂಕಿ ತುಸು ಅತ್ತರೂ ಆಕೆ ಬಾಯಿ ಬೊಂಬಾಯಿಯಾಗಿದ್ದರಿಂದ ಆಚೆ-ಈಚೆಯ ಹೆಂಗಸರೆಲ್ಲಾ ಕ್ಷಣದಲ್ಲಿ ಮುತ್ತಿಗೆ ಹಾಕಿ, 'ಏನಮ್ಮ ಪಿಂಕಿ? ಏನಾಯ್ತು? ಬಿದ್ದೆಯಾ? ಊಟ ಮಾಡಿಲ್ಲವಾ? ತಿಂಡಿ ತಿಂದಿಲ್ಲವಾ? ಆಂಟಿ ಹೊಡೆದರಾ?, ಎಂದು ನೂರೆಂಟು ಪ್ರಶ್ನೆ ಹಾಕಿ, ಪಿಂಕಿ ಯಾವ ಪ್ರಶ್ನೆಗೆ ಉತ್ತರ ಕೊಡಲಿ ಎಂದು ತಿಳಿಯದೆ ತಲೆಯನ್ನು ಅತ್ತ ಇತ್ತ ಅಲುಗಾಡಿಸಿದಾಗ... ''ಪಾಪ ಕಣ್ರಿ, ಮಗುವಿಗೆ ತಿನ್ಲಿಕ್ಕಾದರೂ ಕೊಟ್ಟರೋ ಇಲ್ಲವೋ.... ಹೀಗೆಲ್ಲ ಹೊಡೆಯೋ ಬದಲು, ಇಟ್ಕೊಳ್ಳಿಕ್ಕೆ ಆಗಲ್ಲ ಎಂದಿದ್ದರೆ ಏನಾಗ್ತಿತ್ತು?'' ಅಂತ ನನ್ನ ಕಿವಿಗೆ ಅಚ್ಚಳಿಸುವಂತೆ ಹೇಳಿದಾಗ ನನಗೆ ಅಳು ಗಂಟಲಿನವರೆಗೆ ಬಂದಿತ್ತು.

ಅಂತೂ ಆರನೇ ದಿನ ಸಂಜೆ ಪಿಂಕಿಯ ಅಪ್ಪ ಅಮ್ಮ ಜಾಲಿಯಾಗಿ ಊರಿನ ಪ್ರವಾಸ ಮುಗಿಸಿ ಬಂದರು. ''ಏನ್ರಿ, ಊರಿಗೆ ಹೋದವರು ಒಂದು ಫೋನಾದರೂ ಮಗಳ ಬಗ್ಗೆ ಕೇಳಿ ಮಾಡ್ಬಾರ್ದಾಗಿತ್ತಾ'' ಎಂದು ಕೇಳಿದರೆ ಆ ಮಹಾಮಹಿಮರು ''ಫೋನೇಕೆ ಮಾಡ್ಬೇಕು ಆಂಟಿ, ಪಿಂಕಿಯನ್ನು ಬಿಟ್ಟಿದ್ದು ನಿಮ್ಮನೆಯಲ್ಲಿ ಅಂತ ನಾವಂತೂ ನಿಶ್ಚಿಂತೆಯಿಂದ ಇದ್ವಿ,'' ಅನ್ನೋದಾ! ಆಡಲು ಹೋದ ಪಿಂಕಿ ಕೈ ಕಾಲು ಫ್ರಾಕಿಗೆ ಕೊಳೆ ಅಂಟಿಸಿಕೊಂಡು ಬಂದಿದ್ದು ಕಂಡು (ಆಡಲು ಹೋದ ಮಕ್ಕಳು ಮತ್ತೆ ಹೇಗಿರುತ್ತಾರೆ?) ಆಕಾಶ ಹರಿದು ಬಿದ್ದವರಂತೆ ''ಅಯ್ಯೋ ನಮ್ಮ ಪಿಂಕಿ ನೋಡಿ ! ನಾಲ್ಕು ದಿನಕ್ಕೇ ಎಷ್ಟು ಸೊರಗಿ ಬಿಟ್ಟಿದ್ದಾಳೆ !'' ಎನ್ನುತ್ತಾ.... ನನಗೊಂದು ಕೃತಜ್ಞತೆಯನ್ನೂ ಹೇಳದೆ ಪಿಂಕಿಯನ್ನು ಎತ್ತಿಕೊಂಡು ಮನೆಕಡೆ ಹೊರಟ ಅಂಬುಜ ನನಗೆ ಸರಿಯಾಗಿ ಕೇಳಿಸುವಂತೆ ''ಚೆನ್ನಾಗಿ ಸ್ನಾನ ಮಾಡಿಸೋದು ಇರ್ಲಿ, ಊಟಾನಾದ್ರೂ ಹೊಟ್ಟೆ ತುಂಬಾ ಹಾಕಿದ್ದಾರೋ ಇಲ್ಲವೋ.....'' ಎಂದು ಗೊಣಗಿಕೊಳ್ಳುತ್ತ ಹೋಗುವಾಗ ನನಗೆ ಹೇಗಾಗಿರಬೇಡ ?

ಇಂಥ ಘಟನೆ ಆದರೂ ಈ 'ಹಚ್ಚಿಕೊಳ್ಳುವಿಕೆ'ಯಿಂದ ದೂರವಾಗಲಿಕ್ಕೆ ಆಗುವುದಿಲ್ಲ ನನ್ನ ಹತ್ತಿರ.

ವಾರದ ಪತ್ರಿಕೆಯನ್ನು ಪೇಪರ್ ಹಾಕುವ ಹುಡುಗ ನಮ್ಮನೆಗೆ ಹಾಕುವುದನ್ನೇ ಕಿಡಕಿಯಲ್ಲಿ ಮುಖವಿಟ್ಟು ನೋಡುವ ಎದುರುಗಡೆ ಮನೆ ದೊಡ್ಡ ಹುಡುಗಿ, ಅವನು ಬಂದ ತಕ್ಷಣ ತಮ್ಮನನ್ನು ನಮ್ಮನೆಗೆ ಓಡಿಸುತ್ತಾಳೆ. ನಾವು ನೋಡಿಲ್ಲವೆಂದರೆ ಹಾಗೇ ಪತ್ರಿಕೆ ಎತ್ತಿಕೊಂಡು ಹೋಗುವ ಆ ಪೋರ ನಾವು ಆಕಸ್ಮಾತ್ತಾಗಿ ಕಂಡರೆ ''ಆಂಟಿ, ನಮ್ಮಕ್ಕ ಈ ಪತ್ರಿಕೆಯನ್ನು ತುಂಬ ಹಚ್ಕೊಂಡಿದ್ದಾಳೆ. ಪತ್ರಿಕೆ ಬರ್ಲಿಕ್ಕೆ ಅರ್ಧ ಗಂಟೆ ಲೇಟಾದ್ರೂ ಎಷ್ಟೊಂದು ಪೇಚಾಡ್ತಾಳೆ ಗೊತ್ತಾ ?'' ಅನ್ನುತ್ತಾ ನಮ್ಮ ಉತ್ತರವನ್ನೂ ಬಯಸದೇ, ಪತ್ರಿಕೆಯನ್ನು ಎತ್ತಿಕೊಂಡು ಹೋರಟೇ ಬಿಡುತ್ತಾನೆ. ಹೇಗಿದೆ ನೋಡಿ ಈ 'ಹಚ್ಚಿಕೊಳ್ಳುವ' ಚಟ.

ನಾಯಿ ಬೆಕ್ಕುಗಳೂ ಅಷ್ಟೆ. ಅವು ನಮ್ಮನ್ನು ಎಷ್ಟು 'ಹಚ್ಚಿಕೊಳ್ಳುತ್ತವೆ', ಎಂದರೆ - ನಾವು ಎಷ್ಟೇ ಮನೆ ಬದಲಾಯಿಸಲಿ, ಯಾವ ಬೀದಿಗೇ ಹೋಗಲಿ, ಅಲ್ಲಿಗೆ ಅವುಗಳೂ ಹಾಜರ್ ಆಗಿಬಿಡುತ್ತವೆ. ಒಮ್ಮೆ ನಾವು ಸಾಕಿದ ಬೆಕ್ಕೊಂದು ಕದ್ದು ತಿನ್ನುವ ಅಭ್ಯಾಸವನ್ನು ಅಂಟಿಸಿ ಕೊಂಡಿತ್ತು. ಎಷ್ಟು ಜಾಗ್ರತೆ ವಹಿಸಿದರೂ ಆ ಬೆಕ್ಕು ಅದು ಹೇಗೋ ಕದ್ದು ಮುಚ್ಚಿ ಬಂದು ದಿನಕ್ಕೊಮ್ಮೆಯಾದರೂ ಹಾಲನ್ನೊ, ಮೊಸರನ್ನೊ ಕದ್ದು ತಿನ್ನದೇ ಇರುತ್ತಿರಲಿಲ್ಲ. ಬೇಸರಿಸಿದ ನಾವು ಗೋಣಿ ಚೀಲದಲ್ಲಿ ಕಟ್ಟಿ ನಾಲ್ಕು ಕಿ.ಮೀ. ದೂರ ಇರುವ ನಮ್ಮ ಕೆಲಸದವಳ ಹತ್ತಿರ ಕೊಟ್ಟು ಕಳಿಸಿದೆವು. ಬೆಳಗೆನ್ನುವಷ್ಟರಲ್ಲಿ ಆ ಬೆಕ್ಕು ಬಾಗಿಲು ತೆರೆಯುತ್ತಿದ್ದಂತೆ ಹಾಜರ್ ಆಗಬೇಕೇ..... ಅದು ನಮ್ಮನ್ನು ಎಷ್ಟೊಂದು ಹಚ್ಚಿಕೊಂಡಿದೆ ಅನಿಸಿತು ನನಗೆ.

ಒಟ್ಟಿನಲ್ಲಿ 'ಹಚ್ಚಿಕೊಳ್ಳುವ' ಚಟ ಮಾನವರಷ್ಟೇ ಅಲ್ಲ, ಪ್ರಾಣಿಗಳಿಗೂ ಅಂಟಿರುತ್ತೆ.- ಅಲ್ಲವಾ?

**ಜಯಾ ಯಾಜಿ. ಶಿರಾಲಿ**
೧೨೦, ಎಂ. ಐ. ಜಿ. ಒಂದು, ೩ನೇ ಮೇನ್, ಹೌಸಿಂಗ್ ಬೋರ್ಡ್,
ಜ್ಯೋತಿನಗರ, ಚಿಕ್ಕಮಗಳೂರು - ೫೭೭ ೧೦೨

# ದಿ|| ಶಂಕರ ಪಾಟೀಲರ ನಾಲ್ಕು ವರ್ಣ ಚಿತ್ರಗಳು

೧) **ಮುಖಪುಟ ಚಿತ್ರ** : ಮೊದಲ ನೋಟಕ್ಕೆ 'ಸೋಮನ ಕುಣಿತ'ದ ಮುಖವಾಡವನ್ನು ನೆನಪಿಗೆ ತಂದರೂ ತನ್ನ ಪ್ರಮಾಣಬದ್ಧ ರೇಖಾ ವಿನ್ಯಾಸಗಳಿಂದ ಟಿ.ವಿ. ಬಾಕ್ಸ್ ಅನ್ನು ನೆನಪಿಗೆ ತರುತ್ತದೆ. ಇಲ್ಲಿ ಚಿತ್ರಕಾರ ಗ್ರಾಮೀಣ ಕಲಾ ಸಂಸ್ಕಾರದ ಮೂಲಕ ವಿದ್ಯುನ್ಮಾನ ಮಾಧ್ಯಮಗಳ ವಿಜೃಂಭಣೆಯನ್ನು ತೋರಿಸಿದ್ದಾರೆ. ಇದಕ್ಕೆ ಹಿನ್ನೆಲೆಯಾಗಿ ಬಳಸಿರುವ ಪ್ರಭಾವಳಿಗೆ ಪೆಡಂಭೂತಗಳ ಬೆನ್ನು ಮೇಲಣ ನೀಳ ಶಲ್ಕಗಳನ್ನು ಸಂಯೋಜಿಸಿ, ಇದಿರಿನಲ್ಲಿ ಮೈ ಮರೆತು ಕುಣಿಯುತ್ತಿರುವ ಆಧುನಿಕರ ಅವಾಂತರಗಳನ್ನು ತೋರಿಸಿದ್ದಾರೆ.

೨) **ಉತ್ಸವ ಚಿತ್ರ** : ಇದಕ್ಕೆ ನಗರ ಮತ್ತು ಗ್ರಾಮಗಳೆಂಬ ಪ್ರತ್ಯೇಕ ನೆಲೆಗಳಿವೆ. ಹಸಿರು ಮತ್ತು ಮರಗಳ ಮಧ್ಯೆ ಸರಳವಾಗಿ ಕಾಣುವ ಮನೆಗಳು ಗ್ರಾಮಬಿಂಬವಾಗಿದ್ದರೆ, ಹಸಿರಿಲ್ಲದ ಬಯಲು, ಬೋಳುಬಂಡೆ, ಜನ ದಟ್ಟಣೆಗಳ ಮಧ್ಯೆ ಮುಗಿಲೆತ್ತರಕ್ಕೆ ಚಾಚಿಕೊಂಡಿರುವ 'ರಂಗುಲ ರಾಟ್ನಂ' (= ರಾಟೆ ತೊಟ್ಟಿಲು) ನಗರ ಬಿಂಬವಾಗಿದೆ. ಗ್ರಾಮ ಮೂಲದ 'ನಿರುತ್ಸವ' ಮತ್ತು ನಗರಮೂಲದ 'ಉತ್ಸವ'ಗಳ ವೈದೃಶ್ಯವಿಲ್ಲಿ ಎದ್ದು ಕಾಣುತ್ತದೆ. ನಗರ ನೆಲೆಯಲ್ಲಿ ಕಣ್ಣಿಗೆ ರಾಚುವಂತೆ ಕಾಣುತ್ತಿರುವ ವಿಷಯುಕ್ತ ಕೆಂಪು ಅಣಬೆಗಳು ಅಸಹಜವೆನಿಸಿದರೂ ನಗರೀಯ ವಿಷಮತೆಯನ್ನು ಸಮರ್ಥವಾಗಿ ಬಿಂಬಿಸುತ್ತವೆ.

೩) **ವ್ಯಕ್ತಿ ಚಿತ್ರ** : ಮಧ್ಯಕಾಲೀನ ಭಾರತದ ಪಾಳೇಗಾರಿಕೆಯನ್ನು ನೆನಪಿಗೆ ತರುವ ಈ ವ್ಯಕ್ತಿಚಿತ್ರಕ್ಕೆ ಕಲ್ಪಿಸಿರುವ ಚೌಕಟ್ಟು ಗಮನಾರ್ಹ ! ಈ ಚಿತ್ರ ಪುರುಷನು ತೊಟ್ಟಿರುವ ಖಾದಿ ಜುಬ್ಬಾ ಸಮಕಾಲೀನ ಧ್ವನಿಯನ್ನು ಹೊಂದಿದ್ದು ರೂಢಿಗತ ಪಾಳೇಗಾರಿಕೆಯ ಚೌಕಟ್ಟಿನಲ್ಲೇ ಕಾಣಿಸಿಕೊಳ್ಳುತ್ತಿರುವ ರಾಜಕಾರಣಿಗಳ ಅಭಿವ್ಯಕ್ತಿಯೂ ಆಗುತ್ತದೆ.

೪) **ಕೇಸರಿ ಧ್ವಜ** : ಈ ಚಿತ್ರದಲ್ಲಿ ಸಂಘ ಪರಿವಾರದ ದಾಂದಲೆಗಳೊಂದಿಗೆ ಏಕಪಕ್ಷೀಯ ನಿಲುವುಗಳ ಪ್ರತೀಕದಂತೆ 'ಒಂಟೆತ್ತು' ಕಂಡುಬರುತ್ತದೆ. ಕೇಸರಿ ಧ್ವಜದ ಪಟ ಪಟ ಶಶಾಂಕನನ್ನು ಮಂಕುಗೊಳಿಸುವಂತಿದೆ. ಚಲನೆಯಿಲ್ಲದ ಬಂಡಿ ಇವೆಲ್ಲವುಗಳ ಸಮರ್ಥ ಬಿಂಬವಾಗಿದೆ.

*ಕೋಲಾರ* *ವಿ. ಚಂದ್ರಶೇಖರ ನಂಗಲಿ*

೧) **ಮುಸ್ಸಂಜೆ** : ಬೆಳಕಿನ ಸೌಮ್ಯತೆಯ ಕಿರಣವನ್ನೇ ಪುನಃ ತನ್ನಲ್ಲಿಟ್ಟುಕೊಂಡು ಹೊಸತನಕ್ಕಾಗಿ ಮರೆಯಾಗುತ್ತಿದ್ದಾನೆ. ಎಲ್ಲವೂ .... ಎಲ್ಲರೂ ಅಷ್ಟೇ. ಈ ಭೂಮಿಗೆ ಪಾದ ಊರಿದಾಗ ಎಷ್ಟು ಮುದ್ದುತನ, ಮುಗ್ಧತೆ, ಮಧ್ಯಂತರದಲ್ಲಿ ಕೋಪ, ಉರಿಗಣ್ಣನೋಟ, ಜಗತ್ತನ್ನೆ ಗೆಲ್ಲುವ ಹುಂಬತನ, –ಸಂಜೆ..... ಮತ್ತೆ ಮೌನ, ಶಾಂತ ಚಿತ್ತತೆ. ಧ್ಯಾನಿಯಂತೆ ಹೊಸತಿಗಾಗಿ ಹುಡುಕುವಿಕೆ, ಮನಸ್ಸು ಮಾಗುವಿಕೆ.

೨) **ಜಾತ್ರೆ** : ಈ ಬದುಕೆ ಹಾಗೆ ! ನಮ್ಮರಿವಿಗೆ ಬಾರದ ವಿಚಾರ. ಕನಸು ಕಟ್ಟಿಕೊಡುವ ಮೊದಲ ಒಂದೊಂದೆ ಬಯಕೆ, ಉತ್ಸವ, ಜಾತ್ರೆ ಮೇಳೈವಿಕೆ. ನಮ್ಮ ರಂಜನೆಗೆ ಮಾತ್ರ ಬದುಕು, ಅದರಾಚೆಗಿನ ಯೋಚನೆಗಳೆಲ್ಲಾ ನಮ್ಮದಲ್ಲ! 'ಈ ಜೀವನ ಮೂರು ದಿನದ್ದು.' ನಂಬಿಕೆ ಅಷ್ಟೆ. ಆಗಲೇ ಎಷ್ಟೊಂದು ಮೋಜು..... ಜೊತೆಯಲ್ಲಿಯೇ ಬರುವ ಸಾವಿನ ಸವಾಲು !

೩) **ಕೊನೆಯಿರದ ಹೋರಾಟ** : ದಿನವೂ ಜೂಜಿನಂತೆ ಕೊನೆಯಿಲ್ಲದಂತಹ ಗಡಿಬಿಡಿಯಲ್ಲಿ ನಮ್ಮ ಹೋರಾಟ. ಕಾಸಿಗಾಗಿ ಕನಸಿನ ತೀರುವಿಕೆಗೆ..... ಎಲ್ಲವೂ ತನಗಾಗಿ. ಆದರೆ ಎಷ್ಟು ಜನರಿಗೆ ಸಿಗುವ ಸಹಕಾರ, ಸಮಾನತೆ...... ಈಗಲೂ ಬೀಡು ಬಿಟ್ಟ ವರ್ಗಸೃಷ್ಟಿ, ಜಾತೀಯತೆ –ನಾವೀಗ ನಿರ್ವಿಣ್ಣ ! ಏಕೆಂದರೆ ಹೋರಾಟ ಅದು ಕೊನೆಯಿಲ್ಲದ್ದು ಜೊತೆಗೆ ಕಳಕಳಿಯ ಜನರಿಲ್ಲದ್ದು.

೪) **ಕಿರೀಟಧಾರಿ ನಾನು** : ಹಿಂದೆ ನಾನಿದ್ದಾಗ ರಾಜ್ಯ 'ಸುರ್ಮಾ' ಉತ್ಸವ ಆಚರಿಸಿತ್ತು. ನನ್ನ ಕಣ್ಣು, ಕಿವಿ, ಅಂಗಾಂಗಗಳೆಲ್ಲಾ ಮಾತಾಡುತ್ತಿದ್ದವು! ಧರ್ಮ, ಜಾತಿ, ಸಂಸ್ಕೃತಿ ಎಲ್ಲಕ್ಕೂ ನಾನೇ ಅಧಿಪತಿ. ಕಂದಾಯ ಕಟ್ಟುವಿಕೆ.... ಯೋಚನೆಯಿಲ್ಲದ ಬದುಕಿಗೆ ಮುಳುವಾಗಿ ರಲಿಲ್ಲ. ನಾನೇ ದಕ್ಷ . ಹೊಗಳುವವರಿದ್ದರು. ದೇವಸ್ಥಾನ, ಅದರ ಸೌಂದರ್ಯ ಎಲ್ಲ ನನ್ನಿಂದಲೆ..... ಏಕೆಂದರೆ ಆಗ ಆಳು ಜನರಿಗೆ ಮಾತಿನ ಬಾಯಿರಲಿಲ್ಲ. ಬದುಕು ಚರಿತ್ರೆ ಸೇರದೆ ಕೋಟೆಯ ಕಲ್ಲಾಗಿದ್ದರು !

*ಹನಿಯ* *ಶಿವರಾಮ ಕಾರಗಡಿ*

ಸುಪ್ರಭಾತದ ಸಮಯದಲ್ಲೂ ಸಂಧ್ಯಾರಾಗದ ಸೆಳೆತ, ಮನಸ್ಸುಗಳನ್ನು ಮಿಡಿಯಲು ಓಕುಳಿಯ ಗುಲಾಬಿ ರಂಗನ್ನು ಚಿಮ್ಮಿಕೊಂಡು ನಿಸರ್ಗವನ್ನು ಧ್ಯಾನಿಸುತ್ತಿರುವ ಗಿರಿಧಾಮಗಳು.

ಬದುಕೆಂಬ ವಿಶ್ವ ಪರ್ಯಟನಕ್ಕೆ ಒಂಟಿಗಾಲಿ ಬಂಡಿ ಉರುಳಲು ಸಾಧ್ಯವೆ? ಒಂಟೆತ್ತು ಹೂಡಲಾಗುವುದೆ? ಸಾಗರದ ಹೊಡೆತಕ್ಕೆ ಸಾವಿರ ಕಷ್ಟಗಳು ಸಾವಿರದೆ ಸವೆಯಬೇಕು ಪ್ರತಿಬಿಂಬ ಸವಿದರ್ಥಬೇಕು ಜೀವನಕೆ.

ಒಮ್ಮೆ ವಸಂತ ಬರೆದ ಒಲವಿನ ಕಾವ್ಯಕ್ಕೆ ಮೆಟ್ಟಿಲೇರಿ ನಿಲ್ಲಲು ಇರಬೇಕು ಏಣಿ. ಬಂಡೆಬಯಲುಗಳಾಚೆ ಜೀವ ಸಂಚಾರವಾಗಿ ಹರಿಯುತ್ತಿರಬೇಕು ಹಸಿರಲ್ಲಿ. ಮುಗಿಲೆತ್ತರಕ್ಕೆ ಸಂತಸವನ್ನು ಮುಟ್ಟಿಸಿ ಕುಣಿಯುತ್ತಿರಬೇಕು ಕನಸು.

ಏಳು ಬಣ್ಣಗಳ ಮಧ್ಯೆ ಕಣ್ಣ ತೆರೆದಿರುವ ಮನುಷ್ಯ ಅಂತರಂಗದ ಧ್ವನಿಯಾಗಿರಬೇಕು ತಿಳಿನೀಲಿ ಭಾವನೆಗಳಲ್ಲಿ.

*ಹೊಸಪೇಟೆ* *ಮುದೇನೂರು ಉಮಾಮಹೇಶ್ವರ*

ಖ್ಯಾತಿಯ ಶಿಖರವನ್ನೇರಿದ ಕಲಾಮಯ ಚತುರ ಕಲಾಚೇತನ. ಅವರ ಎಲ್ಲ ಚಿತ್ರಕೃತಿಗಳು ನೋಡುಗರ ಮನದಲ್ಲಿಯೇ ಅತ್ಯುತ್ಸಾಹದ ಜೋಕಾಲಿಯಾಡಿಸುತ್ತವೆ.

ಕಣ್ಣುಗಳು ಗೋಚರಿಸುವಂತೆ ದಟ್ಟ ವರ್ಣಗಳಿಂದ ಕುಂಚದ ಜೊತೆಗೆ ಆಟವಾಡಿದ ಶಂಕರ ಪಾಟೀಲರು ರಚಿಸಿದ ಈ ನಾಲ್ಕು ಕಲಾಕೃತಿಗಳು ನೋಡುಗರಿಂದ ಉನ್ನತವಾಗಿ ನೋಡಿಸಿಕೊಳ್ಳುತ್ತವೆ. ಎಲ್ಲಕ್ಕೂ ಹೆಚ್ಚಾಗಿ ಅವರ ವ್ಯಕ್ತಿ ಚಿತ್ರಗಳು ಬಹುವಾಗಿ ಕಲಾ ರಸಿಕರನ್ನು ಕಲಾ ಪ್ರೇಮಿಗಳನ್ನು ಮಾತನಾಡಿಸುತ್ತವೆ. ಕಲಾಕೃತಿಗಳ ಮೋಹಕತೆಗೆ ಮಾರುಹೋದ ಕಲಾ ಹೃದಯದವರು ಪಾಟೀಲರನ್ನು ಅತಿಯಾಗಿ ಕೊಂಡಾಡುತ್ತಾರೆ. ಅವರ ಎಲ್ಲಾ ಕಲಾಕೃತಿಗಳೂ ಎಷ್ಟೇ ಸಾಮಾನ್ಯ ಕಲಾವಿದ ರಾಗಿದ್ದರೂ ಅವುಗಳು ನಿಂತು ಮಾತನಾಡಿಸುತ್ತವೆ. ಅಷ್ಟೇ ಕೈ ಬೀಸಿ ಕರೆಯುತ್ತವೆ. ಸೂರ್ಯೋದಯ ಸೂರ್ಯಾಸ್ತ ಉತ್ಸವ, ಭಾವಚಿತ್ರ ಮೊದಲಾದವುಗಳು ನೋಡುಗರಿಂದ ಉತ್ತಮವಾಗಿ ನೋಡಿ ಮಾತನಾಡಿಸುತ್ತವೆ.

*ಗುಳೇದಗುಡ್ಡ* *ಮಲ್ಲಿಕಾರ್ಜುನ ಯೋ. ರಾಜನಾಳ*

**ಶೀರ್ಷಿಕೆಗಳು**

೧) ಮುಸ್ಸಂಜೆಯ ಮುನ್ನೋಟ
೨) ವರ್ಣಮಯ ಬದುಕಿಗಾಗಿ
೩) ಉತ್ಸಾಹದ ಉತ್ಸವ
೪) ವರ್ಣ ಚಿತ್ತಾರದ ಗಂಭೀರ ಮುಖಿ

ಕುಂಚ ಬ್ರಹ್ಮ ದಿ. ಶಂಕರ್ ಪಾಟೀಲರ ಕೈಯಲ್ಲಿ ಕುಂಚಗಳು, ವರ್ಣಗಳು ಮಾತಾಡುತ್ತಿದ್ದವು. ಅಭಿನಯಿಸುತ್ತಿದ್ದವು. ಕಲ್ಪನಾಲೋಕಕ್ಕೆ ಕರೆದೊಯ್ದು ವಿಜೃಂಭಿಸುತ್ತಿದ್ದವು.

*ರೋಣ* *ಸಂಗಮೇಶ ದಿಂಡೂರ*

**ಶಂಕರ ಪಾಟೀಲರ ಕೃತಿಗಳು**

ಶಂಕರ ಪಾಟೀಲರ ಚಿತ್ರಕೃತಿಗಳಲ್ಲಿ ಸೂರ್ಯೋದಯ ಸೂರ್ಯಾಸ್ತಗಳ ಕೃತಿಗಳು ದೆಹಲಿಯ ದೇವೇಂದ್ರನಾಥ ಶೇಠಿ ಅವರ ಕೃತಿಗಳನ್ನು ನೆನಪಿಗೆ ತರುತ್ತವೆ. ದಟ್ಟ ನೀಲಿ ವರ್ಣದಲ್ಲಿ ಅನೇಕ ಚಿತ್ರಕೃತಿಗಳು ನಿರ್ಮಾಣವಾಗಿವೆ. ಜಾನಪದ ಗತ್ತಿನ ಮಾನವಾಕೃತಿಗಳು ಭೌತಿಕ ವಸ್ತುಗಳು ಚೆನ್ನಾಗಿ ನೋಡಿಸಿಕೊಳ್ಳುತ್ತವೆ. ಭಾರತೀಯ ಪರಂಪರೆ ತಮ್ಮ ಶೈಲಿಯಲ್ಲಿ ಮೂಡಿಸಿದ್ದಾರೆ. ಇವರ ಕೃತಿಗಳು ಪ್ಯಾಬ್ಲೋ ಪಿಕಾಸೊ ಕ್ಯುಬಿಸಂ (ಘನಾಕೃತಿ) ಕೃತಿಗಳಂತೆ ಭಾಸವಾಗುತ್ತವೆ. ವಿಶೇಷ ಶೈಲಿಯಲ್ಲಿ ಭಾವಚಿತ್ರ ರಚನೆ ಆಗಿದೆ. ಶಂಕರ ಪಾಟೀಲರು ನಾಲ್ಕು ಕೃತಿಗಳಲ್ಲಿ ವಿಶೇಷತೆ ಮೆರೆದಿದ್ದಾರೆ. ನೋಡುಗರಿಂದ ನೋಡಿಸಿಕೊಳ್ಳುತ್ತವೆ. ಇವೆಲ್ಲ ಕೃತಿಗಳು ಇಂಪಾಸಿಬಲ್ ಆರ್ಟ್ ಪಂಥದವೆಂದು ಹೇಳಬೇಕಾಗುತ್ತದೆ.

*ಗುಳೇದಗುಡ್ಡ* *ಮಹಾದೇವ ಜಗತಾಪ*

*ಗಂಗಾವತಿಯ ಶ್ರೀ ಎ. ಮಹೇಶ್ವರಪ್ಪಗೌಡ ಅವರು 'ಉತ್ಸವ' ಚಿತ್ರದಲ್ಲಿ ಹಳ್ಳಿ-ಪಟ್ಟಣಗಳ ವಾತಾವರಣ ಕಂಡುಬರುವುದಾಗಿ ವಿವರಿಸಿದಾರೆ.*

# ಸಮಾಜ ವಿಜ್ಞಾನದ ಪುರುಷಶಾಹಿ ನೆಲೆಗಳು

ಸಮಾಜ ವಿಜ್ಞಾನಗಳು ಮನುಷ್ಯರ ಸಾಮಾಜಿಕ ಬದುಕನ್ನು ನಿರ್ವಚಿಸುವ ಅಧಿಕಾರವನ್ನು ಪಡೆದುಕೊಂಡುಬಿಟ್ಟಿವೆ. ಅವು ನೀಡುವ ನಿರ್ವಚನಗಳು ಎಷ್ಟು ಪ್ರಭಾವಶಾಲಿಗಳಾಗಿವೆಯೆಂದರೆ ಜನರು ಅವುಗಳನ್ನು 'ನಿಜ'ವೆಂದು ನಂಬುವಂತಾಗಿಬಿಟ್ಟಿದೆ. 'ಸತ್ಯ'ದ ವಕ್ತಾರರಂತೆ ಅವು ವರ್ತಿಸುತ್ತಿವೆ. ಸಮಾಜವನ್ನು, ಸಾಮಾಜಿಕ ಬದುಕನ್ನು ನಿರ್ವಚಿಸುವ ಅಧಿಕಾರವನ್ನು ಅವುಗಳಿಗೆ ಕೊಟ್ಟವರು ಯಾರು? ಅವುಗಳಿಗೆ 'ನಿರ್ವಚನಾಧಿಕಾರ' ಹೇಗೆ ಪ್ರಾಪ್ತವಾಯಿತು? ಇದಕ್ಕೆ ಉತ್ತರ ಹೇಳುವುದು ಕಷ್ಟ. ಅವುಗಳು ನಿರ್ವಚನೆಯ ಅಧಿಕಾರವನ್ನು ಪಡೆದುಕೊಂಡಿವೆ ಮತ್ತು ಆ ಅಧಿಕಾರವನ್ನು ಜ್ಞಾನಶಿಸ್ತುಗಳು ಚಲಾಯಿಸುತ್ತಿವೆ. ಜ್ಞಾನದ ಗುತ್ತಿಗೆ ಹಿಡಿದಿರುವ ಸಮಾಜ ವಿಜ್ಞಾನಗಳು ತಾವು ಪ್ರತಿಪಾದಿಸುತ್ತಿರುವ ಸಂಗತಿಗಳನ್ನು ಸತ್ಯವೆಂದು ಜನರು ನಂಬಬೇಕೆಂದು ಒತ್ತಾಯಿಸುತ್ತಿವೆ. ಸಾಮಾಜಿಕ ಬದುಕನ್ನು ನಿರ್ವಚಿಸುವ ಅಧಿಕಾರವನ್ನು ತಮಗೆ ತಾವು ಕೊಟ್ಟುಕೊಂಡ ಸಮಾಜ ವಿಜ್ಞಾನಗಳು ನಿರ್ವಚನದಲ್ಲಿ ಪರಿಣತರಾದ 'ತಜ್ಞ'ರ ಪಡೆಯನ್ನು ನಿರ್ಮಿಸಿಬಿಟ್ಟಿವೆ. ನಿರ್ವಚನದಲ್ಲಿ ನಿರತರಾದವರು 'ತಜ್ಞ'ರೆಂದು, ಉಳಿದವರು 'ಅಜ್ಞ'ರೆಂದು ವರ್ಗೀಕರಣವನ್ನು ಮಾಡಲಾಗಿದೆ. ತಜ್ಞರು ನೀಡುವ ನಿರ್ವಚನೆಗಳೇ ಸತ್ಯ. ಅವುಗಳನ್ನು ಅಜ್ಞರು ಒಪ್ಪಿಕೊಳ್ಳಬೇಕು.

ಸಮಾಜವನ್ನು, ಸಾಮಾಜಿಕ ಬದುಕನ್ನು ಸಮಾಜ ವಿಜ್ಞಾನ ಗಳು ನಿರ್ವಚಿಸುತ್ತಿದ್ದರೆ, ಅದರಲ್ಲಿ ತಪ್ಪೇನಿಲ್ಲ. ಆದರೆ ಈ ನಿರ್ವಚನಗಳು 'ನಿರಪೇಕ್ಷ', 'ಸತ್ಯ', ಅವು 'ಪೂರ್ವಗ್ರಹ ಗಳಿಂದ ಮುಕ್ತವಾಗಿವೆ' ಎಂದು ಹೇಳಿದರೆ ಅದನ್ನು ಒಪ್ಪುವುದು ಕಷ್ಟ. ಆದರೆ ಸಮಾಜ ವಿಜ್ಞಾನಗಳು ತಾವು ಆ ಲಕ್ಷಣಗಳನ್ನು ಉಳ್ಳವೆಂದು ಹೇಳಿಕೊಳ್ಳುತ್ತಿವೆ. ಜ್ಞಾನ ಶಿಸ್ತುಗಳು ಸಮಾಜವನ್ನು, ಜನರ ಬದುಕನ್ನು ಹೇಗೆ ನಿರ್ವಚಿಸುತ್ತಿವೆಯೋ ಅದೇ ಬಗೆಯಲ್ಲಿ ಜನರು ಸಮಾಜವನ್ನು, ಬದುಕನ್ನು ಗ್ರಹಿಸಬೇಕೆಂದು ಅವುಗಳ ಆಗ್ರಹ. ಸಮಾಜ ವಿಜ್ಞಾನಗಳ ಈ 'ಅಧಿಕಾರ'ವನ್ನು 'ಲಾಕ್ಷಣಿಕ ಶಕ್ತಿ' ಎಂದೂ 'ಶಾಸ್ತ್ರೀಯ ಶಿಸ್ತಿನ ಶಕ್ತಿ' ಎಂದೂ ಕರೆಯಲಾಗಿದೆ. ಸಮಾಜ ವಿಜ್ಞಾನಗಳ ನಿರ್ವಚನಗಳನ್ನು, ಸಂಕಥನವನ್ನು ಯಾರು ಒಪ್ಪುವುದಿಲ್ಲವೋ ಅವರು ಮೂಢರೆಂದು, ಅವರ ನಿಲುವು ಅವೈಚಾರಿಕವೆಂದು, ಅವೈಜ್ಞಾನಿಕವೆಂದು ಹೇಳಲಾಗುತ್ತಿದೆ. ಸಮಾಜ ವಿಜ್ಞಾನಗಳು ಹೇಳಿದ್ದು ವೈಚಾರಿಕ-ವೈಜ್ಞಾನಿಕ. ಉಳಿದದ್ದು ಅವೈಚಾರಿಕ- ಅವೈಜ್ಞಾನಿಕ. ಈ ಬಗೆಯ ಸರಳ ಸಮೀಕರಣಗಳನ್ನು, ಪ್ರಮೇಯಗಳನ್ನು ರೂಪಿಸುತ್ತಾ ಬರಲಾಗಿದೆ. ಪರಿಜ್ಞಾನ ವನ್ನು ಆಧಾರವನ್ನಾಗಿ ಮಾಡಿಕೊಂಡು ಸಮಾಜ ವಿಜ್ಞಾನಗಳು ನಮ್ಮ ಸಿದ್ಧಾಂತಗಳನ್ನು -ಸಂಕಥನವನ್ನು ಬೆಳೆಸುತ್ತಾ ಬಂದಿವೆ. ಇಲ್ಲಿ ಭಾವಜ್ಞಾನಕ್ಕೆ ಯಾವುದೇ ಸ್ಥಾನವಿಲ್ಲ. ಇದಿಷ್ಟೇ ಅಲ್ಲ! ಭಾವಜ್ಞಾನವು ಹೆಣ್ಣಿನ ಗುಣವೆಂದೂ ಪರಿಜ್ಞಾನವು ಗಂಡಿನ ಗುಣವೆಂದೂ ವರ್ಗೀಕರಿಸಲಾಗಿದೆ. ಈ ಕಾರಣದಿಂದಾಗಿ ಸಮಾಜ ವಿಜ್ಞಾನಗಳು 'ಪುರುಷಶಾಹಿ' ಎಂಬ ಆರೋಪಕ್ಕೆ ಗುರಿಯಾಗಿವೆ. ಈ ಆರೋಪದಲ್ಲಿ ಹುರುಳಿದೆ. ಸಮಾಜ ವಿಜ್ಞಾನಗಳ ಪುರುಷಶಾಹಿ ನೆಲೆಗಳನ್ನು ಗುರುತಿಸುವುದು ಪ್ರಸ್ತುತ ಪ್ರಬಂಧದ ಮುಖ್ಯ ಉದ್ದೇಶ. ಇಲ್ಲಿ ಎರಡು ಭಾಗಗಳಿವೆ. (ಅ) ಪರಿಜ್ಞಾನ ಮತ್ತು ಭಾವಜ್ಞಾನಗಳ ಸ್ವರೂಪವನ್ನು ಗುರುತಿಸುವುದು. ಸಮಾಜ ವಿಜ್ಞಾನಗಳು ಅಳವಡಿಸಿಕೊಂಡಿರುವ 'ಕಾರ್ಯ-ಕಾರಣ ಸಂಬಂಧಿ' ಅಧ್ಯಯನ ವಿಧಾನದ ಸ್ವರೂಪವನ್ನು ಇಲ್ಲಿ ಹಿಡಿದಿಡಲಾಗಿದೆ. (ಆ) ಸಮಾಜ ವಿಜ್ಞಾನಗಳ ಲಿಂಗ ಕುರುಡುತನವನ್ನು ಹಾಗೂ ಅವುಗಳ ಪುರುಷಶಾಹಿ ನೆಲೆಗಳನ್ನು ಗುರುತಿಸುವುದು.

**ಪರಿಜ್ಞಾನ ಮತ್ತು ಭಾವಜ್ಞಾನ**

'ಪರಿಜ್ಞಾನ' (ಇದನ್ನು 'ರೀಸನ್' ಎನ್ನುತ್ತಾರೆ)ವನ್ನು ಮಾನವರ ಸಾರಭೂತ ಅಥವಾ ಅಗತ್ಯಗುಣವೆಂದು ಗುರುತಿಸಲಾಗಿದೆ. ಮಾನವರನ್ನು ಪ್ರಾಣಿವರ್ಗದಿಂದ ಪ್ರತ್ಯೇಕಿಸುವ ಗುಣ ಇದು. ಅದು ಸಂಸ್ಕೃತಿ ಜನ್ಯ. ಸಾಮಾಜಿಕ ಬದುಕನ್ನು ಪರಿಜ್ಞಾನದ ನೆಲೆಯಿಂದ ನಿರ್ವಚಿಸುವ ಪ್ರಕ್ರಿಯೆಯಲ್ಲಿ ಭಾವಜ್ಞಾನಕ್ಕೆ ಅವಕಾಶವಿಲ್ಲ. ಭಾವಜ್ಞಾನವೆನ್ನುವುದು ಪ್ರಕೃತಿ ಜನ್ಯ ಗುಣ. ಅದನ್ನು ಪ್ರಾಣಿಸ್ತರದ ಗುಣವೆಂದು ಗುರುತಿಸಲಾಗಿದೆ. ಅದಕ್ಕೆ ಭಿನ್ನವಾಗಿ ಸಂಸ್ಕೃತಿ ಜನ್ಯವಾದ ಪರಿಜ್ಞಾನವು ಮಾನವ ಜಗತ್ತಿಗೆ ಸೇರಿದ ಗುಣವೆನಿಸಿಕೊಂಡಿದೆ. ಭಾವಜ್ಞಾನವು ಕೀಳುಮಟ್ಟದ್ದು, ಸಂಸ್ಕೃತಿ ಜನ್ಯವಾದ ಪರಿಜ್ಞಾನವು ಉನ್ನತ ಮಟ್ಟದ್ದು ಎಂಬ ಭೇದ ಕಲ್ಪಿಸಲಾಗಿದೆ. ಸಮಾಜ ವಿಜ್ಞಾನಗಳು ಹೀಗೆ ತರತಮವನ್ನು, ಏಣಿಶ್ರೇಣಿಯನ್ನು ತಮ್ಮೊಳಗೆ ಅಂತರ್ಗತ ಮಾಡಿಕೊಂಡುಬಿಟ್ಟಿವೆ. ಪ್ರಾಣಿಸ್ತರಕ್ಕೆ ಸೇರಿದ ಭಾವಜ್ಞಾನವನ್ನು ತಿರಸ್ಕರಿಸಿರುವ ಸಮಾಜ ವಿಜ್ಞಾನಗಳು ಸಂಸ್ಕೃತಿ ಜನ್ಯವಾದ ಮತ್ತು ಉನ್ನತ ಮಟ್ಟದ್ದೆನ್ನಲಾದ ಪರಿಜ್ಞಾನವನ್ನು ನೆಮ್ಮಿಕೊಂಡಿವೆ. ಈ ಬಗೆಯ ತಿರಸ್ಕಾರ ಮತ್ತು ಪುರಸ್ಕಾರಗಳ ಹಿಂದಿನ ಕಾರಣ ತುಂಬಾ ಸರಳ. ಮಾನವರ 'ಅರಿವಿ'ನ ನೆಲೆಯಿಂದ ಹರಿದುಬರುವ ಜ್ಞಾನವೇ ಪರಿಜ್ಞಾನ. ಈ ಬಗೆಯಲ್ಲಿ ಹರಿದುಬರುವ ಜ್ಞಾನವನ್ನು ಗಾತ್ರ ಹಾಗೂ ಗುಣನಿಷ್ಠವಾಗಿ ಅಳೆಯಬಹುದು. ಹೀಗೆ ಮಾಪನ-ಗಣನೆ-ಅಳತೆ ಸಾಧ್ಯವಿರುವುದರಿಂದ ಅಲ್ಲಿ ವಸ್ತುನಿಷ್ಠ ಅಧ್ಯಯನ ಸಾಧ್ಯವಾಗುತ್ತದೆ. ಪರಿಜ್ಞಾನ ಮತ್ತು ವಸ್ತುನಿಷ್ಠತೆ ಸಮಾಜ ವಿಜ್ಞಾನಗಳ ಬಹುಮುಖ್ಯ ಗುಣಗಳಾಗಿವೆ.

ಪರಿಜ್ಞಾನವನ್ನು ಆಧರಿಸಿದ ಅಧ್ಯಯನ ವಿಧಾನದಲ್ಲಿ 'ಅಧ್ಯಯನದ ವಸ್ತು' ಮತ್ತು 'ಅಧ್ಯಯನ ಮಾಡುವ ವ್ಯಕ್ತಿ'ಗಳು ಪರಸ್ಪರ 'ಭಿನ್ನ' ಎಂಬ ನಿಯಮವನ್ನು ಸಮಾಜ ವಿಜ್ಞಾನಗಳು ರೂಪಿಸಿವೆ. ಇದು ಪರಿಜ್ಞಾನವಾದಿ ಅಧ್ಯಯನ ಶಿಸ್ತುಗಳ ಪ್ರಮುಖ ಲಕ್ಷಣ. ಈ ರೀತಿಯ 'ಭಿನ್ನತೆ' ಸಾಧ್ಯವಾಗಿರುವುದರಿಂದಲೇ ಇಲ್ಲಿ ವಸ್ತುನಿಷ್ಠತೆ ನಿರ್ಣಾಯಕ ಸಂಗತಿಯಾಗಿದೆ. ಅಧ್ಯಯನಕ್ಕೆ ಒಳಪಡಿಸುವ 'ವಸ್ತು'ವನ್ನು ಅಧ್ಯಯನ ಮಾಡುವ 'ವ್ಯಕ್ತಿಗಳು' ಅನ್ಯರಾಗಿ, ದೂರ ನಿಂತು, ಹೊರಗೆ ನಿಂತು ನಿರೀಕ್ಷಿಸಬಹುದು, ಪರಿಭಾವಿಸಬಹುದು ಮತ್ತು ವಿವರಿಸಬಹುದು ಎಂಬ ಸಂಗತಿಯು ಸಮಾಜ ವಿಜ್ಞಾನಗಳ ಮೂಲದಲ್ಲಿ ಕೆಲಸ ಮಾಡುತ್ತಿದೆ. ಈ 'ದೂರ'ವೇ ಸಮಾಜ ವಿಜ್ಞಾನಿಗಳಿಗೆ ವಸ್ತುನಿಷ್ಠತೆಯ ಗುಣವನ್ನು ಒದಗಿಸಿಕೊಟ್ಟಿದೆ.

ಟಿ. ಆರ್. ಚಂದ್ರಶೇಖರ

ಭಾವಜ್ಞಾನವು ವ್ಯಕ್ತಿನಿಷ್ಠ ಗುಣವಾಗಿದೆ. ಅಲ್ಲಿ ಅಧ್ಯಯನದ ವಸ್ತು ಮತ್ತು ಅಧ್ಯಯನ ನಡೆಸುವ ವ್ಯಕ್ತಿಗಳು ಪರಸ್ಪರ 'ಅಭಿನ್ನ'. ಈ ಕಾರಣದಿಂದ ಇಲ್ಲಿ 'ದೂರ', ವಸ್ತುನಿಷ್ಠತೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಭಾವಜ್ಞಾನವನ್ನು ಆಧರಿಸಿ ವಿಶ್ವಾತ್ಮಕವಾದ ಸಿದ್ಧಾಂತಗಳನ್ನು ರೂಪಿಸುವುದು ಸಾಧ್ಯವಾಗುವುದಿಲ್ಲ.

**ಕಾರ್ಯ-ಕಾರಣ ಸಂಬಂಧ**

ಭೌತಿಕ ಜಗತ್ತಿನ ಘಟನೆಗಳನ್ನು ಹಾಗೂ ಮಾನವರ ವರ್ತನೆಯನ್ನು ಕಾರ್ಯ-ಕಾರಣ ಸಂಬಂಧಗಳ ಮೂಲಕ, ಅಂದರೆ ಕಾರಣ ಪರಿಣಾಮಗಳ ಸಂಬಂಧದ ಮೂಲಕ ವಿವರಿಸಲು ಪರಿಜ್ಞಾನವು ಸಮಾಜ ವಿಜ್ಞಾನಗಳಿಗೆ ಸಾಧ್ಯ ಮಾಡಿಕೊಟ್ಟಿದೆ. ಕಾರ್ಯ-ಕಾರಣ ಸಂಬಂಧಗಳನ್ನು ಗುರುತಿಸುವುದರ ಮೂಲಕ ಭೌತಿಕ ಜಗತ್ತಿಗೆ ಮತ್ತು ಮಾನವರ ವರ್ತನೆಗೆ ಅನ್ವಯವಾಗಬಲ್ಲ ಸಾಮಾನ್ಯೀಕರಿಸಿದ ನಿಯಮಗಳನ್ನು ಸಮಾಜ ವಿಜ್ಞಾನಗಳು ರೂಪಿಸುತ್ತಾ ಬಂದಿವೆ. ಭೌತಿಕ ಘಟನೆ ಮತ್ತು ಮಾನವರ ವರ್ತನೆಗಳ ಹಿಂದೆ ಕಾರಣವೊಂದು ಇದ್ದೇ ಇರುತ್ತದೆಂಬುದು ಸಮಾಜ ವಿಜ್ಞಾನಗಳ ನಂಬಿಕೆ. 'ಕಾರಣ'ವಿಲ್ಲದೆ ಯಾವ ಘಟನೆಯೂ ಜರುಗಲು ಸಾಧ್ಯವಿಲ್ಲ. ಮಾನವರು ಒಂದು ನಿರ್ದಿಷ್ಟ ಪರಿಯಲ್ಲಿ ವರ್ತಿಸುತ್ತಿದ್ದರೆ ಅದರ ಹಿಂದೆ ಒಂದು ಕಾರಣವು ಚಾಲಕ ಶಕ್ತಿಯಾಗಿ ಕೆಲಸ ಮಾಡುತ್ತಿರುತ್ತದೆ. ಹೀಗೆ ಕಾರಣ ಮತ್ತು ಘಟನೆ ಅಥವಾ ವರ್ತನೆಗಳ ನಡುವೆ ಅವಲಂಬಿ ಸಂಬಂಧವಿರುತ್ತದೆ. ಇಲ್ಲಿ ಕಾರಣಗಳು ಸ್ವತಂತ್ರ ಸಂಗತಿಗಳಾಗಿದ್ದರೆ ಘಟನೆ ಅಥವಾ ವರ್ತನೆ ಅವಲಂಬಿ ಸಂಗತಿ. ಯಾವ ಘಟನೆ ಅಥವಾ ವರ್ತನೆಗೆ ಯಾವುದು ಕಾರಣ ಎಂಬುದನ್ನು ನಿರ್ದಿಷ್ಟವಾಗಿ ಗುರುತಿಸುವುದೇ ಸಮಾಜ ವಿಜ್ಞಾನಗಳ ಕಾರ್ಯ. ಘಟನೆ-ವರ್ತನೆ ಹಿಂದಿನ ಕಾರಣವನ್ನು ಗುರುತಿಸುವುದರ ಮೂಲಕ ಅವನ್ನು ಕೂಲಂಕಷವಾಗಿ ವಿಶ್ಲೇಷಿಸಬಹುದು. ಘಟನೆ-ವರ್ತನೆಗೆ ಕಾರಣವಾದ ಸಂಗತಿಗಳನ್ನು ಗುರುತಿಸುವುದು ಸಾಧ್ಯವಾದರೆ, ಅಂತಹ ಕಾರಣಗಳನ್ನು ನಿರ್ದಿಷ್ಟವಾದ ಪರಿಯಲ್ಲಿ ನಿಯಂತ್ರಿಸುವುದರ ಮೂಲಕ ಘಟನೆ-ವರ್ತನೆಯು ನಿರೀಕ್ಷಿಸಿದ ರೀತಿಯಲ್ಲೇ ಸಂಭವಿಸುವಂತೆ ಮಾಡಬಹುದು ಎಂಬ ಮೀಮಾಂಸೆಯ ಮೇಲೆ ಸಮಾಜ ವಿಜ್ಞಾನಗಳನ್ನು ಕಟ್ಟಲಾಗಿದೆ. ಈ ಬಗೆಯ ಶಕ್ತಿಯನ್ನು, ಅಧಿಕಾರವನ್ನು ಭಾವಜ್ಞಾನವು ನೀಡಲು ಸಾಧ್ಯವಿಲ್ಲ. ಭಾವಜ್ಞಾನದ ಆಧಾರದ ಮೇಲೆ ವಿಶ್ವಾವೃತ ನಿಯಮಗಳನ್ನು ರೂಪಿಸಲು ಬರುವುದಿಲ್ಲ. ಪರಿಮಾಣಾತ್ಮಕ ಗಣನೆಗೆ ನಿಲುಕದ ಸಂಗತಿಗಳೆಲ್ಲ ಭಾವಜ್ಞಾನಕ್ಕೆ ಸೇರುತ್ತವೆ. ಭಾವನಾತ್ಮಕ ಸಂಗತಿಗಳಿಗೆ ಸಮಾಜ ವಿಜ್ಞಾನದಲ್ಲಿ ಸ್ಥಾನವಿಲ್ಲ. ಭಾವಜ್ಞಾನವನ್ನು ಆಧರಿಸಿದ್ದು ಅವೈಜ್ಞಾನಿಕ. ಅದು ಅವೈಚಾರಿಕ.

ಅಂತಹ ಸಂಗತಿಗೆ ಆನ್ವಯಿಕ ಗುಣವಿರುವುದಿಲ್ಲ.

**ಪುರುಷಶಾಹಿ ನೆಲೆಗಳು**

ಪರಿಜ್ಞಾನವು ಸಂಸ್ಕೃತಿಜನ್ಯವಾದ್ದರಿಂದ ಅದನ್ನು ಸಂಸ್ಕಾರ ತರಬೇತಿಯಿಂದ ಗಳಿಸಿಕೊಳ್ಳಬಹುದು. ಅದರ ಪಾತ್ರವು ಉಪಕರಣವಾದಿಯಾದುದಾಗಿದೆ. ಪರಿಜ್ಞಾನದ ಪಾತ್ರ - ಸ್ವರೂಪ ಇದಿಷ್ಟೆ ಆಗಿದ್ದರೆ ಸಮಸ್ಯೆ ಇರುತ್ತಿರಲಿಲ್ಲ. ಸಮಾಜ ವಿಜ್ಞಾನಗಳು ಪರಿಜ್ಞಾನವನ್ನು ಪುರುಷ ಗುಣವನ್ನಾಗಿ ಸಹ ಗುರುತಿಸಲು ಬಯಸುತ್ತವೆ. ಅದೇ ನಿಟ್ಟಿನಲ್ಲಿ ಭಾವ ಜ್ಞಾನವನ್ನು ಮಹಿಳೆಯರ ಸಾರಭೂತ ಅಥವಾ ಅಗತ್ಯ ಗುಣವನ್ನಾಗಿ ಗುರುತಿಸುತ್ತವೆ. ಪರಿಜ್ಞಾನವೆನ್ನುವುದು ತಾರತಮ್ಯ ಜ್ಞಾನವಾಗಿದೆ. ವಸ್ತು-ವ್ಯಕ್ತಿಗಳು ಪರಸ್ಪರ ಭಿನ್ನ ಎಂಬುದು ಪುರುಷ ವರ್ಗಕ್ಕೆ ಮಾತ್ರ ಸಾಧ್ಯವಾಗುತ್ತದೆ. ಭಾವಜ್ಞಾನಕ್ಕೆ ತರತಮ ಗುಣವಿಲ್ಲ. ಸಮಾಜ ವಿಜ್ಞಾನಗಳು ಭಾವಜ್ಞಾನವನ್ನು ಲಿಂಗ ನಿರ್ದಿಷ್ಟ ಗುಣವನ್ನಾಗಿ ಮಾಡಿವೆ. ಪರಿಜ್ಞಾನವು ಲಿಂಗ ನಿರಪೇಕ್ಷ ಸಂಗತಿ. ಈ ಕಾರಣಕ್ಕೆ ಸಮಾಜ ವಿಜ್ಞಾನಗಳು ಮಹಿಳಾ ವರ್ಗವನ್ನು ಕೇವಲ ಜನ ಸಂಖ್ಯಾ ಘಟಕವಾಗಿ ಮಾತ್ರ ಪರಿಭಾವಿಸಿಕೊಳ್ಳುತ್ತವೆ; ಸಾಮಾಜಿಕ ಘಟಕವೆಂದು ಅದನ್ನು ಮನ್ನಿಸುವುದಿಲ್ಲ.

ಸಮಾಜ ವಿಜ್ಞಾನಗಳು ತಾವು ರೂಢಿಸಿಕೊಂಡಿರುವ ಅಧ್ಯಯನ ವಿಧಾನಗಳನ್ನು ಭೌತವಿಜ್ಞಾನಗಳಿಂದ ನೇರವಾಗಿ ಎತ್ತಿಕೊಂಡಿವೆ. ಈ ಅಧ್ಯಯನ ವಿಧಾನವು ಅಧ್ಯಯನ ವಸ್ತು (ಸಮಾಜ) ಮತ್ತು ಅಧ್ಯಯನ ಮಾಡುತ್ತಿರುವ ವ್ಯಕ್ತಿಗಳು (ಜನರು) ಪರಸ್ಪರ ಭಿನ್ನವೆಂದು ಭಾವಿಸುತ್ತದೆ. ಸಮಾಜದಲ್ಲಿ ನಡೆಯುವ ಭೌತಿಕ ಘಟನೆಗಳನ್ನು ಮತ್ತು ಮಾನವರ ವರ್ತನೆಯನ್ನು ಪರಿಜ್ಞಾನಶೀಲ ವಿಜ್ಞಾನಿಗಳು ನಿಯಂತ್ರಿಸ ಬಲ್ಲವರಾಗಿದ್ದಾರೆ. ಸಮಾಜದ ಅವಿಭಾಜ್ಯ ಅಂಗವೇ ಆಗಿರುವ ಜನರು, ಸಮಾಜದಿಂದ ದೂರ ನಿಂತು ಅಲ್ಲಿ ಘಟನಾವಳಿಗಳನ್ನು, ಮಾನವರ ವರ್ತನೆಗಳನ್ನು ವೀಕ್ಷಿಸಬಹುದಾಗಿದೆ. ಈ ಬಗೆಯ ವಸ್ತುನಿಷ್ಠತೆ ಪರಿಜ್ಞಾನದಿಂದ ಸಾಧ್ಯವಾಗುತ್ತದೆ. ಭೌತವಿಜ್ಞಾನಗಳು ಜನವರ್ಗವನ್ನು ಅಖಂಡವಾಗಿ ಪರಿಭಾವಿಸುತ್ತವೆ. ಆದ್ದರಿಂದ ಅವು ಅಖಂಡವಾದಿ ಅಧ್ಯಯನಗಳಾಗಿವೆ. ಭಾವಜ್ಞಾನಕ್ಕೆ ಅಂತಹ ಸ್ವರೂಪವಿಲ್ಲ.

ಇದರ ಮುಂದಿನ ಪ್ರತಿಪಾದನೆ ಎಂದರೆ, ಪರಿಜ್ಞಾನವನ್ನು ಬೆಳೆಸಿಕೊಂಡ ಸಮಾಜವು ಮಾತ್ರ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವುದು ಸಾಧ್ಯ ಎನ್ನುವುದು. ಪೌರ್ವಾತ್ಯ ದೇಶಗಳು ಭಾವಜ್ಞಾನವಾದಿ ಸಮಾಜಗಳು, ಪಾಶ್ಚಿಮಾತ್ಯ ದೇಶಗಳು ಪರಿಜ್ಞಾನವಾದಿ ಸಮಾಜಗಳು ಎಂಬ ಹಣೆಪಟ್ಟಿ ನೀಡಿ ಪೌರ್ವಾತ್ಯರ ಬಡತನ ಮತ್ತು ಪಾಶ್ಚಿಮಾತ್ಯರ ಶ್ರೀಮಂತಿಕೆಗಳನ್ನು ವ್ಯಾಖ್ಯಾನಿಸುವ ಪರಿಪಾಠವೂ ಉಂಟು. ಅಂದರೆ, ಪರಿಜ್ಞಾನವನ್ನು ಅಭಿವೃದ್ಧಿಗೆ ಸಂವಾದಿಯನ್ನಾಗಿ, ಭಾವಜ್ಞಾನವನ್ನು ಹಿಂದುಳಿದಿರುವಿಕೆಗೆ ಸಂವಾದಿಯನ್ನಾಗಿ ಮಾಡಲಾಗಿದೆ. ಪರಿಜ್ಞಾನಶೀಲ ಗುಣವನ್ನು, ಬೆಳೆಸಿಕೊಂಡಿರುವ ಪಾಶ್ಚಿಮಾತ್ಯ ದೇಶಗಳು ತೀವ್ರಗತಿಯ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ. ಸಂಪ್ರದಾಯವಾದಿ ಸಾಮಾಜಿಕ ಹಿನ್ನೆಲೆಯನ್ನು ಹೊಂದಿರುವ ಪೌರ್ವಾತ್ಯ ದೇಶಗಳು ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲಾಗದೆ ನರಳಾಡುತ್ತಿವೆ.

ಭಾವಜ್ಞಾನಕೋಶದಿಂದ ಸಿಡಿದುಬಂದು ಪರಿಜ್ಞಾನ ಗುಣವನ್ನು ರೂಢಿಸಿಕೊಳ್ಳುವ ಪರಿಯನ್ನೇ ಅಭಿವೃದ್ಧಿಯೆಂದು ಕರೆಯಬಹುದು. ಭಾವಜ್ಞಾನದ ಮಜಲನ್ನು ದಾಟಿ ಪರಿಜ್ಞಾನದ ಮಜಲನ್ನು ಮುಟ್ಟುವ ಬಗೆಯೇ ಆಧುನೀಕರಣ, ಎಂಬುದು ಇಲ್ಲಿಯ ಗ್ರಹಿಕೆ. ಇದರಿಂದಾಗಿ ಪರಿಜ್ಞಾನವು ಆಧುನೀಕರಣಕ್ಕೆ ಮತ್ತು ಭಾವಜ್ಞಾನವು ಸಾಂಪ್ರದಾಯಿಕತೆಗೆ ಸಂವಾದಿಗಳಾಗಿಬಿಟ್ಟಿವೆ.

ಇದರ ಸಮರ್ಥನೆ ಹೀಗಿರುತ್ತದೆ : ಪ್ರಕೃತಿಯ ಮೇಲೆ ಆಧಿಪತ್ಯ ಸ್ಥಾಪಿಸುವಲ್ಲಿ ಅಭಿವೃದ್ಧಿಶೀಲ ದೇಶಗಳು ವಿಫಲವಾಗಿವೆ. ಈ ವೈಫಲ್ಯದ ಹಿಂದೆ ಪ್ರಕೃತಿಯನ್ನು ನಂಬಿಕೊಂಡಿರುವ ಸಂಗತಿಯ ಪಾತ್ರ ಗಣನೀಯವಾದುದು. ಎಲ್ಲಿಯವರೆಗೆ ಅಭಿವೃದ್ಧಿಶೀಲ ದೇಶಗಳು ಅನುಕಂಪವಾದಿ ಧೋರಣೆಯನ್ನು ತ್ಯಜಿಸಿ ಆಕ್ರಮಣವಾದಿ ಗುಣವನ್ನು ಬೆಳೆಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವುಗಳ ಅಭಿವೃದ್ಧಿ ಸಾಧ್ಯವಿಲ್ಲ ಎಂದು ಸಮಾಜ ವಿಜ್ಞಾನಗಳು ಪ್ರವಚನ ನಡೆಸಿವೆ. ಆಕ್ರಮಣವಾದಿತನವು ಪುರುಷಶಾಹಿಗುಣ ಮತ್ತು ಅನುಕಂಪವಾದಿತನವು ಮಹಿಳೆಯರ ಗುಣ, ಎನ್ನುವ ಪ್ರಭೇದವನ್ನು ಗುರುತಿಸುವಾಗ ಸಮಾಜ ವಿಜ್ಞಾನಗಳು ಪುರುಷಶಾಹಿಯನ್ನು ಮೆರೆಯುತ್ತವೆ, ವೈಭವೀಕರಿಸುತ್ತವೆ. ಪರಿಜ್ಞಾನವಾದಿ, ಆಕ್ರಮಣವಾದಿ ಪುರುಷ ಗುಣವನ್ನು ಶ್ರೇಷ್ಠವೆಂದೂ ಭಾವಜ್ಞಾನವಾದಿ, ಅನುಕಂಪವಾದಿ ಮಹಿಳಾ ಗುಣ ಕನಿಷ್ಠವೆಂದೂ ಪ್ರತಿಪಾದಿಸಲಾಗುತ್ತಿದೆ.

*ಮಾನವ ಸಮಾಜ ಅತಿಸಂಕೀರ್ಣವಾದ್ದು. ಅದರ ಅಂಗಗಳು ಹಲವು. ಅನುಭವಗಳಾದರೋ ನೂರಾರು. ಹೀಗಿರುವಾಗ ಅದನ್ನು ವಿಶ್ಲೇಷಿಸಿ ಅರ್ಥೈಸಲು ತರ್ಕಮಾತ್ರ ವಿಧಾನವಾಗಲಿ ಭಾವಮಾತ್ರ ವಿಧಾನವಾಗಲಿ ಸಮರ್ಥವೆನಿಸುವುದಿಲ್ಲ. ತರ್ಕ-ಭಾವಗಳನ್ನು ಪುರುಷ-ಸ್ತ್ರೀ ಲಕ್ಷಣಗಳೆಂದು ವ್ಯಾಖ್ಯಾನಿಸುವುದಂತೂ ತೀರಾ ಹುರುಳಿಲ್ಲದ ಪದ್ಧತಿ. ಹಾಗಿದ್ದರೂ ಸಮಾಜ ವಿಜ್ಞಾನದ ಅಧ್ಯಯನ ಪದ್ಧತಿಯೊಂದರಲ್ಲಿ ಈ ಪ್ರವೃತ್ತಿಯು ಗಾಢವಾಗಿ ನೆಲೆಗೊಂಡಿದೆ. ಅದರ ಪೂರ್ವಾಪರ ವಿವೇಚನೆಯನ್ನು ಸ್ಥೂಲವಾಗಿ ಇಲ್ಲಿ ಮಾಡಿಕೊಡಲಾಗಿದೆ.*

**ವಿಭಜೀಕೃತ ಅಧ್ಯಯನದ ನೆಲೆಗಳು**

ಹೀಗೆ ಸಮಾಜ ವಿಜ್ಞಾನಗಳು ವಿಭಜೀಕೃತ ಅಡಿಪಾಯದ ಮೇಲೆ ನಿಂತಿವೆ. ಬುದ್ಧಿ ಮತ್ತು ದೇಹ, ಅರಿವು ಮತ್ತು ಭಾವನೆ, ಪ್ರಕೃತಿ ಮತ್ತು ಸಂಸ್ಕೃತಿ ಮತ್ತು ಪ್ರಾಣಿ-ಮನುಷ್ಯ ಎಂಬ ದ್ವೇಧಾಭಾವದ ಮೇಲೆ ಸಮಾಜ ವಿಜ್ಞಾನಗಳು ರೂಪುಗೊಂಡಿವೆ. ಇದರಲ್ಲಿ ಪ್ರಕೃತಿಯ ಸ್ಥಾನವು ಅಧೀನವಾದುದು; ಪ್ರಾಣಿಸ್ತರಕ್ಕೆ ಸೇರಿದ್ದು ಭಾವಜ್ಞಾನ. ಈ ಬಗೆಯ ವಿಭಜೀಕರಣದ ಮೂಲಕವೇ ಸಮಾಜ ವಿಜ್ಞಾನಗಳು ಬೆಳೆಯುತ್ತಾ ಬಂದಿವೆ. ಹೀಗಾಗಿ ಸಮಾಜ ವಿಜ್ಞಾನಗಳು ಸಾಮಾಜಿಕ ಬದುಕಿನ ಒಂದು ಮುಖವನ್ನು ಮಾತ್ರ ತಮ್ಮ ಕಕ್ಷೆಯಲ್ಲಿ ತೆಗೆದುಕೊಳ್ಳಬಲ್ಲವು. ಈ ವಿಭಜೀಕರಣದ ಆತ್ಯಂತಿಕ ನೆಲೆಯೆಂದರೆ 'ವ್ಯಕ್ತಿ'ಯನ್ನು 'ವಸ್ತು'ವನ್ನಾಗಿ ಮಾಡಿಕೊಳ್ಳುವುದು ಮತ್ತು ನಿಯೋಗಿಯ ಜವಾಬ್ದಾರಿಯನ್ನು ವ್ಯಕ್ತಿಯಿಂದ ವಸ್ತುವಿಗೆ ವರ್ಗಾಯಿಸುವುದಾಗಿದೆ. ಇಲ್ಲಿ ವ್ಯಕ್ತಿಯ ಅನುಭವಗಳು ಮುಖ್ಯವಾಗುವುದಿಲ್ಲ. ವ್ಯಕ್ತಿಗಿಂತ ವಸ್ತುವನ್ನು ಕುರಿತು ಸಮಾಜ ವಿಜ್ಞಾನಗಳು ತಲೆಕೆಡಿಸಿಕೊಳ್ಳುತ್ತವೆ. ವ್ಯಕ್ತಿಯು ಇಲ್ಲಿ ಒಂದು ವಸ್ತುವಾಗಿಬಿಟ್ಟಿರುತ್ತಾನೆ.

ಈ ಕಾರಣದಿಂದಾಗಿ ಅವು ಪರಿಪೂರ್ಣ ಜ್ಞಾನ ಶಿಸ್ತುಗಳಾಗುವುದು ಸಾಧ್ಯವಾಗಿಲ್ಲ. ಹಾಗಾಗಬೇಕಾದರೆ ಅವು ವಿಭಜೀಕರಣವನ್ನು ತ್ಯಜಿಸಿ ವಿಲೀನೀಕರಣಕ್ಕೆ ಒಳಗಾಗಬೇಕು. ವ್ಯಕ್ತಿನಿಷ್ಠವಾದ ಸಂಗತಿಗಳನ್ನೂ ತಮ್ಮ ಕಕ್ಷೆಯೊಳಗೆ ಸಮಾಜ ವಿಜ್ಞಾನಗಳು ತೆಗೆದುಕೊಳ್ಳಬೇಕಾಗುತ್ತದೆ. ಪುರುಷಶಾಹಿ ಗುಣವನ್ನು ಬಿಟ್ಟುಕೊಡಬೇಕಾಗುತ್ತದೆ. ಬುದ್ಧಿ ಮತ್ತು ಭಾವ ಇವೆರಡನ್ನೂ ಸಂಯೋಜಿಸುವ ಅಗತ್ಯವಿದೆ. ಆಕ್ರಮಣಕಾರಿ ಗುಣವನ್ನು ಅನುಕಂಪವಾದಿ ಗುಣದ ಉಪಚಾರಕ್ಕೆ ಒಳಪಡಿಸ ಬೇಕಾಗಿದೆ. ಪ್ರಕೃತಿ ಮತ್ತು ಸಂಸ್ಕೃತಿ, ಬುದ್ಧಿ ಮತ್ತು ಭಾವ, ದೇಹ ಮತ್ತು ಆತ್ಮಗಳು ಒಂದಾಗುವ ನೆಲೆಯಲ್ಲಿ ಮಾತ್ರ ಸಮಾಜ ವಿಜ್ಞಾನಗಳು ಪರಿಪೂರ್ಣತೆ ಪಡೆದುಕೊಳ್ಳಬಲ್ಲವು. ಇದಕ್ಕಾಗಿ ಸಮಾಜ ವಿಜ್ಞಾನಗಳು ಮಹಿಳೆಯರ ಸಹಭಾಗಿತ್ವಕ್ಕೆ ಪೂರ್ಣ ಅವಕಾಶ ಕೊಡಬೇಕಾಗುತ್ತದೆ. ಮಹಿಳೆಯರ ಗುಣವನ್ನು ಕೀಳು, ಕೆಲಸಕ್ಕೆ ಬಾರದ್ದು ಎಂದು ಹೀಗಳೆಯುವುದರಿಂದ ಸಮಾಜ ವಿಜ್ಞಾನಗಳಿಗೆ ನಷ್ಟವಾಗುತ್ತದೆ. ಅನುಕಂಪ, ಸಂಗೋಪನೆಯ ಗುಣಗಳನ್ನು ಕೀಳೆಂದು ತಿರಸ್ಕರಿಸುವ ಸಮಾಜ ವಿಜ್ಞಾನಗಳು ಪುರುಷಶಾಹಿ ಗುಣವನ್ನು ಮೈಗೂಡಿಸಿಕೊಂಡಿವೆ. ಏಕಲಿಂಗಿ ಸಂಗೋಪನೆಯು ಸಮಾಜದಲ್ಲಿ ಅನೇಕ ರೀತಿಯ ಮಾನಸಿಕ ಕ್ಲೇಶ ವ್ಯಸನಗಳಿಗೆ ಕಾರಣವಾಗಿದೆ.

ಪರಿಜ್ಞಾನವೆನ್ನುವುದು ಭಾವಜ್ಞಾನ ರಹಿತವಾದ ಸಂಗತಿಯಾಗಬೇಕಾಗಿಲ್ಲ. ಪರಿಜ್ಞಾನ ಮತ್ತು ಭಾವಜ್ಞಾನಗಳೆರಡೂ ಮೇಳೈಸಿದಾಗ ಮಾತ್ರ ಸಾಮಾಜಿಕ ಬದುಕಿನ ಸೂಕ್ಷ್ಮ ಸಂಗತಿಗಳು ಗೋಚರಿಸುತ್ತವೆ. ಅಂದರೆ 'ಭಾವಜ್ಞಾನವಾದಿ ಪರಿಜ್ಞಾನ'ವನ್ನು ರೂಪಿಸುವ ಅಗತ್ಯವಿದೆ. ಅದು ಸಹಜವಾಗಿ ಲಿಂಗ ಸಂವೇದಿ ಅಧ್ಯಯನ ವಿಧಾನವಾಗಿರುತ್ತದೆ. ಲಿಂಗ ನಿರ್ದಿಷ್ಟತೆಯು ಹುಟ್ಟುಹಾಕಿರುವ ವಿಕಾರಗಳನ್ನು ಲಿಂಗ ಸಮಾನತೆಯ ಮೂಲಕ, ಲಿಂಗ ಸಂವೇದನೆಯ ಮೂಲಕ ಮಾತ್ರ ಪರಿಹರಿಸಿಕೊಳ್ಳಲು ಸಾಧ್ಯ. ಭಾವಜ್ಞಾನ ಮತ್ತು ಪರಿಜ್ಞಾನ, ಪ್ರಕೃತಿ ತತ್ವ (ಸ್ತ್ರೀತತ್ವ) ಮತ್ತು ಸಂಸ್ಕೃತಿ ತತ್ವ (ಪುರುಷತತ್ವ) ಹಾಗೂ ವ್ಯಕ್ತಿ ಮತ್ತು ವಸ್ತುಗಳ ನಡುವಿನ ಭಿನ್ನತೆಯನ್ನು ಮುರಿದು ಐಕ್ಯತೆಯನ್ನು, ಸಂಯೋಜನೆಯನ್ನು ಸಾಧಿಸುವ ಅಗತ್ಯವಿದೆ.

ಟಿ. ಆರ್. ಚಂದ್ರಶೇಖರ
ಪ್ರವಾಚಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩೨೭೬

ಬರಿ ಅಂಗೈಯಲ್ಲಿ ಕರ್ಪೂರದಾರತಿ ಮಾಡುತ್ತಾರೆ, ತಲೆಯ ಮೇಲೆ ಬೆಂಕಿ ಹೊತ್ತಿಸಿ ಟೀ ತಯಾರಿಸುತ್ತಾರೆ, ತ್ರಿಶೂಲದಿಂದ ನಾಲಿಗೆ ಚುಚ್ಚಿಕೊಳ್ಳುತ್ತಾರೆ, ಕಮಂಡಲದಿಂದ ಬೇಕಾದಾಗಲೆಲ್ಲ ನೀರು ಸೃಷ್ಟಿಸುತ್ತಾರೆ, ಶೂನ್ಯದಿಂದ ವಿಭೂತಿ, ನೋಟು ಸೃಷ್ಟಿಸುತ್ತಾರೆ.......

ದೇಶದ ಉದ್ದಗಲಕ್ಕೂ ಇಂತಹ ಪವಾಡ ಪುರುಷರ ಕತೆಗಳು ಕೇಳದವರು ವಿರಳ. ಇಂಥವರ ರಹಸ್ಯವನ್ನು ಬಯಲಿಗೆಳೆಯುವ ವಿಚಾರವಾದಿ ಮಂಗಳೂರಿನಲ್ಲಿದ್ದಾರೆ. ಅವರೇ ಡಾ॥ ನರೇಂದ್ರ ನಾಯಕ್.

''ನಾವು ಇಂದು ಅತ್ಯಾಧುನಿಕ ವೇಷ ಭೂಷಣಗಳನ್ನು ಧರಿಸಿ, ಲೇಟೆಸ್ಟ್ ಮಾಡೆಲ್ ಕಾರು, ಫ್ರಿಜ್, ಟಿ.ವಿ.ಗಳನ್ನು ಉಪಯೋಗಿಸುತ್ತಿರಬಹುದು. ಆದರೆ ಮನೋಸ್ಥಿತಿಯು ಅರ್ಧ ಶತಮಾನದ ಹಿಂದಿನ ನಮ್ಮಜ್ಜನಿಂದ ಹೆಚ್ಚು ಭಿನ್ನವಾಗಿಲ್ಲ. ಅವರು ನೆಟ್ಟ ಆಲದ ಮರಕ್ಕೇ ಇನ್ನೂ ನೇಣು ಹಾಕಿಕೊಳ್ಳುತ್ತಿದ್ದೇವೆ. ಪ್ರಾಯಶಃ ಅವರು ಹಿಂದಿನ ಕಾಲದ ಬಳ್ಳಿಯಿಂದ ತಯಾರಾದ ಹಗ್ಗ ಉಪಯೋಗಿಸಿ ಕೊಳ್ಳುತ್ತಿದ್ದರೆ, ನಾವು ಅತ್ಯಾಧುನಿಕ ನೈಲಾನ್ ಹಗ್ಗವನ್ನು ಸಾಕಷ್ಟು ಅಲಂಕಾರಗಳೊಂದಿಗೆ ಉಪಯೋಗಿಸಿ ಕೊಳ್ಳುತ್ತಿದ್ದೇವೆ,'' ಎಂದು ವಿಷಾದಿಸುತ್ತಾರೆ ಇವರು. ''ದಕ್ಷಿಣ ಕನ್ನಡ ಜಿಲ್ಲಾ ವಿಚಾರವಾದಿ ಸಂಘ''ದ ಕಾರ್ಯದರ್ಶಿಯಾಗಿರುವ ಡಾ॥ ನರೇಂದ್ರ ನಾಯಕ್‌ರು ಕೇರಳದಿಂದ ಹಿಡಿದು ಮಧ್ಯಪ್ರದೇಶ, ದೆಹಲಿ, ಸಿಕ್ಕಿಂ, ನಾಗಾಲ್ಯಾಂಡ್ ತನಕ ಈಗಾಗಲೇ ಒಂದೂವರೆ ಸಾವಿರಕ್ಕೂ ಹೆಚ್ಚು ಪವಾಡಗಳ ರಹಸ್ಯವನ್ನು ಬಯಲಿಗೆಳೆಯುವಂತಹ ಕಾರ್ಯಕ್ರಮ ನೀಡಿದ್ದಾರೆ.

ಅಂತೆಯೇ ೧೯೭೬ನೇ ಇಸವಿಯಿಂದ ದ.ಕ. ಜಿಲ್ಲಾ



ಬಂದಾಗ ಅವರ ಭಾಷಣವೊಂದನ್ನು ಏರ್ಪಡಿಸಲು ಕೆಲವು ಜನ ಸಿದ್ಧತೆ ನಡೆಸಿದ್ದರು. ಆದರೆ ''ತಾವು ಕೇವಲ ಸಂಘ ಸಂಸ್ಥೆಗಳಿಗೆ ಮಾತ್ರ ಭಾಷಣ ನೀಡುವವರೇ ಹೊರತು ವ್ಯಕ್ತಿಗಳಿಗಲ್ಲ'' ಎಂದು ಡಾ॥ ಕೋವೂರು ಹೇಳಿದರು. ಆಗ ಹುಟ್ಟಿಕೊಂಡದ್ದೇ ''ದ.ಕ. ಜಿಲ್ಲಾ ವಿಚಾರವಾದಿ ಸಂಘ''. ಡಾನ್ ಬಾಸ್ಕೋ ಹಾಲ್‌ನಲ್ಲಿ ಡಾ॥ ಕೋವೂರು ಭಾಷಣಕ್ಕೆ ಅಂದು ಕಿಕ್ಕಿರಿದ ಜನ ಒಂದು ದಾಖಲೆಯೇ ಸರಿ.

ಇತ್ತೀಚೆಗೆ ಇವರು ಮುಂಬಯಿ ಕನ್ನಡಿಗರಿಗಾಗಿ ಪವಾಡಗಳ ರಹಸ್ಯ ಬಯಲು ಮಾಡುವ ವಿಶೇಷ ಕಾರ್ಯಕ್ರಮ ನೀಡಿ ಬಂದರು. ಆ ಸಂದರ್ಭದಲ್ಲಿ

ನಾ : ನೋಡಿ, ಒಬ್ಬ ಮನುಷ್ಯನಿಗೆ ಮುಂದೇನು ನಡೆಯುತ್ತದೆ ಎಂಬ ಕುತೂಹಲ ಇದ್ದೇ ಇರುತ್ತದೆ. ಕುತೂಹಲ ಎನ್ನುವುದು ಸಹಜವೇ. ಈ ಆಸಕ್ತಿಗಳನ್ನೇ ಕೆಲವರು ಚೆನ್ನಾಗಿ ದುರುಪಯೋಗಪಡಿಸಿಕೊಳ್ಳುತ್ತಾರೆ. ಉದಾಹರಣೆಗೆ, ಅಂಜನದಲ್ಲಿ 'ಕಾಣುವ' ಭ್ರಮೆಯನ್ನು ಮಗುವಿನಲ್ಲಿ ಮಾಡುತ್ತಾರೆ. ಅದೂ ೭ ರಿಂದ ೧೦ ವರ್ಷದ ಮಗುವಿನೊಳಗೆ. ಇನ್ನು 'ಮನೋರೋಗ' ಎನ್ನುವುದನ್ನು ಸುಲಭವಾಗಿ ಒಪ್ಪದೆ ಮಂತ್ರವಾದಿ 'ಭೂತ' ಎಂದು ಹೇಳಿ ಅದನ್ನು ಬಿಡಿಸುವುದಕ್ಕೆ ಹೇಳುತ್ತಾನೆ. ಕೆಲವು ಘಟನೆಗಳಲ್ಲಿ ರಾತ್ರಿಯ ಲೈಂಗಿಕ ಬಯಕೆಯ ಪೂರೈಕೆಯ ಸಾಧ್ಯತೆಗಳಿವೆ. ಅಂಜನ ಶಕ್ತಿಯಿಂದ ಕವರ್‌ನೊಳಗೆ ಇರಿಸಿದ ನೋಟಿನ ನಂಬರ್ ಹೇಳಲು ತಿಳಿಸಿದರೆ ಆಗ ಅಂಥವರು ಸಿಕ್ಕಿ ಬೀಳುತ್ತಾರೆ ಹಾಗೂ ತಪ್ಪಿಸಿಕೊಳ್ಳುತ್ತಾರೆ.

ಪ್ರ : ಮೂಢ ನಂಬಿಕೆಗಳನ್ನು ನಿವಾರಿಸುವ ಕಾರ್ಯಕ್ರಮ ಎಲ್ಲೆಲ್ಲಿ ಮಾಡಿದ್ದೀರಿ ? ಒಟ್ಟು ಎಷ್ಟು ?

ನಾ : ಈ ತನಕ ಲೆಕ್ಕ ಇಟ್ಟಿಲ್ಲ. ಆದರೂ ೧,೫೦೦ ದಾಟಿವೆ. ದಕ್ಷಿಣದಿಂದ ಉತ್ತರ ಭಾರತದ ತನಕ ವರ್ಷಕ್ಕೆ ೨೦೦-೩೦೦ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ಹಿಂದಿನ ಕೆಲವು ಉದಾಹರಣೆಗಳನ್ನು ನೀಡುವುದಾದರೆ ಗಜೇಂದ್ರಗಡ ಜಾಥಾದಲ್ಲಿ ದಿನಕ್ಕೆ ೪ರಂತೆ ಕಾರ್ಯಕ್ರಮ ನೀಡಿದ್ದಿದೆ. ಪೂರ್ವೋತ್ತರ ರಾಜ್ಯಗಳಲ್ಲಿ ರಜೆಯ ಸಮಯ ಒಂದೊಂದು ದಿನ ೨ -೩ ಕಾರ್ಯಕ್ರಮಗಳು, ಅಂತೆಯೇ ಒಂದೆರಡು ತರಬೇತಿ ಶಿಬಿರಗಳನ್ನು ನಡೆಸಿದ್ದಿದೆ. ಕೆಲವು ವಸ್ತು ಪ್ರದರ್ಶನಗಳಲ್ಲಿ ದಿನಕ್ಕೆ ಹತ್ತು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದೂ ಉಂಟು. ೧೯೭೬ರಿಂದಲೇ ನಮ್ಮ 'ಪವಾಡ ರಹಸ್ಯ ಬಯಲು' ಕಾರ್ಯಕ್ರಮ ಶುರುವಾಗಿದೆ.

# ದೇವರು ಎನ್ನುವುದರ ಕಲ್ಪನೆಯೇ ನನ್ನಲ್ಲಿಲ್ಲ

ವಿಚಾರವಾದಿ ಸಂಘದ ಪರವಾಗಿ ಅತೀಂದ್ರಿಯ ಶಕ್ತಿ ಮತ್ತು ಅತಿಮಾನುಷ ಶಕ್ತಿಗಳನ್ನು ತೋರಿಸುವವರಿಗೆ ನಗದು ಬಹುಮಾನ ನೀಡುವ ಘೋಷಣೆ ಹಾಕಿದ್ದಾರೆ. ಆರಂಭದಲ್ಲಿ ೨೫ ಸಾವಿರ ರೂ. (೧೯೮೯), ಆನಂತರ ೫೦ ಸಾವಿರ ರೂ. ೧೯೯೨ರ ನಂತರ ಈ ಸಂಘವು ಹಣದ ಮೌಲ್ಯವನ್ನು ಹೆಚ್ಚಿಸಿದೆ. ಆದರೆ ಯಾರೂ ತಾವು ಅತೀಂದ್ರಿಯ ಶಕ್ತಿ ತೋರಿಸುತ್ತೇವೆಂದು ಈ ತನಕ ಮುಂದೆ ಬಂದಿಲ್ಲವಂತೆ. ಇವರ ಸವಾಲು ಹೀಗಿದೆ : ನೀರಿನ ಮೇಲೆ ಮೂರು ಹೆಜ್ಜೆ ನಡೆಯಿರಿ ಅಥವಾ ಲಕೋಟೆಯಲ್ಲಿ ಮೊಹರು ಮಾಡಲಾದ ನೋಟಿನ ನಂಬರನ್ನು ಓದಿ ಹೇಳಿ. ಈ ರೀತಿಯ ಸುಮಾರು ೧೩ ಬಗೆಯ ಪವಾಡ ಅಥವಾ ಅತೀಂದ್ರಿಯ ಶಕ್ತಿಯನ್ನು ಯಾರಾದರೂ ಕಾಣಿಸಿದರೆ ಇಡೀ ಆಸ್ತಿಪಾಸ್ತಿಯನ್ನು ಅಂತಹ 'ಪವಾಡ ಪುರುಷ'ನಿಗೆ ಒಪ್ಪಿಸಲು ಈಗಲೂ ಸಿದ್ಧನಿದ್ದೇನೆ ಎನ್ನುತ್ತಾರೆ ಡಾ॥ ನರೇಂದ್ರ ನಾಯಕ್.

೭೦ರ ದಶಕದಲ್ಲಿ ಮಂಗಳೂರಿಗೆ ಡಾ॥ ಕೋವೂರು

ಅವರೊಡನೆ ನಡೆಸಲಾದ ಸಂವಾದ ಭಾಗಶಃ ಹೀಗಿದ್ದಿತು :

**ಪ್ರಶ್ನೆ** : 'ದೇವರು' ಇದರ ಬಗ್ಗೆ ನಿಮ್ಮ ಕಲ್ಪನೆ ಏನು?

**ಡಾ॥ ನರೇಂದ್ರ ನಾಯಕ್** : 'ದೇವರು' ಎನ್ನುವುದರ ಬಗ್ಗೆ ನನಗೆ ಕಲ್ಪನೆಯೇ ಇಲ್ಲ. ನಾನು ನಾಸ್ತಿಕ. ಜಗತ್ತನ್ನು ರಚಿಸಿ, ಮುನ್ನಡೆಸುವ ದೇವರಿದ್ದಾನೆ ಅಥವಾ ಇದ್ದಾಳೆ ಎನ್ನುವುದನ್ನು ನಾನು ನಂಬುವುದೇ ಇಲ್ಲ. ಇವೆಲ್ಲ ಪುರೋಹಿತಶಾಹಿಯ ಸೃಷ್ಟಿಗಳು. ನನ್ನ ಪ್ರಕಾರ ಬಸವಣ್ಣ ಹೇಳಿದಂತೆ ಕಾಯಕವೇ ಕೈಲಾಸ ಎನ್ನುವುದೇ ಒಳ್ಳೆಯದು. ಆದರೆ ಬಸವಣ್ಣನನ್ನೇ ದೇವರು ಮಾಡಿಬಿಟ್ಟರಲ್ಲ, ಇನ್ನೇನು ಹೇಳುವುದು?

ಪ್ರ : ದರ್ಶನ, ಜಾತಕ, ಅಂಜನ...... ಇದರ ಹಿಂದಿನ ರಹಸ್ಯಗಳೇನಿರಬಹುದು?

*ಚಿತ್ರ ಮತ್ತು ಸಂದರ್ಶನ*

**ಶ್ರೀನಿವಾಸ ಜೋಕಟ್ಟೆ**

ಜೆ. ಕೆ. ನೆಟ್ಟರ್, ಬಿ. ಆರ್. ಮಲ್ಯ, ದಿನಕರ್, ಮೈಕಲ್ ಡಿ'ಸೋಜ, ಡಾ॥ ಮಾಧವರಾವ್ ಮುಂತಾದವರೆಲ್ಲ ಇದರಲ್ಲಿ ಪಾಲುಗೊಂಡವರು. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ ಸಹಕಾರ ನೀಡುತ್ತಿದೆ. ಭಾರತೀಯ ವಿಜ್ಞಾನ ಸಮಿತಿ, ಬಳಕೆದಾರರ ಶಿಕ್ಷಣ ಟ್ರಸ್ಟ್, ಎಸ್. ಎಫ್. ಐ., ಡಿ. ವೈ. ಎಫ್. ಐ., ಸಿ. ಪಿ. ಐ., ರೈತಸಂಘ, ಅನೇಕ ಮಹಿಳಾ ಸಂಘಗಳು, ಇವು ನಮ್ಮ ಕಾರ್ಯಕ್ರಮಗಳಿಗೆಲ್ಲ ಸಹಕಾರ ಇತ್ತಿವೆ.

ಪ್ರ : ಇತ್ತೀಚೆಗೆಲ್ಲ ಸ್ವಾಮಿ ವಿವೇಕಾನಂದರು ಬಂದು ಕಿವಿಯಲ್ಲಿ ಹೇಳುತ್ತಾರೆಂಬ ಸಂಸ್ಥೆಯೊಂದರ ಮುಖ್ಯಸ್ಥರೊಬ್ಬರು ಅಲ್ಲಲ್ಲಿ ಉಪನ್ಯಾಸ, ಕಾರ್ಯಕ್ರಮ ನೀಡುತ್ತಿರುವ ಬಗ್ಗೆ ಏನು ಹೇಳುವಿರಿ?

ನಾ : ಜನಗಳಲ್ಲಿರುವ 'ಕೊರತೆ'ಗಳನ್ನು ತುಂಬಲು ಹಲವು ರೀತಿಯ ವಿಧಾನಗಳನ್ನು ಕಾಣಬಹುದು. ಇಂಥವರೆಲ್ಲ ತಾವು ಆ ಕೊರತೆಯನ್ನು ತುಂಬುತ್ತೇವೆ ಎನ್ನುತ್ತಾರೆ. ಯಾವುದೇ ಅನುಭವ ಒಬ್ಬ ವ್ಯಕ್ತಿಗೆ ಆದಾಗ

ಅದು ವ್ಯಕ್ತಿಗತವಾದುದು. ಇದನ್ನು ಸಾರ್ವಜನಿಕರು ನಂಬುವಂತೆ ಬಲಾತ್ಕಾರ ಮಾಡುವುದನ್ನು ವಂಚನೆ ಅಥವಾ ಮೋಸ ಎನ್ನುವುದೇ ಸೂಕ್ತವೇನೋ.

**ಪ್ರ :** ಅಂದು ಗಣಪತಿ ಹಾಲು ಕುಡಿದ ಪ್ರಚಾರದ ಸಮಯ ಮಾಧ್ಯಮಗಳಲ್ಲಿ ವಿಸ್ಮಯವನ್ನು ವೈಭವಿಸಿದಾಗ ಅದರ ವಿರುದ್ಧ ಜನಜಾಗೃತಿ ಹುಟ್ಟಿಸಿದ್ದಿರಿ. ಅದಕ್ಕೆ ಬಂದ ಪ್ರತಿಕ್ರಿಯೆಗಳು ಹೇಗಿತ್ತು ?

**ನಾ :** ಗಣಪತಿ ಹಾಲು ಕುಡಿದದ್ದಕ್ಕೂ ಅಂದಿನ ನನ್ನ ಕೆಲಸಕ್ಕೂ ಸಂಬಂಧವೇ ಇರಲಿಲ್ಲ. ನಾನು ನನ್ನ ಪ್ರಯೋಗಾಲಯದಲ್ಲಿ ಹಾಲು ಹೀರುವ ನಿಜ ಸಂಗತಿಯನ್ನು ಸಾರ್ವಜನಿಕರ ಎದುರು ಪ್ರದರ್ಶಿಸಿದ್ದೆ. ಜನ ನನ್ನ ಕಾರ್ಯಕ್ರಮ ನೋಡಿ ಹೊರಟುಹೋದ ನಂತರ ನಾನೊಬ್ಬನೇ ಇದ್ದೆ. ಆಗ 'ಹಿಂದೂ ಜಾಗರಣ ವೇದಿಕೆ'ಯ ಕೆಲ ಜನ ಬಂದು ಗಲಾಟೆ ಮಾಡಿದ್ದರು. ಒಬ್ಬನಿದ್ದಾಗ ೫೦ ಜನ ಬಂದು ಆಕ್ರಮಣ ಮಾಡುವುದು ಶೌರ್ಯದ ಮಾತೇ? ''ವಿಕೃತ ವಿಚಾರವಾದಿಗಳಿಗೆ ಎಚ್ಚರಿಕೆ'' ಎಂಬ ಪೋಸ್ಟರ್ ಕೂಡಾ ಅವರು ಹಚ್ಚಿದ್ದರು. ಈ ಬಗ್ಗೆ ಮೂರು ಮಂದಿಗೆ ಶಿಕ್ಷೆಯೂ ಆನಂತರ ಆಯಿತು.

**ಪ್ರ :** ಪುನರ್ಜನ್ಮದ ಬಗ್ಗೆ ನಿಮ್ಮ ಖಚಿತ ನಿಲುವು ಏನು ?

**ನಾ :** ಖಚಿತ ನಿಲುವು ಅಂದರೆ ಪುನರ್ಜನ್ಮದಲ್ಲಿ ನಂಬಿಕೆ ಅರ್ಥವಿಲ್ಲದ್ದು ಎಂಬುದು. ನೋಡಿ, ಈ ತನಕ ಎಷ್ಟೋ ಕೋಟಿಗಟ್ಟಲೆ ಜನ ಸತ್ತಿದ್ದಾರೆ. ಪುನರ್ಜನ್ಮವನ್ನು ಆ ಆತ್ಮಗಳು ತಳೆದಿದ್ದರೆ ಇಂದು ಪ್ರಪಂಚದಲ್ಲಿ ನಿಲ್ಲಲು ಜಾಗ ಇರಬಹುದಿತ್ತೇ ?

**ಪ್ರ :** ಸಾಯಿಬಾಬಾಗೆ ನೀಡಿರುವ ಸವಾಲನ್ನು ಯಾರಾದರೂ ಸ್ವೀಕರಿಸಿದ್ದಾರೋ ?

**ನಾ :** ಕೆಲವು ಮಂದಿ ಈ ಸವಾಲನ್ನು ಸ್ವೀಕರಿಸಿದ್ದಿದೆ : ಕೇರಳದಿಂದ, ಕಾರ್ಕಳದಿಂದ, ಸಾಗರದಿಂದ. ಆನಂತರ ಒಬ್ಬೊಬ್ಬರೇ ತಪ್ಪಿಸಿಕೊಂಡರು.

**ಪ್ರ :** ಫಲಜ್ಯೋತಿಷ್ಯದ ಬಗ್ಗೆ ನಿಮ್ಮ ಸವಾಲನ್ನು ಯಾರಾದರೂ ಸ್ವೀಕರಿಸಿದ್ದಾರೋ ?

**ನಾ :** ಪ್ರತಿ ಚುನಾವಣೆ ಬಂದಾಗಲೂ ನಾನು ಸವಾಲು ಎಸೆಯುತ್ತೇನೆ. ಭಾರತದ ಎಲ್ಲಾ ಜ್ಯೋತಿಷಿಗಳಿಗೆ ೨೦ ಪ್ರಶ್ನೆ ಕೊಟ್ಟು ೧೮ ಪ್ರಶ್ನೆಗಳಿಗೆ ಸರಿಯುತ್ತರ ಬಂದರೂ ೧ ಲಕ್ಷ ಕೊಡ್ತೇನೆ ಅಂದಿದ್ದೇನೆ. ಈತನಕ ೨೦ರಲ್ಲಿ ೪ ಬಂದಿವೆ. ಅದೂ ಜ್ಯೋತಿಷಿಗಳಿಂದಲ್ಲ.

**ಪ್ರ :** ಕ್ರೈಸ್ತ ಮತಾಚಾರಿಗಳ 'ರೋಗ ಪರಿಹಾರ' ಕೂಟದ ಮೋಸವನ್ನು ಆ ದಿನಗಳಲ್ಲಿ ಬಯಲಿಗೆಳೆದಾಗ ನೀವು ವಿದ್ಯಾರ್ಥಿಯಾಗಿದ್ದಿರಿ. ಆಮೇಲೆ ಅದು ''ಶಾಂತಿ ಸುವಾರ್ತಾ ಕೂಟ''ವಾಗಿ ಮಾರ್ಪಟ್ಟಿತ್ತಲ್ಲ ? ಇದೆಲ್ಲ ನಿಮ್ಮ ಪ್ರಯತ್ನದ ಫಲ ಎನ್ನುತ್ತಾರಲ್ಲ ?

**ನಾ :** ಆಗ ನಾನು ವಿದ್ಯಾರ್ಥಿಯಾಗಿದ್ದೆ ಹೌದು. ನಾವು ಸವಾಲು ಹಾಕುತ್ತೇವೆ ಎಂದದ್ದರಿಂದಲೇ ನಂತರ ಪ್ರಾರ್ಥನಾ ಸಭೆ ಮಾಡುತ್ತಿದ್ದೇವೆ ಎಂದು ಹೇಳತೊಡಗಿದರು. ಹಾಗಾಗಿ ಆನಂತರ ಏನೂ ಮಾಡುವಂತಿರಲಿಲ್ಲ. ಆಗ ಕೆಲವು ಹಿಂದೂ ಸಂಘಟನೆಗಳು ಹಿಂದಿನಿಂದ ಕಲ್ಲು ತೂರಿ ನಮ್ಮನ್ನು ಮುಂದೆ ಮಾಡಲು ನೋಡಿದ್ದಿದೆ. ಅದಕ್ಕೆ ನಾವು ಆಸ್ಪದ ಕೊಡಲಿಲ್ಲ.

ಇನ್ನು ರಾಮಜನ್ಮಭೂಮಿ ವಿವಾದದ ತನಕ ನಾವು ಹಿಂದೂ ಪರ ಎಂದೇ ಕೆಲವರು ತಿಳಿದಿದ್ದರು. ಅರ್ಥಾತ್ ಹಿಂದೂ ನಾಸ್ತಿಕವಾದಿಗಳು ಅಂತ. ಆನಂತರ ಹಿಂದುತ್ವವಾದಿಗಳಿಗೆ ನಾವು ಏನು ಎನ್ನುವುದು ಸ್ಪಷ್ಟವಾಯಿತು. ನಮ್ಮನ್ನು ವಿರೋಧಿಸಲು ಶುರು ಮಾಡಿದರು.

**ಪ್ರ :** ನಮ್ಮ ಜಿಲ್ಲೆಯಲ್ಲಿ ಮತೀಯವಾದಿಗಳು ಹೆಚ್ಚಲು ನಿಮ್ಮ ಪ್ರಕಾರ ಕಾರಣಗಳು ಯಾವುವು ?

**ನಾ :** ಇಲ್ಲಿ ಪರಿಣಾಮಕಾರಿ ಧರ್ಮನಿರಪೇಕ್ಷ ನಾಯಕತ್ವದ ಕೊರತೆ ಇತ್ತು. ಸಮಾಜವಾದಿಗಳು ಕಮ್ಯುನಿಸ್ಟರು ಹಿಂದೆ ಬಲವಾಗಿದ್ದರು. ಅವರಿಗೆ ಹಕ್ಕುಗಳು, ಶಿಕ್ಷಣ ಸೌಲಭ್ಯ ಸಿಕ್ಕ ನಂತರ ಈಗ ಅವರಲ್ಲಿ ಹೆಚ್ಚಿನವರ ಮಕ್ಕಳು ಬಿ.ಜೆ.ಪಿ...... ಮತ್ತಿತ್ತರರ ಜೊತೆ ಸೇರಿಕೊಂಡರು.



*ಕಾರ್ಯಕ್ರಮ ನೀಡುತ್ತಿರುವ ಡಾ|| ನರೇಂದ್ರ ನಾಯಕ್*

**ಪ್ರ :** ಇಷ್ಟು ಭಾರೀ ಸಂಖ್ಯೆಯಲ್ಲಿ ಕಾರ್ಯಕ್ರಮ ನೀಡಿದ್ದೀರಿ. ಈ ಬಗ್ಗೆ ಏನೆಲ್ಲ ಹೊಸ ಅನುಭವ ಗಳಿಸಿದಿರಿ ?

**ನಾ :** ನಾನು ಜನರಿಗೆ ಕಲಿಸಿದ್ದಕ್ಕಿಂತ ಅವರಿಂದಲೇ ಕಲಿತದ್ದು ಹೆಚ್ಚು. ಹೋದಲ್ಲೆಲ್ಲ ಜನರು ಅವರ ಅನುಭವಗಳನ್ನು ಹೇಳುತ್ತಿದ್ದರು. ಅದನ್ನೆಲ್ಲ ಗಮನಿಸಿ ನಾವು ಚರ್ಚಿಸಿದ್ದೇವೆ. ಮುಖ್ಯವಾಗಿ, ವಿಚಾರವಾದದ ಬೀಜ ಬಿತ್ತಲು ನಾವು ಈ ಕಾರ್ಯಕ್ರಮ ನೀಡುತ್ತಾ ಬಂದಿರುವೆವು. ಜನರಿಗೆ ವಿಚಾರವಾದ ತಲುಪಿಸುವ ಸರಳ ಸ್ಪಷ್ಟವಾದ ವಿಧಾನ ಇದೆಂದು ನಾನು ಭಾವಿಸುತ್ತೇನೆ.

**ಪ್ರ :** ಪತ್ರಿಕೆಗಳಲ್ಲೂ ಆಗಾಗ ಖಾರವಾದ ಪ್ರತಿಕ್ರಿಯೆಗಳನ್ನು ಬರೆಯುತ್ತಲೇ ಇದ್ದೀರಿ. ಎಂದಾದರೂ ಕಹಿ ಅನುಭವ ಬಂದದ್ದಿದೆಯೋ ?

**ನಾ :** ಬೆದರಿಕೆಯ ಪತ್ರಗಳು ಇಷ್ಟು ದೊಡ್ಡ ರಾಶಿಯಲ್ಲಿದೆ. ಒಮ್ಮೆ ಸ್ಕೂಟರ್‌ನ ಬ್ರೇಕ್ ಕೇಬಲ್ ಕತ್ತರಿಸಿದ್ದೂ ಇದೆ. ನಾವೆಲ್ಲ ಜೀವದ ಆಸೆ ಬಿಟ್ಟೇ ಇದನ್ನೆಲ್ಲ ಮಾಡೋದು.

**ಪ್ರ :** ಕೆಲವೇ ದಿನಗಳ ಹಿಂದೆ 'ಸಂದೇಶ' ಪ್ರಶಸ್ತಿ ಸ್ವೀಕರಿಸಿದ್ದೀರಿ. ಯಾವ ಅರ್ಥದಲ್ಲಿ ಇದಕ್ಕೆ ಒಪ್ಪಿದಿರಿ ?

**ನಾ :** ಈ ಪ್ರಶಸ್ತಿಯ ಪತ್ರ ಬಂದಾಗ ಬಿಷಪರ ಬಳಿ ಕೇಳಿದ್ದೆ : ''ಯಾಕೆ ಆಯ್ಕೆ ಮಾಡಿದಿರಿ? ನಾನು ನಿಮ್ಮಂತಹವರನ್ನು ಟೀಕಿಸಿದ್ದಿದೆಯಲ್ಲಾ ?'' ಅದಕ್ಕೆ ಅವರು, ''ನೀವು ಹೇಳಿದ ಎಲ್ಲಾ ವಿಷಯ ನಾವು ಒಪ್ಪುವುದಿಲ್ಲ. ಆದರೆ ಪ್ರಾಮಾಣಿಕವಾಗಿ ಜನರಲ್ಲಿ ವೈಜ್ಞಾನಿಕ ಮನೋಭಾವ ಹುಟ್ಟಿಸುತ್ತಾ ಬಂದಿದ್ದೀರಿ. ಅದು ಮುಂದುವರಿಯುತ್ತಿರಲಿ,'' ಎಂಬ ಉತ್ತರ ನೀಡಿದ್ದರು.

ನಾನು ಯಾವ ರೀತಿಯಲ್ಲಿ ಕೋಮುವಾದ - ಜಾತಿವಾದ - ಮೂಢನಂಬಿಕೆಗಳ ವಿರುದ್ಧ ಹೋರಾಡುತ್ತಾ ಬಂದಿದ್ದೇನೋ ಆ ಬಗ್ಗೆ ರಾಜಿ ಇಲ್ಲ. ನಾನು ಬರೇ ಹಿಂದೂ ಕ್ರಿಶ್ಚಿಯನ್‌ರಲ್ಲಿರುವ ಮೂಢನಂಬಿಕೆ ಮಾತ್ರ ವಲ್ಲ, ಮುಸ್ಲಿಂ ಜನರಲ್ಲಿರುವ ಮೂಢನಂಬಿಕೆಗಳನ್ನೂ ಟೀಕಿಸುತ್ತೇನೆ. ಸಲ್ಮಾನ್ ರಶ್ದಿ, ತಸ್ಲೀಮ ನಸ್ರೀನ್ ಪರವಾಗಿ ನಾನು ಮಾತಾಡಿದವ. ಮಂಗಳೂರು ಬಳಿಯ ಬಂದರಿನಲ್ಲಿ ಮಸೀದಿಗೆ ೫೦ ಸೆಂಟ್ಸ್ ಜಾಗ ದಾನ ಮಾಡಿದಾಗ ವಿರೋಧಿಸಿದವರಲ್ಲಿ ನಾನೂ ಇದ್ದೆ. ಈಗ ಆ ಪ್ರಸ್ತಾಪವನ್ನು ನಗರಪಾಲಿಕೆ ರದ್ದು ಮಾಡಿದೆ. ಕ್ರೈಸ್ತರ ಮತಾಂತರವನ್ನೂ ನಾನು ವಿರೋಧಿಸಿದವ. ಆದರೆ ಕ್ರೈಸ್ತರಲ್ಲಿ, ಮುಸ್ಲಿಂರಲ್ಲಿ ಇರುವುದಕ್ಕಿಂತ ಹೆಚ್ಚು ಮೂಢ ನಂಬಿಕೆಗಳು ಹಿಂದೂಗಳಲ್ಲಿವೆ. ನನ್ನ ಪ್ರಕಾರ ಎಲ್ಲಾ ರೀತಿಯ ಮೂಲಭೂತವಾದವೂ ಖಂಡನಾರ್ಹ ವಾದುದು - ಅದು ಯಾವುದೇ ಜಾತಿ ಧರ್ಮಗಳಲ್ಲಿ ನುಸುಳಿದ್ದರೂ ಸಹ.

ಶ್ರೀನಿವಾಸ ಜೋಕಟ್ಟೆ
ಅಂಚೆ ಜೋಕಟ್ಟೆ, ದಕ್ಷಿಣಕನ್ನಡ - ೫೭೪ ೧೭೩

# ಕಾಡು ಮತ್ತು ತೋಪು

*ಲೇ : ವಿ. ಚಂದ್ರಶೇಖರ ನಂಗಲಿ*

*ಪುಟಗಳು : ೧೮೪ ಬೆಲೆ : ೬೦*

**ಲೋಹಿಯಾ ಪ್ರಕಾಶನ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩**

*ಶ್ರೀ ನಂಗಲಿಯವರ ''ಕಾಡು ಮತ್ತು ತೋಪು'' ಕೃತಿಯನ್ನು ಓದಿ ಶ್ರೀ ವ್ಯಾಸರಾಯ ಬಲ್ಲಾಳರು ಲೇಖಕರಿಗೆ ಒಂದು ಮೆಚ್ಚುಗೆಯ ಪತ್ರ ಬರೆದು ಪುಸ್ತಕದ ಬಗೆಗಿನ ಅವರ ಅನಿಸಿಕೆಗಳನ್ನು ದಾಖಲಿಸಿದ್ದಾರೆ. ಆ ಪತ್ರದ ಆಯ್ದ ಭಾಗಗಳನ್ನು ಇಲ್ಲಿ ಕೊಡಲಾಗಿದೆ.*

ನಾನು ನನ್ನ ಆಯುಷ್ಯದ ಮುಖ್ಯಭಾಗವನ್ನು, ಎಂದರೆ ಅರ್ಧ ಶತಮಾನದಷ್ಟು, ಒಂದು ಕಾಂಕ್ರೀಟ್ ಕಾಡಿನಲ್ಲಿ ಕಳೆದವನು. ಇಂದು ದಿಲ್ಲಿಯಂತೆಯೇ ಮುಂಬಯಿ ಕೂಡ ಕಲುಷಿತ ವಾತಾವರಣದ ಹಿರಿಯ ಮಹಾ ನಗರ. ಪ್ರತಿದಿನ ಹೆಚ್ಚು ಕಡಿಮೆ ಮುನ್ನೂರು ಕುಟುಂಬಗಳು ಆಧುನಿಕ ಮುಂಬಯಿಯ ಆಶ್ರಯ ಪಡೆಯಲು ಬರುತ್ತಲೇ ಇವೆ. ಹಳ್ಳಿಗಾಡಿನ ಪ್ರಾಕೃತಿಕ ಸಂಪರ್ಕ, ಸಂಸ್ಕಾರಗಳನ್ನು ಕಡಿದುಕೊಂಡು, ಮುಂಬಯಿಯ ವಿಷಗಾಳಿಯಲ್ಲೂ ಆಧುನಿಕ ಬದುಕಿನ ದಾರಿ ಹಾಗೂ ಸೆಳೆತ ಇವೆಯೆಂದು ಬರುತ್ತಿವೆ. ಈ ಆಧುನಿಕತೆಯ ಉಸಿರಾಟದಲ್ಲಿ ಹಳ್ಳಿ ಪಟ್ಟಣಗಳ ನಡುವಿನ ಕಂದರ ಹೇಗೆ ಹೆಚ್ಚುತ್ತಲೇ ಇದೆ, ಇದರ ಪರಿಣಾಮಗಳೇನು ಎಂದು ಯಾರೂ ಯೋಚಿಸುವುದಿಲ್ಲ. ನೀವು ನಿಮ್ಮ ಕೃತಿಯಲ್ಲಿ ಹಿಡಿದಿಟ್ಟ ವಿಚಾರಗಳು ನಾಡಿನ ಬಗ್ಗೆ ಯೋಚಿಸುವವರ ಆಳವಾದ ಚಿಂತನೆಗೆ ಗ್ರಾಸವಾಗಬೇಕು. ನಿಮ್ಮ ಕೃತಿಯನ್ನು ಓದಿ ನಾನು ಅನುಭವಿಸಿದ ಸಂತೋಷದ ಜೊತೆಗೆ ನನಗೆ ನೋವು ತರುತ್ತಿರುವುದು ನಮ್ಮ ಇಂದಿನ ಸಾಮಾಜಿಕ ಸಂದರ್ಭ ಒಳ್ಳೆಯ ವಿಚಾರಗಳನ್ನು ಸ್ವೀಕರಿಸಿ ಅನುಷ್ಠಾನಕ್ಕೆ ತರುವ ಸಾಮರ್ಥ್ಯವುಳ್ಳ ಆಡಳಿತೆಯನ್ನು ಉಂಟುಮಾಡುವ ದೂರದೃಷ್ಟಿಯ ನಾಯಕತ್ವದ ಸೃಷ್ಟಿಗೆ ಕಾರಣವಾಗಬಹುದೇ ಎಂದು.




ಮಹಾತ್ಮಾ ಗಾಂಧಿಯವರ ಹಸಿರು ಕಾಳಜಿಯನ್ನು, ಗ್ರಾಮ ಸ್ವರಾಜ್ಯದ ಕನಸನ್ನು ನೀವು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೀರಿ. ಅಣು ಸಂಸ್ಕೃತಿಯ ಅಪಾಯಗಳ ಬಗ್ಗೆ ಎಚ್ಚರಿಕೆಯ ಮಾತುಗಳನ್ನು ಬರೆದಿದ್ದೀರಿ. ಕಾರಂತರು ಮುಂಬಯಿಗೆ ಬಂದಾಗಲೆಲ್ಲ ನಾನು ಅವರೊಡನೆ ಕೈಗಾ, ಹರಿಹರ ಪಾಲಿಫೈಬರ್ಸ್ ವಿರುದ್ಧ ಅವರ ಹೋರಾಟ ಎಲ್ಲಿಯತನಕ ಬಂದಿದೆಯೆಂದು ಕೇಳುತ್ತಿದ್ದೆ. ವರ್ಷಗಳೇ ಕಳೆದ ಮೇಲೆ ಈಗ ಏನಾಗುತ್ತಿದೆ? ಕೈಗಾ ತಲೆಯೆತ್ತಿದೆ! ಹರಿಹರದ ಕಾರ್ಖಾನೆ ವಿಷಕಾರುವ ಸ್ಥಿತಿ. ಈಗ ಯಾವ ಮಟ್ಟದಲ್ಲಿದೆಯೆಂದು ನನಗೆ ತಿಳಿದಿಲ್ಲ! ಒಂದು ದೊಡ್ಡ ಗಂಡಾಂತರ ಸಂಭವಿಸಿದಾಗ ಎಚ್ಚೆತ್ತುಕೊಳ್ಳುವ ಯೋಚನೆ ಆರಂಭಿಸಬಹುದು.

ನಿಸರ್ಗ ಪ್ರೀತಿಯನ್ನು, ನಿಸರ್ಗದ ಸಂಪರ್ಕವನ್ನು ಕಡಿದುಕೊಳ್ಳುತ್ತಲೇ ಇರುವ ನಾವು, ನಿಸರ್ಗ ನಮ್ಮ ಉಪಭೋಗಕ್ಕೆ ಮಾತ್ರ ಇದೆಯೆಂದು ತಿಳಿದಿರುವ ನಾವು, ಆಧುನಿಕವೆನಿಸುವ ಸಮುದಾಯ ಜೀವನದ ಹುಚ್ಚಿನಿಂದ ನಮ್ಮ ನೈತಿಕ ಪ್ರಜ್ಞೆಯೂ ಮಲಿನವಾಗುತ್ತಿದೆಯೆಂದು ತಿಳಿಯುತ್ತಿಲ್ಲ, ಅಲ್ಲವೆ! ಇತರರೂ ನಮ್ಮಂತೆಯೇ ಬದುಕುವ ಹಕ್ಕುಳ್ಳವರು ಎಂಬ ತಿಳುವಳಿಕೆಯನ್ನು ಮರೆಯುತ್ತಿರುವ ನಾವು ಈ ವಿಶ್ವದಲ್ಲಿರುವ ಎಲ್ಲ ಜೀವಿಗಳಿಗೂ ಬದುಕುವ ಹಕ್ಕು ನಮ್ಮಂತೆಯೇ ಇದೆಯೆಂಬುದನ್ನು ಮರೆಯುತ್ತೇವೆ. ನಾನು ಅಮೆರಿಕಾದಲ್ಲಿದ್ದಾಗ ಹಿರೋಶಿಮಾ ದಿನಾಚರಣೆಯ ಸಂದರ್ಭದಲ್ಲಿ ಸ್ಥಳೀಯ ದೈನಿಕ ಒಂದರಲ್ಲಿ ಒಂದು ಪತ್ರ ನೋಡಿದ್ದೆ. 'ಹಿರೋಶಿಮಾದ ಮೇಲೆ ಹಾಕಿದ ಅಣುಬಾಂಬು, ಹೆಚ್ಚಿನ ಅಮೆರಿಕಾದ ಜೀವಗಳನ್ನು ಉಳಿಸಲು ಅಗತ್ಯವಾಗಿತ್ತು' ಎಂದು.

ಇತರರ ಕುರಿತ ಕಾಳಜಿಗಳೂ ನಮ್ಮ ಕಾಳಜಿಗಳೆಂದು ತಿಳಿಯದ ನೈತಿಕತೆ, ನೈತಿಕತೆಯಲ್ಲ ಎಂದು ಹಿರಿಯ ಚಿಂತಕರು, ದಾರ್ಶನಿಕರು ಹೇಳಿರುವರಾದರೂ ಇಂದು ಸ್ವಾರ್ಥದ ಪರಿಧಿಯನ್ನು ದಾಟದ ನೈತಿಕತೆಯೇ ಗ್ರಾಹ್ಯವೆನಿಸಿದೆಯಾದ ಕಾರಣ, ನಮ್ಮ ಮನೆಯ ಕಸವನ್ನು ಇತರರ ಬಾಗಿಲಿಗೆ ದಾಟಿಸುವುದೂ ಆಧುನಿಕತೆಯೆನಿಸಿದೆ. ಮುಂಬಯಿಯಂಥ ಮಹಾನಗರಗಳಲ್ಲಿ, ಗಗನ ಚುಂಬಿ ಕಟ್ಟಡಗಳಲ್ಲಿ ತಮ್ಮದು ಐಷಾರಾಮ ಆಧುನಿಕ ಜೀವನವೆಂದು ತಿಳಿದುಕೊಳ್ಳುವ ಮಧ್ಯಮ ವರ್ಗದ ಜನ, ಕೆಳಗೆ ಪಕ್ಕದಲ್ಲೇ ಕಾಣುವ ಕೊಳಚೆ ಕೊಂಪೆಗಳಲ್ಲಿರುವ ಜನರನ್ನು 'ಇವರೇಕೆ ಇಲ್ಲಿ?' ಎಂದು ತಿರಸ್ಕಾರದಿಂದ ಕಾಣುವ, ಮಗುವಿನ ಹೇಸಿಕೆಯೊಂದಿಗೆ ಹಳಸಿದ ಬ್ರೆಡ್ಡನ್ನು ತಿಪ್ಪೇಗುಂಡಿಗೆಸೆಯುವ ಜನ, ಇದು ಅನ್ನ ಹುಡುಕುವ ಬಡಪಾಯಿಗಳಿಗೆ ಆಹಾರವಾಗಬಹುದೆಂಬ ಶಂಕೆಯನ್ನು ತಂದುಕೊಳ್ಳುವುದಿಲ್ಲ. ಇಂದು ನೀವು ಸೂಚಿಸಿರುವಂತೆ ಪೊರಕೆ ಕಡ್ಡಿಯ ರೂಪದ ಅನನ್ಯತೆ, ಜಾತಿ, ಗುಂಪುಗಳಿಗಷ್ಟೇ ಸೀಮಿತವಾಗದೆ, ಆಧುನಿಕ ಜೀವನಕ್ರಮದ ಬೆನ್ನಟ್ಟಿಹೋಗುವ ಪ್ರತಿಯೊಂದು 'ನ್ಯೂಕ್ಲಿಯರ್' ಕುಟುಂಬಕ್ಕೂ ಬರುತ್ತಿರುವಾಗ, ಸಮುದಾಯದ ಒಳಿತಿನ ಕುರಿತ ಪರಿಕಲ್ಪನೆಗಳು ನಾವು ಅನುಸರಿಸಬಯಸುವ ಆಧುನಿಕತೆಗೆ ಹೊಂದಿಕೊಳ್ಳುವಂತೆ ತೋರುತ್ತಿಲ್ಲ. ಸ್ವಾರ್ಥ, ಸಂಗ್ರಹ ಪ್ರವೃತ್ತಿಗಳೇ ನೈತಿಕತೆಯ ಮಾನದಂಡಗಳಾಗುತ್ತಿವೆ. ಹೀಗಿರುವಾಗ ಆಧುನಿಕವೆಂದು ತಿಳಿಯಲಾಗುವ ನಗರ ಜೀವನ, ಗ್ರಾಮೀಣ ಪರಿಸರದ ಬಡತನ, ಇವುಗಳ ನಡುವಿನ ಕಂದರ ಹೆಚ್ಚುತ್ತಲೇ ಹಳ್ಳಿಗಳಲ್ಲಿನ ಬದುಕು ಬದುಕೇ ಅಲ್ಲವೇನೋ ಎಂಬ ಭಾವನೆ ಹಳ್ಳಿಗಳಲ್ಲೂ ಹೆಚ್ಚುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ.

ಅರಣ್ಯ ನಾಶದ ಬಗೆಗೆ ನೀವು ಎಷ್ಟು ಚೆನ್ನಾಗಿ ವಿವರಿಸಿದ್ದೀರಿ. ಗಣಿಗಾರಿಕೆಯಿಂದಾಗುವ ಅನಾಹುತದ ಬಗೆಗೂ ತಿಳುವಳಿಕೆ ನೀಡಿದ್ದೀರಿ. ಅರಣ್ಯಾಧಿಕಾರಿಗಳೂ, ರಾಜಕೀಯ ನಾಯಕರೂ, ಅರಣ್ಯ ನಾಶದಲ್ಲಿ ಶಾಮೀಲಾಗಿರುವ ಪ್ರಸಂಗಗಳನ್ನು ಪತ್ರಿಕೆಗಳಲ್ಲಿ ಓದುವಾಗ, ಸಂಸ್ಕೃತಿ ಮಾಲಿನ್ಯಕ್ಕೆ ಕಾರಣವಾಗುವುದು ಆಧುನಿಕತೆಯಷ್ಟೇ ಅಲ್ಲ, ಇದರ ಪರಿಣಾಮ ಸ್ವರೂಪದ, ಹೆಚ್ಚುತ್ತಲೇ ಇರುವ ವ್ಯಕ್ತಿಯ ಸ್ವಾರ್ಥ ಎಂದೂ ತೋರುತ್ತದೆ.

ನಾನು ತುಂಬಾ ಮೆಚ್ಚಿಕೊಂಡಿರುವುದು ನಮ್ಮ ಶಿಕ್ಷಣ ನೀತಿಯಲ್ಲಿ ನೀವು ಆಗಬೇಕೆಂದು ಸೂಚಿಸಿರುವ ಬದಲಾವಣೆಗಳನ್ನು, ಕಾಲೇಜು ಶಿಕ್ಷಣ ಮತ್ತು ಉನ್ನತ ಶಿಕ್ಷಣದಲ್ಲಿ ಕೃಷಿ ಆಧಾರಿತ ವಿಷಯಗಳನ್ನೇ ಹೊಸ ಕೋರ್ಸುಗಳನ್ನಾಗಿ ಆರಂಭಿಸಬೇಕು ಎಂದು ಒಳ್ಳೆಯ ಸೂಚನೆಗಳನ್ನು ಮಂಡಿಸಿದ್ದೀರಿ. ನಮ್ಮ ಶಿಕ್ಷಣ ವ್ಯವಸ್ಥೆ ಆಮೂಲಾಗ್ರವಾಗಿ ಬದಲಾಗಬೇಕೆಂದು ಎಲ್ಲ ಹೇಳುತ್ತಿರುವರಾದರೂ, ಹೇಗೆ, ಯಾವಾಗ, ಎಲ್ಲಿ ಎನ್ನುವುದರ ವಿಚಾರ ಸ್ಪಷ್ಟ ಚಿಂತನೆಯಿಲ್ಲ. ರೈತರಿಗೆ, ಕೃಷಿಯಿಂದಲೇ ಜೀವನ ಸಾಗಿಸುವವರಿಗೆ, ಬಿಡುವಿನ ವೇಳೆಯಲ್ಲಿ ಅನೌಪಚಾರಿಕ ಶಿಕ್ಷಣ ವ್ಯವಸ್ಥೆಯ ಮೂಲಕ, ನಗರಗಳಲ್ಲಿ ದೊರಕುವ ಬಿ. ಎ. ಮಟ್ಟದ ಪದವಿಯನ್ನು ಕೊಡಬಹುದಾದ ವ್ಯವಸ್ಥೆಯಿಂದ, ಹಳ್ಳಿಗರಲ್ಲಿ ತುಂಬಿರುವ ಕೀಳರಿಮೆಯೂ ಹೋಗಬಹುದು ಎಂದು ನನಗನಿಸಿದೆ. ಆದರೆ ಇಂದಿನ ನಮ್ಮ ಲೋಕಸತ್ತೆಯ ಆಡಳಿತೆಗೆ ಇಂತಹ ಕ್ರಾಂತಿಕಾರಿ ಬದಲಾವಣೆಗಳನ್ನು ತರುವ ಸಂಕಲ್ಪ ಶಕ್ತಿ ಹೇಗೆ ಬಂದೀತು? ಈಗಂತೂ, ಉದಾರೀಕರಣ, ಜಾಗತೀಕರಣದ ನೆಪದಲ್ಲಿ ಇಂಗ್ಲಿಷೇ ಬೇಕೆಂದು ಮೆಕಾಲೆಯ ಮಾನಸ ಪುತ್ರರಾಗ ಬಯಸುವವರು ನಾವು! ಸೈಬರ್ ಸಂಸ್ಕೃತಿಯ ಬಗ್ಗೆ ನೀವು ಬರೆದಿರುವ ವಿಚಾರಗಳು ನಮಗೆ ಎಚ್ಚರಿಕೆಯ ಗಂಟೆಯಾಗಬೇಕು. ಗ್ರಾಹಕ ಸಂಸ್ಕೃತಿಯೊಂದು ವರವೆಂದು ಭಾವಿಸುತ್ತಿರುವ ನಮ್ಮ ಮಧ್ಯಮ ವರ್ಗ, ನಿಸರ್ಗದಿಂದ ನಾವು ದೂರ ಹೋಗುತ್ತಿರುವಂತೆಯೇ ನಮ್ಮ ಗ್ರಾಮೀಣ ಸಂಸ್ಕಾರಗಳನ್ನೆಲ್ಲ ತ್ಯಜಿಸಿ, ಮುಂದೆ ಏನಾಗಬಹುದೆಂದು ಚಿಂತಿಸುತ್ತಲೇ ಇಲ್ಲವಲ್ಲ ಎಂದು ಬೇಸರವಾಗುತ್ತಿದೆ.

ನಿಮ್ಮ 'ಬೆಳಕಿನ ಸಿರಿ ಅಗ್ಗಿಜರಿ' ಲೇಖನ ವಿಜ್ಞಾನವನ್ನು ಕಲಿಸುವ ಮಾದರಿ ಲೇಖನದಂತಿದೆ. ದೊಡ್ಡ ಹೆಬ್ಬೆ ಜಲಪಾತದ ಕುರಿತು ಲೇಖನವೂ ಅದೇ ಮಾದರಿಯದು. ನಿಮ್ಮ ಕೃತಿ ಪಠ್ಯವಾಗಬೇಕೆಂದು ನನ್ನ ಆಸೆ. ನಿಮ್ಮ ಕೃತಿಯನ್ನು ಓದಿ, ನೀವು ಸೂಚಿಸಿರುವ ವಿಚಾರಗಳನ್ನು ಆಚರಣೆಯಲ್ಲಿ ತರುವ ಬಗೆ ಹೇಗೆ, ಸಾರ್ವಜನಿಕ ನೆಲೆಯಲ್ಲಿ, ಆಧುನಿಕತೆಯ ಹೆಸರಿನಲ್ಲಿ ಈಗ ಆಗುತ್ತಿರುವ ಅನಾಹುತವನ್ನು ತಡೆಯುವ, ಪ್ರತಿಭಟಿಸುವ ಬಗೆ ಹೇಗೆಂದು ವಿಚಾರವಾದಿಗಳೆಲ್ಲಾ ಚಿಂತಿಸಬೇಕಾಗಿದೆ.

**- ವ್ಯಾಸರಾಯ ಬಲ್ಲಾಳ**

## ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆ




*ಲೀಲಾವತಿ ಎಸ್. ರಾವ್*

**ಪುಟ : 112** **ಬೆಲೆ : ರೂ. 50**

**ಸಂವಹನ**, 12/1, 1550, ಈರ್ವಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು - 570 001

*ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆಯ ಸ್ಥಾನ-ಮಾನ ಅರಿಯಲು ಈ ಪುಸ್ತಕ ಸಹಕಾರಿ. ಪ್ರಭುತ್ವ ಮತ್ತು ಧರ್ಮದ ನೆರಳಲ್ಲಿ ಮೂಡಿಬಂದ ಮಹಿಳಾ ಪಾತ್ರಗಳ ಸ್ವರೂಪ, ಮುಂದೆ ಸಾಹಿತ್ಯ ಸೃಷ್ಟಿಯಲ್ಲಿ ಮಹಿಳೆ ತೊಡಗಿದಾಗ ಬದಲಾದ ಆಕೆಯ ಚಿತ್ರಣವನ್ನು ಸ್ಪಷ್ಟವಾಗಿ ಲೇಖಕಿ ಗುರುತಿಸಿದ್ದಾರೆ. ಹಿಂದಿನ ಸಾಹಿತ್ಯದ ಸ್ತ್ರೀಪಾತ್ರಗಳ ಮನಸ್ಸುಗಳನ್ನು ಅರಿಯಲು ಸಾಹಿತ್ಯದ ಸಾಲುಗಳನ್ನು ಉದಾಹರಣೆಗಳ ಸಹಿತ ನಿರೂಪಿಸಿದ್ದಾರೆ.*

## ಪ್ರಬಂಧ - ೧೯೯೮




*ಸಂಪಾದಕ : ಶ್ರೀಕಾಂತ ಪಾಟೀಲ*

**ಪುಟ : 200** **ಬೆಲೆ : ರೂ. 40**

**ಕರ್ನಾಟಕ ಸಾಹಿತ್ಯ ಅಕಾಡೆಮಿ**, ಜೆ.ಸಿ. ರಸ್ತೆ ಬೆಂಗಳೂರು- 560 002

*೧೯೯೮ರ ಒಂದು ವರ್ಷದ ಅವಧಿಯಲ್ಲಿ ಪ್ರಕಟವಾಗಿ ಗಮನ ಸೆಳೆದ ೨೯ ಅತ್ಯುತ್ತಮ ಪ್ರಬಂಧಗಳನ್ನು ಆಯ್ಕೆ ಮಾಡಿ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಹೆಸರಾಂತ ಲೇಖಕರ ಇಲ್ಲಿನ ಪ್ರಬಂಧಗಳು ವಿಷಯ ವೈವಿಧ್ಯತೆಯಿಂದ ಕೂಡಿದ್ದು, ನವಿರಾದ ಹಾಸ್ಯದಲ್ಲಿ ತೇಲಿಸುತ್ತಾ ಓದುಗನನ್ನು ಖುಷಿಪಡಿಸುತ್ತವೆ. ಪ್ರತಿಯೊಂದು ಲೇಖನವೂ ಈ ಹಿಂದೆ ಎಲ್ಲಿ ಪ್ರಕಟವಾಗಿತ್ತೆಂಬ ವಿವರವೂ ಇದೆ.*

## ಚಿಂತನ ಚಿಲುಮೆ




*ಮುಕ್ಕಣ್ಣ ಕರಿಗಾರ*

**ಪುಟ : 56** **ಬೆಲೆ : ರೂ. 50**

**ಬೂದಿ ಬಸವ ಪ್ರಕಾಶನ**, ಗಬ್ಬೂರು, ದೇವದುರ್ಗ ತಾ|| ರಾಯಚೂರು ಜಿಲ್ಲೆ - 584 113

*ಸುಲಲಿತವಾಗಿ ಓದಬಹುದಾದ, ಆಚರಣೆಗೆ ಯೋಗ್ಯವಾದ, ವ್ಯಕ್ತಿತ್ವ ವಿಕಾಸಕ್ಕೆ ಸಹಾಯವಾಗುವ ಇಪ್ಪತ್ತೈದು ವಿಚಾರಪೂರ್ಣ ಬರಹಗಳು ಈ ಸಂಕಲನದಲ್ಲಿವೆ. ಇಲ್ಲಿನ ಸರಳ-ಆಕರ್ಷಕ ವಿವೇಕದ ಅಂಶಗಳನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡಾಗ ನೋವು ನಿರಾಶೆಯ ಅಂಚಿನಲ್ಲಿರುವವರೂ ಸಹ ಆಶಾದಾಯಕ ಫಲಿತಾಂಶ ಪಡೆಯಬಹುದು. ಹಿರಿಯರ, ದಾರ್ಶನಿಕರ ಅನೇಕ ನುಡಿಮುತ್ತುಗಳನ್ನು ಬಳಸಿಕೊಂಡಿದ್ದಾರೆ.*

## ನೊಬೆಲ್ ಪ್ರಶಸ್ತಿ ವಿಜೇತ ಮಹಿಳಾ ವಿಜ್ಞಾನಿಗಳು



*ನೇಮಿಚಂದ್ರ*

**ಪುಟ : 126** **ಬೆಲೆ : ರೂ. 28**

**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ**, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು-560 002

*ತಮ್ಮ ಜೀವನವನ್ನು ಗಂಧದಂತೆ ತೇಯ್ದರೂ ಪ್ರಪಂಚಕ್ಕೆಲ್ಲ ಪರಿಮಳವನ್ನು ನೀಡಿದ ಹತ್ತುಮಂದಿ ನೊಬೆಲ್ ಪಾರಿತೋಷಕ ಗಳಿಸಿದ ಮಹಿಳಾ ವಿಜ್ಞಾನಿಗಳ ಜೀವನ-ಸಾಧನೆಯನ್ನು ಪರಿಚಯಿಸಲಾಗಿದೆ. ಆತ್ಮವಿಶ್ವಾಸ, ಪ್ರತಿಭೆಗಳಿಂದಲೇ ಕೀರ್ತಿಯ ಶಿಖರವನ್ನೇರಿದ ಇವರು ತಂತಮ್ಮ ಕ್ಷೇತ್ರಗಳಲ್ಲಿ ಅತ್ಯುತ್ಕೃಷ್ಟ ಸಾಧನೆಗಾಗಿ ಕ್ರಮಿಸಿದ ಹಾದಿ ಅದೆಷ್ಟು ದುರ್ಗಮವಾಗಿತ್ತೆಂಬುದನ್ನು ಇಲ್ಲಿ ಗ್ರಹಿಸಬಹುದು.*

## ಬಸವ ಚಳುವಳಿಯ ಭೌತಿಕವಾದಿ ಅಧ್ಯಯನ



*ಪಿ. ಎಸ್. ಪಾಟೀಲ*

**ಪುಟ : 96** **ಬೆಲೆ : ರೂ. 25**

**ದಿ. ಬಂಥನಾಳ ಶ್ರೀ ವೃಷಭ ಲಿಂಗೇಶ್ವರ ವಿದ್ಯಾವರ್ಧಕ ಟ್ರಸ್ಟ್** 'ಗುರುಕುಲ', ಗುರುಕುಲ ರಸ್ತೆ, ವಿಜಾಪುರ

*ಬಸವಾದಿ ಶರಣರ ಕ್ರಾಂತಿಕಾರೀ ಮನೋಭಾವವನ್ನು, ಅವರ ಮತದ ತತ್ತ್ವಾದರ್ಶಗಳನ್ನು ಮಾರ್ಕ್ಸ್‌ವಾದೀ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡಿದ್ದಾರೆ. ಕ್ರಾಂತಿಕಾರಿಗಳು ಯಾವ ಕಾಲದಲ್ಲಿ ಎಲ್ಲೇ ಇದ್ದರೂ ಅವರ ವಿಚಾರ ಸರಣಿಗಳಲ್ಲಿ ಹೋಲಿಕೆಯಿರುತ್ತದೆ. ಸಮಾಜವನ್ನು ಮೌಢ್ಯತೆ, ಶೋಷಣೆಗಳಿಂದ ಮೇಲೆತ್ತುವ ಪ್ರಯತ್ನ ಇರುತ್ತದೆ. ಈ ಅಂಶವನ್ನು ಇಲ್ಲಿ ಪ್ರಸ್ತಾಪಿಸಿ ವಸ್ತುನಿಷ್ಠವಾದ ಸಂಶೋಧನೆಗೆ ಅನುವು ಮಾಡಿಕೊಡಲಾಗಿದೆ.*

## ಅನನ್ಯ ನೆನಪು




*ಡಾ|| ಸಿ. ಆರ್. ಚಂದ್ರಶೇಖರ್*

**ಪುಟ : 112** **ಬೆಲೆ : ರೂ. 40**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು - 560 001

*ಬಾಳಿನಲ್ಲಿ ಸಿಡಿಲಿನಂತೆ ಬಂದೆರಗುವ ಅನಿರೀಕ್ಷಿತ ಕಹಿ ಘಟನೆಗಳಿಂದ ನೊಂದು-ಬೆಂದ ಜನರ ಅಸ್ಪಷ್ಟ ಮನಸ್ಸಿನ ಅಂತರಾಳದ ವ್ಯಥೆಗಳು, ವಿಭಿನ್ನ ವ್ಯಕ್ತಿಗಳ ವಿವಿಧ ನೋವಿನ ಎಳೆಗಳು ಇಲ್ಲಿ ಸಂಗಮಿಸಿವೆ. ಖ್ಯಾತ ಮನೋವೈದ್ಯರ ಪ್ರಕಾರ ಸಮಸ್ಯೆಗಳನ್ನೆದುರಿಸುವ ಮನೋಸ್ಥೈರ್ಯವಿಲ್ಲದಾಗ ಸುಪ್ತಾವಸ್ಥೆಗೆ ನೆನಪುಗಳನ್ನು ತಳ್ಳುವ ಯತ್ನ ವಿಫಲವಾದಾಗ ಅದು ಮನೋ-ದೈಹಿಕ ಬೇನೆಯಾಗಿ ಮಾರ್ಪಡುತ್ತದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.*

## ಈ ಭೂಮಿ, ಈ ಸಸ್ಯ




*ನಿರೂಪಣೆ : ಬಂದಗದ್ದೆ ರಾಧಾಕೃಷ್ಣ*

**ಪುಟ : 56** **ಬೆಲೆ : ರೂ. 15**

**ಭಾರತೀ ಕಲಾವಿದರು**, ಕೆಳದಿ, ಕೃಷಿ ವಿಕಾಸ ಕೇಂದ್ರ, ಬೆಳೆಯೂರು - 577 401

*ಸ್ವೀಕರಿಸಿದ ಒಂದು ಕಾಳನ್ನು ಚಿಗುರಿಸಿ ಹತ್ತರಷ್ಟು ಹಿಂತಿರುಗಿಸುವ ಸಾಮರ್ಥ್ಯ ಇರುವ ಈ ಭೂಮಿ-ಸಸ್ಯಗಳ ಬಾಂಧವ್ಯದ ಬಗ್ಗೆ ಸ್ವಾರಸ್ಯಕರ ಲೇಖನಗಳಿವೆ. ಇಂಥ ಫಲವತ್ತಾದ ಭೂಮಿಯಲ್ಲಿ ಬಂಗಾರ ಬೆಳೆಯಬೇಕಾದ ನಾವು ಸರಿಯಾದ ಮಾರ್ಗದರ್ಶನವಿಲ್ಲದೆ ಭೂಮಿಯನ್ನು ಬರಡಾಗಿಸಿದ್ದೇವೆ. ಕೃಷಿ ತಜ್ಞ ಶ್ರೀ ಎಲ್. ನಾರಾಯಣ ರೆಡ್ಡಿಯವರ ಅನಿಸಿಕೆಗಳನ್ನೂ ವ್ಯವಸಾಯದ ನಿಗೂಢ ರಹಸ್ಯಗಳನ್ನೂ ಇಲ್ಲಿ ಹೇಳಲಾಗಿದೆ.*

## ಕೋಮುವಾದದ ರಾಜಕೀಯ




*ಜಿ. ರಾಜಶೇಖರ, ಕೆ. ಫಣಿರಾಜ್, ಫಕೀರ್ ಮುಹಮ್ಮದ್ ಕಟ್ಪಾಡಿ*

**ಪುಟ : 96** **ಬೆಲೆ : ರೂ. 25**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

*ಸುರತ್ಕಲ್‌ನಲ್ಲಿ ಇತ್ತೀಚೆಗೆ ನಡೆದ ಭೀಕರ ಮತೀಯ ಗಲಭೆಗಳ ಸ್ವರೂಪ ಎಂತಹುದು ? ಶಾಂತವಾಗಿರುವ ಸರೋವರಕ್ಕೆ ಕಲ್ಲೆಸೆದಂತೆ ಅವುಗಳನ್ನು ವ್ಯವಸ್ಥಿತವಾಗಿ ಮಾಡಲಾಯಿತೆ ? ಇದರಲ್ಲಿ ಸಂಘ ಪರಿವಾರದವರ ಹಿಂದುತ್ವದ ಪಾತ್ರವೇನು ? ನಾಡಿನ ಮೂವರು ಚಿಂತಕರು ನಡೆಸಿದ ಅಧ್ಯಯನದಿಂದ, ವಿವರಗಳಿಂದ ತಿಳಿದುಬರುವುದೇ ಇಲ್ಲಿನ 'ಕೋಮುವಾದದ ರಾಜಕೀಯ'. ನೆರೆಮನೆಯ ಬೆಂಕಿಯೆಂದು ಅಸಡ್ಡೆ ತೋರಿಸದೆ ಎಲ್ಲರೂ ಓದಬೇಕಾದ ಕೃತಿ.*

\- ಇಂದಿರಾ ಕುಮಾರಿ

ಸೂಫಿ ಕತೆಗಳು

# ಬೆಂಕಿಯ ಕಥೆ

ಸಾವಿರಾರು ವರ್ಷಗಳ ಹಿಂದೆ ಒಬ್ಬ ವ್ಯಕ್ತಿಯು ಪ್ರಕೃತಿಯ ನಿಗೂಢತೆಯನ್ನು ಕುರಿತಂತೆ ಗಾಢವಾಗಿ ಚಿಂತನೆ ಮಾಡತೊಡಗಿದ. ಹಲವಾರು ವರ್ಷಗಳು ಈ ವಿಷಯವನ್ನು ತಲೆಯಲ್ಲಿ ತುಂಬಿಕೊಂಡು ತನಗೆ ತೋಚಿದ ರೀತಿಯಲ್ಲಿ ಲೆಕ್ಕವಿಲ್ಲದಷ್ಟು ಪ್ರಯೋಗಗಳನ್ನು ಮಾಡಿದ. ಹೀಗೆ ಮಾಡುತ್ತಾ ವಿಶ್ಲೇಷಿಸುತ್ತಾ ಇರುವಾಗ ಬೆಂಕಿಯು ಉದ್ದೇಶಪೂರ್ವಕವಲ್ಲದೆ ಉತ್ಪತ್ತಿಯಾದ ಶಕ್ತಿಯಾಗಿ ಕಾಣಿಸಿಕೊಂಡಿತು. ಅದನ್ನು ಕುರಿತ ಜ್ಞಾನವನ್ನೂ ಅವನು ಸಂಪಾದಿಸಿಕೊಂಡ.

ನೊಉರ್ ಎಂಬುದು ಅವನ ಹೆಸರು. ತಾನು ಕರಗತ ಮಾಡಿಕೊಂಡಿದ್ದ ಜ್ಞಾನವನ್ನು ಎಲ್ಲರಿಗೂ ಪರಿಚಯಿಸಬೇಕೆಂಬ ಅಪೇಕ್ಷೆಯು ಅವನಲ್ಲಿ ಉಂಟಾಯಿತು. ಹಲವಾರು ವರ್ಷಗಳ ಸಾಧನೆಯ ಫಲವೆಂಬಂತೆ ಆ ಜ್ಞಾನ ಕೌಶಲವು ಅವನಿಗೆ ದೊರಕಿತ್ತು. ಅದನ್ನು ಜನತೆಯ ಕಣ್ಣೆದುರು ಪ್ರದರ್ಶಿಸಿ ಸಾಕ್ಷೀಭವಿಸುವ ಸಲುವಾಗಿ ಅವನು ದೇಶಾಂತರ ಹೊರಟ. ಒಂದಾದ ಮೇಲೊಂದರಂತೆ ಹಲವಾರು ಸಮುದಾಯಗಳನ್ನು ತನ್ನ ದೇಶ ಪರ್ಯಟನೆಯ ಕಾಲದಲ್ಲಿ ಭೇಟಿಯಾದ. ಈ ಜ್ಞಾನವು ಅಮೂಲ್ಯವಾದ್ದೆಂದು ಅರಿತುಕೊಳ್ಳಬಲ್ಲ ಜನ ಅದರ ಪ್ರಯೋಜನ ಪಡೆದುಕೊಂಡರು. ಮತ್ತೆ ಕೆಲವರು ನೊಉರನನ್ನು ಅಪಾಯಕಾರಿ ಆಸಾಮಿ ಎಂದು ಬಗೆದರು. ಅಂಥವರು ಅವನನ್ನು ಊರುಗಳಿಂದ ಹೊರಗಟ್ಟಿದರು. ಅಮೂಲ್ಯವಾದ ಈ ಜ್ಞಾನದ ಕಿಂಚಿತ್ತು ಯೋಚಿಸುವಷ್ಟು ತಾಳ್ಮೆ ಕೂಡ ಅವರಿಗಿರಲಿಲ್ಲ. ಇದಾವುದರಿಂದಲೂ ವಿಚಲಿತನಾಗದ ನೊಉರನು ತಿರುಗಾಟವನ್ನು ಮುಂದುವರೆಸಿದ. ಒಂದು ದಿನ ಅವನು ಯಾವುದೋ ಒಂದು ಊರಿನಲ್ಲಿ ತನ್ನ ಸಂಚಯಿತ ಜ್ಞಾನದ ಪ್ರಸಾರದಲ್ಲಿ ತೊಡಗಿದ್ದ. ಬೆಂಕಿಯನ್ನು ಸೃಷ್ಟಿಸಬಲ್ಲ ಅವನ ಶಕ್ತಿಯನ್ನು ಕಂಡ ಕೆಲವರು ದಿಗ್ಭ್ರಮೆಗೊಂಡರು. ಅವನನ್ನು ಸುತ್ತುವರಿದು ಕೊಂದುಬಿಟ್ಟರು.

ಶತಮಾನಗಳು ಉರುಳಿದವು. ಬೆಂಕಿಯನ್ನು ಉತ್ಪಾದಿಸುವ ಜ್ಞಾನ ಕೌಶಲವನ್ನು ನೊಉರನಿಂದ ಮೊದಲಿಗೆ ಪಡೆದುಕೊಂಡ ಜನಸಮುದಾಯವು ಈ ರಹಸ್ಯವನ್ನು ಪುರೋಹಿತ ವರ್ಗಕ್ಕೆ ಮೀಸಲುಗೊಳಿಸುವ ವ್ಯವಸ್ಥೆಯನ್ನು ಜಾರಿಗೆ ತಂದಿತು. ಪುರೋಹಿತ ವರ್ಗವು ಈ ವ್ಯವಸ್ಥೆಯಲ್ಲಿ ಪುಷ್ಕಳವಾಗಿ ಉಂಡು ಬೆಚ್ಚಗಿನ ಬದುಕು ಸಾಗಿಸುತ್ತ ಶ್ರೀಮಂತಿಕೆಯಲ್ಲಿ ಹೊರಳಾಡಿತು. ಜನಸಾಮಾನ್ಯರು ಕೊರೆದು ಕೊಲ್ಲುವ ಬಡತನದಲ್ಲಿ ನರಳಾಡುವಂತಾಯಿತು.

ಎರಡನೆ ಸಮುದಾಯದ ಜನಕ್ಕೆ ಈ ರಹಸ್ಯವಿದ್ಯೆಯ ಮಹತ್ವವು ಕಾಲಾನುಕ್ರಮದಲ್ಲಿ ಮಸುಕಾಗಿ ಹೋಯಿತು. ವಿಸ್ಮೃತಿಗೊಳಗಾದ ಅವರು ಬೆಂಕಿಯನ್ನು ಉತ್ಪಾದಿಸಲು ಬಳಸುವ ಉಪಕರಣಗಳನ್ನೇ ಪೂಜಿಸತೊಡಗಿದರು. ಮೂರನೆ ಸಮುದಾಯದವರು ನೊಉರನನ್ನು ಪ್ರವಾದಿ ಎಂದು ಬಗೆದರು. ಅವನ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಆರಾಧನೆಯಲ್ಲಿ ಮುಳುಗಿದರು. ನಾಲ್ಕನೆ ಸಮುದಾಯದವರು ಬೆಂಕಿಯ ಬಗ್ಗೆ ಪ್ರಚಲಿತವಿದ್ದ ಸಂಗತಿಗಳನ್ನು ಕತೆಗಳಾಗಿ ಪೋಣಿಸಿ ದಂತಕತೆಗಳ ಸ್ವರೂಪದಲ್ಲಿ ಸಂರಕ್ಷಿಸಿಕೊಂಡರು. ದಂತಕತೆಗಳನ್ನು ನಂಬುವವರು ಕೆಲವರಿದ್ದರೆ ಕಟ್ಟುಕತೆಗಳೆಂದು ಅವನ್ನು ನಂಬದವರೂ ಇದ್ದರು. ಐದನೆ ಸಮುದಾಯದ ಜನರು ಮಾತ್ರವೇ ನೊಉರನ ಬೋಧನೆಯ ಸಾರವನ್ನು ಗ್ರಹಿಸಿ ಬೆಂಕಿಯನ್ನು ಉತ್ಪಾದಿಸುವ ಕೌಶಲವನ್ನು ಕರಗತ ಮಾಡಿಕೊಂಡರು. ಕೊರೆಯುವ ಚಳಿಯನ್ನು ಉರಿಯಲ್ಲಿ ಕರಗಿಸಿ ಬೆಚ್ಚಗೆ ಬದುಕುವುದನ್ನು ಕಲಿತರು. ಆಹಾರ ಬೇಯಿಸುವುದನ್ನು ಕಲಿತರು. ಸಮುದಾಯಕ್ಕೆ ಅಗತ್ಯವಾದ ಸಮಸ್ತ ವಸ್ತುಗಳ ಉತ್ಪಾದನೆಯನ್ನೂ ಸಾಧಿಸಿದರು.

ಅದೆಷ್ಟೋ ವರ್ಷಗಳು ಹೀಗೆಯೇ ಕಳೆದವು. ಒಮ್ಮೆ ಅನುಭವಿಗಳೂ ಪ್ರಾಜ್ಞರೂ ಆದ ಗುರುಗಳೊಬ್ಬರು ತಮ್ಮ ಶಿಷ್ಯವೃಂದದೊಂದಿಗೆ ದೇಶ ಪರ್ಯಟನೆಯನ್ನು ಕೈಗೊಂಡು ಈ ಸಮುದಾಯಗಳು ನೆಲೆಸಿದ್ದ ಪ್ರಾಂತ್ಯದಲ್ಲಿ ತಿರುಗಾಟ ನಡೆಸಿದ್ದರು. ಇಲ್ಲಿನ ಜನರ ಧಾರ್ಮಿಕ ಆಚರಣೆಯ ವಿಧಾನಗಳು ವಿಭಿನ್ನವಾಗಿಯೂ ವಿಚಿತ್ರವಾಗಿಯೂ ಕಾಣುತ್ತಿದ್ದವು. ಇದು ಶಿಷ್ಯರಲ್ಲಿ ಸೋಜಿಗವನ್ನು ಮೂಡಿಸಿತು. ''ಈ ಸಮುದಾಯಗಳಲ್ಲಿ ರೂಢಿಯಲ್ಲಿರುವ ಬಹುವಿಧಾನಗಳನ್ನು ನಿವಾರಿಸಿ ಸುಧಾರಣೆಯನ್ನು ತರುವ ಅಗತ್ಯವು ನಮಗೆ ಕಂಡುಬರುತ್ತಿದೆ. ನಾವು ಕಾರ್ಯೋನ್ಮುಖರಾಗುವಂತೆ ತಾವು ಅನುಗ್ರಹಿಸಬೇಕು,'' ಎಂದು ಶಿಷ್ಯರು ಗುರುಗಳಲ್ಲಿ ನಿವೇದಿಸಿಕೊಂಡರು. ತಮ್ಮ ಶಿಷ್ಯರಿಗಿರುವ ಕಳಕಳಿಯನ್ನು ಗುರುಗಳು ಮೆಚ್ಚಿಕೊಂಡರು. ''ನೋಡಿ, ಆಚರಣೆಗಳಲ್ಲಿ ಬಹುವಿಧಾನಗಳು ಇವೆ ಎನ್ನುವುದು ನಿಜವಾದರೆ, ಈ ವಿಭಿನ್ನತೆಗಳಿಗೆ ಈ ಸಮುದಾಯಗಳಲ್ಲಿರುವ ನಿಜವಾದ ಸಮಸ್ಯೆಗಳೇನು ಎಂಬುದನ್ನು ನಾವು ಅರಿತುಕೊಳ್ಳಬೇಕು. ಪರಿಹಾರದ ಸೂಕ್ತಮಾರ್ಗಗಳನ್ನು ಕಂಡುಕೊಳ್ಳಬೇಕು. ನೀವು ಮಾಡಬೇಕೆಂದು ಅಪೇಕ್ಷಿಸುವ ಸುಧಾರಣೆಯು ಯಾವ ಸ್ವರೂಪದಲ್ಲಿರಬೇಕು ಎಂಬುದನ್ನು ಆ ನಂತರದಲ್ಲಿ ನಿರ್ಧರಿಸಬೇಕು. ಆದ್ದರಿಂದ ನಮ್ಮ ತಿರುಗಾಟವನ್ನು ಮತ್ತೊಮ್ಮೆ ಮೊದಲಿನಿಂದ ಪ್ರಾರಂಭಿಸುವುದು ಅನಿವಾರ್ಯವೆಂಬಂತಿದೆ. ನಾವು ಈ ಸಮುದಾಯಕ್ಕೆ ಮರಳಿ ಬರುವಷ್ಟರಲ್ಲಿ ಯಾರು ಬದುಕುಳಿಯುವರೋ ತಿಳಿಯದು. ಹಾಗೆ ಉಳಿದವರಿಗಾದರೂ ಸಮಸ್ಯೆಗಳ ನಿಕಟ ಪರಿಚಯವಾಗುತ್ತದೆ. ಸೂಕ್ತವಾದ ಪರಿಹಾರ ಮಾರ್ಗಗಳು ದೊರಕುತ್ತವೆ'' ಎಂದು ಹೇಳಿದರು.

ತಂಡದ ಮರು ಪರ್ಯಟನೆಯು ಆರಂಭಗೊಂಡಿತು. ಗುರುಶಿಷ್ಯರು ಮೊದಲ ಸಮುದಾಯವು ನೆಲೆಸಿದ್ದ ಪ್ರಾಂತ್ಯವನ್ನು ತಲುಪಿದರು. ಅವರನ್ನು ಗೌರವಾದರಗಳಿಂದ ಬರಮಾಡಿಕೊಳ್ಳಲಾಯಿತು. ಅಲ್ಲಿನ ಪುರೋಹಿತನು ಒಂದು ದಿನ ಅತಿಥಿಗಳಾದ ಅವರನ್ನು ತಮ್ಮ ಧಾರ್ಮಿಕ ಆಚರಣೆಯ ಸಮಾರಂಭವೊಂದರಲ್ಲಿ ವೀಕ್ಷಕರಾಗಿ ಭಾಗವಹಿಸುವಂತೆ ಆಮಂತ್ರಿಸಿದ. ಆ ಧಾರ್ಮಿಕ ಆಚರಣೆಯು ಬೆಂಕಿಯ ಉತ್ಪತ್ತಿಗೆ ಸಂಬಂಧಿಸಿದ್ದೇ ಆಗಿತ್ತು. ನೆರೆದಿದ್ದ ಜನಸ್ತೋಮವು ಹರ್ಷೋದ್ಗಾರದ ಅಮಲಿನಲ್ಲಿ ತೇಲುತ್ತಿತ್ತು. ಸಮಾರಂಭವು ಮುಗಿದ ಮೇಲೆ ಗುರುಗಳು ಶಿಷ್ಯರನ್ನುದ್ದೇಶಿಸಿ ''ಏನಾದರೂ ಹೇಳಲು ಇಷ್ಟಪಡುವಿರಾ?'' ಎಂದು ಕೇಳಿದರು.

ಮೊದಲ ಶಿಷ್ಯನು ''ಸತ್ಯಕ್ಕೆ ಅಪಚಾರ ಸಲ್ಲದು. ನಾನು ಸಹಿಸಲಾರೆ. ಸತ್ಯದ ಸಮರ್ಥನೆಯೇ ನನ್ನ ಸಂಕಲ್ಪ. ಆದ್ದರಿಂದ ಈ ಜನರಿಗೆ ಕೆಲವೊಂದು ವಿಚಾರಗಳನ್ನು ಸ್ಪಷ್ಟಪಡಿಸಬೇಕಾಗಿದೆ. ನನಗೆ ಅನುಮತಿ ನೀಡಬೇಕು'' ಎಂದನು.

''ನಿರ್ಧಾರ ನಿನ್ನದು. ಯಾವುದೇ ಗಂಡಾಂತರ ಬಂದರೂ ನಾವಾರೂ ಹೊಣೆಯಲ್ಲ'' ಎಂದರು ಗುರುಗಳು.

ಶಿಷ್ಯನು ನಿಂತಲ್ಲಿಂದ ಒಂದೆರಡು ಹೆಜ್ಜೆ ಮುಂದಿಟ್ಟ. ಸಮುದಾಯದ ಮುಖಂಡನೂ ಪುರೋಹಿತನೂ ಕುಳಿತಿದ್ದರು. ಅವರ ಎದುರು ನಿಂತು – ''ನೀವು ಇದನ್ನು ಬಹು ದೊಡ್ಡ ಪವಾಡ ಎಂದು ನಂಬಿದ್ದೀರಿ. ದೈವಶಕ್ತಿಯ ಸಹಾಯವಿಲ್ಲದೆ ಇದೆಲ್ಲಾ ಸಾಧ್ಯವಿಲ್ಲ ಎಂದು ಬಗೆದಿದ್ದೀರಿ. ಮಹಾ ಪವಾಡವೆಂದು ನೀವು ಕರೆಯುವ ಇದನ್ನು ನಾನೂ ಮಾಡಿ ತೋರಿಸಬಲ್ಲೆ. ನಾನು ಗೆದ್ದರೆ ನಿಮ್ಮ ನಂಬಿಕೆಯು ಮೂಢನಂಬಿಕೆ ಎಂದಾಗುತ್ತದೆ. ನೀವು ತಲತಲಾಂತರದಿಂದ ಅನುಸರಿಸಿಕೊಂಡು ಬಂದದ್ದು ಲೊಳಲೊಟ್ಟೆ ಎಂದಾಗುತ್ತದೆ. ಸತ್ಯದ ನಿರೂಪಣೆ ಮಾಡಿ ತೋರಿಸುತ್ತೇನೆ. ಸವಾಲನ್ನು ಸ್ವೀಕರಿಸುವಿರಾ?'' ಎಂದು ಕೇಳಿದ.

''ಅವನನ್ನು ಹಿಡಿದು ಚಚ್ಚಿ ಬಿಡಬೇಡಿ'' ಎಂದು ಅರ್ಭಟಿಸಿದರು ಪುರೋಹಿತರು. ಜನಸಂದಣಿ ಅವನನ್ನು ಎಳೆದಾಡತೊಡಗಿತು. ಉನ್ಮಾದಗೊಂಡ ಜನಸಂದಣಿಗೆ ಸಿಲುಕಿದ ಅವನು ಹಿಂದಿರುಗಿ ಬರಲೇ ಇಲ್ಲ.

ಉಳಿದ ಶಿಷ್ಯರೊಂದಿಗೆ ಗುರುಗಳು ತಿರುಗಾಟವನ್ನು ಮುಂದುವರೆಸಿ ಮತ್ತೊಂದು ಪ್ರಾಂತ್ಯವನ್ನು ತಲುಪಿದರು. ಬೆಂಕಿಯನ್ನು ಉತ್ಪಾದಿಸಲು ಬಳಸುವ ಉಪಕರಣಗಳ ಆರಾಧನೆಯಲ್ಲಿ ತೊಡಗಿದ್ದ ಸಮುದಾಯವು ಅದಾಗಿತ್ತು. ಮೊದಲಿನಂತೆಯೇ ಮತ್ತೊಬ್ಬ ಶಿಷ್ಯನು ಈ ಮೂಢ ನಂಬಿಕೆಯಿಂದ ಸಮುದಾಯವನ್ನು ಮುಕ್ತಗೊಳಿಸುವ ಅಪೇಕ್ಷೆಯನ್ನು ಗುರುಗಳಲ್ಲಿ ನಿವೇದಿಸಿಕೊಂಡ. ಗುರುಗಳು ಸಮ್ಮತಿಸಿದರು.

''ವಿಚಾರ ಮಾಡಬಲ್ಲ ಶಕ್ತಿಯಿರುವ ಜನ ನೀವು. ನನ್ನ ವಿಚಾರಗಳನ್ನು ನೀವು ತಾಳ್ಮೆಯಿಂದ ಕೇಳುತ್ತೀರಿ ಎಂಬುದರಲ್ಲಿ ನನಗೆ ಸಂಶಯವಿಲ್ಲ. ದಯವಿಟ್ಟು ಕೇಳಿ : ಆರಾಧನೆಯ ಪ್ರಮುಖ ವಸ್ತುವನ್ನೇ ಮರೆತು ಅದನ್ನು ತಯಾರಿಸಲು ಬಳಸುವ ಉಪಕರಣಗಳನ್ನು ಪೂಜಿಸ ತೊಡಗಿದ್ದೀರಿ. ಉಪಕರಣಗಳಿಂದ ಏನನ್ನಾದರೂ ಉತ್ಪಾದಿಸಬಹುದಿತ್ತು. ಆದರೆ ಅವು ಈಗ ಬಳಕೆಯನ್ನು ಕಳೆದುಕೊಂಡು ಪೂಜ್ಯ ವಸ್ತುಗಳಾಗಿ ಬಿಟ್ಟಿವೆ. ನಿಮ್ಮ ಎಲ್ಲಾ ಆಚರಣೆಗಳ ಮೂಲಸತ್ವವನ್ನು ನಾನು ತಿಳಿಸಿಕೊಡಬಲ್ಲೆ'' ಎಂದು ಆ ಶಿಷ್ಯನು ಸಮುದಾಯದ ಜನತೆಯನ್ನು ಉದ್ದೇಶಿಸಿ ನುಡಿದನು.

ಆ ಸಮುದಾಯದಲ್ಲಿ ಸಾಕಷ್ಟು ಸಂಖ್ಯೆಯ

ಅಹ್ಮದ್-ಇಲ್-ಬೆದಾಮಿ

ವಿಚಾರವಂತರೇನೋ ಇದ್ದರು. ಆದರೂ ಒಟ್ಟಾರೆಯಾಗಿ ಸಮುದಾಯದ ಹಿರಿಯರು ಶಿಷ್ಯನನ್ನು ಕುರಿತು - ''ನೀವು ಪರಕೀಯರು. ಪ್ರವಾಸಿಗರಾಗಿ ಬಂದ ನಿಮ್ಮನ್ನು ಆದರದಿಂದ ಬರಮಾಡಿಕೊಳ್ಳುವುದು ನಮ್ಮ ಧರ್ಮ. ನಿಮಗೆ ನಮ್ಮ ಸಂಪ್ರದಾಯಗಳ ಪರಿಚಯವೂ ಇರದು. ನಮ್ಮ ಸಮುದಾಯದ ಇತಿಹಾಸವೂ ಗೊತ್ತಿರದು. ಪರಕೀಯರಾದ ನಿಮಗೆ ನಮ್ಮ ರೀತಿ ರಿವಾಜುಗಳು ಅರ್ಥವಾಗುವುದಾದರೂ ಹೇಗೆ ಸಾಧ್ಯ? ನಿಮ್ಮ ಉದ್ದೇಶವೇ ಬೇರೆ ಇರುವಂತಿದೆ. ನಮ್ಮ ಸಮುದಾಯವನ್ನು ದಾರಿ ತಪ್ಪಿಸುವ ಹುನ್ನಾರವು ನಿಮ್ಮ ಮಾತುಗಳಲ್ಲಿ ಕಂಡು ಬರುತ್ತಿದೆ. ಈ ಮಾತುಗಳಿಗೆಲ್ಲ ನಾವು ಮರುಳಾಗುವವರಲ್ಲ. ಬಂದ ದಾರಿ ಹಿಡಿಯುವುದು ಕ್ಷೇಮ'' ಎಂಬ ಎಚ್ಚರಿಕೆಯ ಮಾತುಗಳನ್ನಾಡಿದರು.



ತಂಡವು ಪ್ರವಾಸವನ್ನು ಮುಂದುವರೆಸಿ ಮೂರನೆ ಸಮುದಾಯವು ವಾಸಿಸುತ್ತಿದ್ದ ಪ್ರಾಂತ್ಯವನ್ನು ತಲುಪಿತು. ಬೆಂಕಿಯನ್ನು ಉತ್ಪಾದಿಸಿದ ಮೂಲಪುರುಷ ನೊಉರನ ವಿಗ್ರಹಗಳು ಎಲ್ಲಿ ನೋಡಿದರೂ ವಿಜೃಂಭಿಸುತ್ತಿದ್ದವು. ಸಮುದಾಯದ ಮುಖ್ಯಸ್ಥನನ್ನು ಉದ್ದೇಶಿಸಿ ಮೂರನೆ ಶಿಷ್ಯನು ಹೀಗೆಂದನು - ''ವಿಗ್ರಹಗಳೆಂದರೆ ಚೈತನ್ಯದ ಪ್ರಾತಿನಿಧಿಕ ವಸ್ತುಗಳು. ನಾವು ಚೈತನ್ಯವನ್ನು ಆರಾಧಿಸಬೇಕೇ ಹೊರತು ವಿಗ್ರಹಗಳನ್ನಲ್ಲ.''

''ನಿನ್ನ ಮಾತಿನಲ್ಲಿ ಸತ್ಯವಿದ್ದರೂ ಇರಬಹುದು. ಆದರೆ ಈ ಜಿಜ್ಞಾಸೆ ನಮ್ಮಂಥ ಸಾಮಾನ್ಯರಿಗೆ ಎಟುಕುವುದಿಲ್ಲ'' ಎಂದರು ಭಕ್ತಾದಿಗಳು.

'ಅರ್ಥ ಮಾಡಿಕೊಳ್ಳಲು ಆಸಕ್ತಿ ಇರಬೇಕು. ಅಂತಹವರಿಗೆ ನನ್ನ ಮಾತುಗಳು ಅರ್ಥವಾಗುತ್ತವೆ. ವಾಸ್ತವ ಸಂಗತಿಗಳನ್ನು ಕಣ್ತೆರೆದು ನೋಡಲು ನಿಮಗೆ ಅಂಜಿಕೆ. ಅದಕ್ಕೇ ನನ್ನ ಮಾತುಗಳು ನಿಮಗೆ ಅರ್ಥವಾಗಲಾರವು' ಎಂದು ಶಿಷ್ಯನು ಉತ್ತರಿಸಿದ.

'ನಮ್ಮ ಭಾಷೆಯ ಕಾಗುಣಿತ ಕೂಡ ಗೊತ್ತಿಲ್ಲದ ಇವನಿಂದ ನಾವು ಪಾಠ ಕಲಿಯಬೇಕೇನು? ಪುರೋಹಿತರೆಂದರೆ ದೈವಾಂಶ ಸಂಭೂತರು ಎಂಬ ಸಂಗತಿಯನ್ನು ಮರೆತುಬಿಟ್ಟಿದ್ದೀರಾ? ಇವನು ಧರ್ಮಭ್ರಷ್ಟನೇ ಸರಿ' ಎಂದು ಕೆಕ್ಕರಿಸಿದರು ಪುರೋಹಿತರು. ಶಿಷ್ಯನು ಮಾತನ್ನು ಮುಂದುವರೆಸುವ ಸಾಧ್ಯತೆಯು ಕೊನೆಗೊಂಡಿತು.

ಅಲ್ಲಿಂದ ಹೊರಟ ತಂಡವು ನಾಲ್ಕನೆಯ ಸಮುದಾಯವನ್ನು ತಲುಪಿತು. ನಾಲ್ಕನೆ ಶಿಷ್ಯನು ಅಲ್ಲಿ ಸೇರಿದ ಸಭೆಯೊಂದನ್ನು ಕುರಿತು - 'ಬೆಂಕಿಯನ್ನು ಉತ್ಪಾದಿಸುವ ಸಂಗತಿಯು ಕಟ್ಟುಕತೆಯೇನಲ್ಲ. ವಾಸ್ತವ ಸತ್ಯ. ಅದನ್ನು ನಾನು ಸಾಕ್ಷ್ಯಾಧಾರಗಳಿಂದ ನಿರೂಪಿಸಿ ತೋರಿಸಬಲ್ಲೆ' ಎಂದನು.

ಅವನ ಈ ಮಾತುಗಳಿಂದಾಗಿ ಸಮುದಾಯಗಳಲ್ಲಿ ಗೊಂದಲಪುರವೇ ನಿರ್ಮಾಣಗೊಂಡಂತಾಯಿತು. ಭಿನ್ನಾಭಿಪ್ರಾಯಗಳು ತಲೆದೋರಿ ಸಮುದಾಯದಲ್ಲಿ ಬಿರುಕುಂಟಾಗತೊಡಗಿತು. 'ಅವನು ಹೇಳುವುದರಲ್ಲಿ ಸತ್ಯಾಂಶವಿದ್ದರೂ ಇರಬಹುದು. ಆದರೆ ನಾವು ಅದನ್ನು ಕಣ್ಣಾರೆ ನೋಡಬೇಕು. ಆಗಲೇ ಅದು ಕಟ್ಟುಕತೆಯಲ್ಲ ಎನ್ನಲು ಸಾಧ್ಯ' ಎಂದು ಕೆಲವರು ಉದ್ಗಾರ ತೆಗೆದರು. ಇವರ ಆಸಕ್ತಿಯ ಆಳದಲ್ಲಿ ಏನಿದೆ ಎಂಬುದನ್ನು ಅರಿತುಕೊಳ್ಳಲು ಗುರುಶಿಷ್ಯರು ಬಗೆಬಗೆಯ ಪ್ರಶ್ನೆಗಳನ್ನು ಹಾಕತೊಡಗಿದರು. ಬೆಂಕಿಯನ್ನು ಉತ್ಪಾದಿಸುವ ವಿದ್ಯೆಯ ಬಗ್ಗೆ ಅವರಿಗೆ ಆಸಕ್ತಿಯೇನೋ ಇತ್ತು ನಿಜ. ಆದರೆ ಈ ವಿದ್ಯೆಯನ್ನು ತಮ್ಮ ಸ್ವಂತ ಅನುಕೂಲಕ್ಕೆ ಹೇಗೆ ಬಳಸಿಕೊಳ್ಳಬೇಕು ಎಂಬ ಸ್ವಾರ್ಥವು ಅವರಲ್ಲಿ ತುಂಬಿತ್ತು. ಒಟ್ಟು ಮಾನವ ಸಮಾಜದ ಉನ್ನತಿಗಾಗಿ ಈ ವಿದ್ಯೆಯು ಬಳಕೆಯಾಗಬೇಕು ಎಂಬ ಸಮಷ್ಟಿಯ ಆಸಕ್ತಿ ಯಾರಲ್ಲೂ ಕಂಡುಬರಲಿಲ್ಲ.

> *ತತ್ತ್ವಜ್ಞಾನಿ ಎಂದೂ ಯಾವ ಪುರೋಹಿತರನ್ನೂ ಕೊಂದುದಿಲ್ಲ. ಆದರೆ ಪುರೋಹಿತ ಅನೇಕಾನೇಕ ಮಹಾನ್ ತತ್ತ್ವಜ್ಞಾನಿಗಳನ್ನು ಕೊಂದುಹಾಕಿದ್ದಾನೆ.*
>
> *- ದೆನಿಸ್ ದಿದೆರೋ, ಫ್ರೆಂಚ್ ತತ್ತ್ವಜ್ಞಾನಿ*

ಚಾಲ್ತಿಯಲ್ಲಿದ್ದ ದಂತಕತೆಗಳು ವಿಕೃತರೂಪ ಪಡೆದುಕೊಂಡುಬಿಟ್ಟಿದ್ದವು. ತಾವೇ ಸತ್ಯದ ವಾರಸುದಾರರು ಎಂದುಕೊಂಡವರು ಶುದ್ಧ ಅವಿವೇಕಿಗಳಾಗುವಷ್ಟು ಗಹನವಾದ ದುಷ್ಪರಿಣಾಮಗಳನ್ನು ಈ ವಿಕೃತ ದಂತಕತೆಗಳು ಉಂಟುಮಾಡಿದ್ದವು. ಒಂದು ವೇಳೆ ಬೆಂಕಿಯನ್ನು ಸಾಕ್ಷಾತ್ಕರಿಸಿ ತೋರಿಸಿದರೂ ಅದನ್ನು ಸಾಧಿಸುವ ಸಾಮರ್ಥ್ಯವನ್ನೇ ಅವರು ಕಳೆದುಕೊಂಡುಬಿಟ್ಟಿದ್ದರು.

''ದಂತ ಕತೆಗಳು ಅಂದ್ರೇನೇ ಬೊಗಳೆ ಅನ್ನೋದು ನಮಗೆಲ್ಲಾ ಗೊತ್ತಿರೋದೇ. ಈ ಮನುಷ್ಯ ನಮ್ಮನ್ನ ಏಮಾರಿಸಿ ಮಹಾ ಪ್ರಭೃತಿ ಎನಿಸಿಕೊಳ್ಳಲು ಹೊರಟಿದಾನೆ'' ಎಂಬ ಅಭಿಪ್ರಾಯವನ್ನು ಸಮುದಾಯದ ಮತ್ತೊಂದು ಬಣವು ವ್ಯಕ್ತಪಡಿಸಿತು.

ಇನ್ನೊಂದು ಬಣವು - 'ದಂತ ಕತೆಗಳು ನಮ್ಮ ಸಮುದಾಯವು ಚದುರಿಹೋಗದಂತೆ ಐಕ್ಯತೆಯನ್ನು ಕಾಪಾಡಿವೆ. ಯಾವ ಬದಲಾವಣೆಯನ್ನೂ ಮಾಡದಂತೆ ಅವನ್ನು ಸಂರಕ್ಷಿಸಿಕೊಳ್ಳಬೇಕು. ನಮ್ಮದೆನ್ನುವ ಹಳೆಯದೆಲ್ಲವನ್ನೂ ತ್ಯಜಿಸಿದೆವು ಎಂದೇ ಇಟ್ಟುಕೊಳ್ಳೋಣ. ಮುಂದೆ ಒಂದು ದಿನ ಹೊಸದೆಂಬುದು ಉಪಯುಕ್ತವಲ್ಲ ಎಂಬುದು ಸಿದ್ಧವಾಗಿಬಿಟ್ಟರೆ ನಾವು ಅತಂತ್ರರಾಗಿ ಬಿಡುತ್ತೇವೆ. ನಮ್ಮ ಸಮುದಾಯದ ಆಧಾರ ಸ್ತಂಭವೇ ಕುಸಿದು ಬಿಡುತ್ತದೆ'' ಎಂಬ ವಾದವನ್ನು ಮಂಡಿಸಿತು.

ಹತ್ತಾರು ಅಭಿಪ್ರಾಯಗಳು ಮೂಡತೊಡಗಿದವು.

ಐದನೆ ಸಮುದಾಯಕ್ಕೆ ಪ್ರವಾಸವನ್ನು ಮುಂದುವರಿಸುವ ತೀರ್ಮಾನವನ್ನು ತಂಡವು ಕೈಕೊಂಡಿತು. ಐದನೆ ಸಮುದಾಯದವರು ಬೆಂಕಿಯನ್ನು ವ್ಯಾಪಕವಾಗಿ ಬಳಸುತ್ತಿದ್ದರು. ಅದರ ಗರಿಷ್ಠ ಪ್ರಮಾಣದ ಪ್ರಯೋಜನ ಪಡೆಯುತ್ತಿದ್ದರು. ಆದರೂ ಮೂಢ ನಂಬಿಕೆಗಳಿಂದ ಸಂಪೂರ್ಣ ಮುಕ್ತವಾದ ಸಮುದಾಯವೇನೂ ಅದಾಗಿರಲಿಲ್ಲ. ಅದಕ್ಕೇ ವಿಶಿಷ್ಟವೆನಿಸುವ ಮೂಢನಂಬಿಕೆಗಳು ಚಾಲ್ತಿಯಲ್ಲಿದ್ದವು.

ಇಲ್ಲಿಗೆ ಮರುಪರ್ಯಟನೆಯು ಮುಗಿದಂತಾಗಿತ್ತು. ಕೊನೆಯದಾಗಿ ಗುರುಗಳು ಶಿಷ್ಯರನ್ನುದ್ದೇಶಿಸಿ ಹೀಗೆ ನುಡಿದರು - ''ಲೋಕದಲ್ಲಿ ಪ್ರತಿಯೊಬ್ಬನೂ ತಾನೇ ಸರ್ವಜ್ಞ ಎಂದು ಭಾವಿಸುತ್ತಾನೆ. ಅದರಲ್ಲೇನೂ ವಿಶೇಷವಿಲ್ಲ. ಬೇರೆಯವರಿಂದ ಕಲಿಯಬೇಕಾದ್ದು ಏನೂ ಇಲ್ಲ ಅಂದುಕೊಂಡಿರುತ್ತಾನೆ. ಸಂವೇದನೆಯು ಜಡಗೊಂಡಿರುವ ಜನ ಇವರು. ಇವರಿಗೆ ಯಾವ ವಿಧಾನದಲ್ಲಿ ಅರಿವು ಮೂಡಿಸಬೇಕು ಎಂಬುದನ್ನು ಮೊದಲಿಗೆ ನೀವು ಕಲಿಯಬೇಕು. ಯಾರೂ ಸರ್ವಜ್ಞರಲ್ಲ, ನಾವೆಷ್ಟೇ ತಿಳಿದಿದ್ದರೂ ಕಲಿಯುವುದು ಮತ್ತಷ್ಟು ಇದೆ ಎಂಬ ವಾಸ್ತವ ಸತ್ಯವನ್ನು ಅವರಿಗೆ ಮನದಟ್ಟು ಮಾಡಿಸಬೇಕು. ಅವರಿಗೆ ನಾವು ಕಲಿಸಬೇಕಾದ್ದು ಕಲಿಕೆಯ ವಿಧಾನವನ್ನೇ ಹೊರತು ನಮಗೆ ತಿಳಿದಿರುವುದನ್ನೆಲ್ಲಾ ಅವರಿಗೆ ತುರುಕುವುದಲ್ಲ. ವಿದ್ಯೆ ಎಂಬುದು ಒಬ್ಬೊಬ್ಬರ ಕಲ್ಪನೆಯಲ್ಲೂ ಬೇರೆ ಬೇರೆ ಆಗಿರುತ್ತದೆ. ಅವರ ಕಲ್ಪನೆಯಲ್ಲಿ ಯಾವುದು ವಿದ್ಯೆ ಎಂದು ಬಗೆಯುತ್ತಾರೋ ಅದನ್ನು ಕಲಿಯಲು ಅವರು ಒಲವು ತೋರುತ್ತಾರೆ. ಕಲಿಯುವ ಕ್ರಿಯೆಯು ಹೇಗೆ ಪ್ರಾರಂಭವಾಗುತ್ತದೆ ಎಂಬುದರ ಬಗ್ಗೆ ಅವರು ಯೋಚಿಸಲಾರರು. ಈ ಎಲ್ಲ ಸಂಗತಿಗಳನ್ನೂ ನೀವು ಬಲ್ಲವರಾಗಿರಬೇಕು. ಆಗ ಮಾತ್ರ ನೀವು ನಿಮ್ಮ ಸಾಧನೆಯಲ್ಲಿ ಯಶಸ್ಸು ಗಳಿಸುತ್ತೀರಿ. ನಿಮಗೆ ಜ್ಞಾನದ ಬಲವೂ ಇರಬಹುದು. ಸಾಮರ್ಥ್ಯವೂ ಇರಬಹುದು. ಜ್ಞಾನದ ಬಲವಿದ್ದೂ ತಿಳಿವು ಮೂಡಿಸುವ ಸಾಮರ್ಥ್ಯವಿಲ್ಲದಿರಬಹುದು. ಏಕೆಂದರೆ ಜ್ಞಾನವೆಂಬುದೇ ಬೇರೆ, ಅದನ್ನು ಮೂಡಿಸಲು ಬೇಕಿರುವ ಸಾಮರ್ಥ್ಯವೆಂಬುದೇ ಬೇರೆ.''

**ಕನ್ನಡಕ್ಕೆ : ಗಂಗಾಧರ ಮೂರ್ತಿ, ಬಿ.**

ನಂ. ೫೦, 'ಪಲ್ಲವಿ', ಕಾರೇಕಲ್ಲಹಳ್ಳಿ, ಗೌರಿಬಿದನೂರು-೫೬೧ ೨೦೮

# ಲೂಟಿಕೋರರ ಭೂರಿ ಭೋಜನ - ರಾಷ್ಟ್ರೀಕೃತ ಬ್ಯಾಂಕ್ ಸಾಲಗಳು

ಇತ್ತೀಚೆಗೆ ಮರುಪಾವತಿಯಾಗದ ಬ್ಯಾಂಕ್ ಸಾಲಗಳ ಸುದ್ದಿ ಆಗಾಗ ಕೇಳಿ ಬರುತ್ತಿದ್ದು, ಅವು ಅನುತ್ಪಾದಕ ಸ್ವತ್ತುಗಳು ಎಂದು ಕುಖ್ಯಾತವಾಗಿವೆ. ಇಂಗ್ಲಿಷಿನಲ್ಲಿ ಅದನ್ನು 'ನಾನ್ ಪರ್ಫಾಮಿಂಗ್ ಅಸೆಟ್ಸ್' ಎಂದು ಗೌರವದಿಂದ ಕರೆಯುತ್ತಾರೆ. ಈ ಎನ್.ಪಿ.ಎ. ಬಗ್ಗೆ ಗಮನ ಹರಿಸೋಣ.

ಒಬ್ಬ ಗ್ರಾಹಕ ಬ್ಯಾಂಕಿನಿಂದ ಸಾಲ ಪಡೆದು, ಕೆಲವು ವರ್ಷಗಳಿಂದ ಬಡ್ಡಿ ಹಾಗೂ ಮೂಲ ಸಾಲದ ಮೊತ್ತವನ್ನು ಮರುಪಾವತಿ ಮಾಡದಿದ್ದರೆ, ಅಂತಹ ಸಾಲವನ್ನು ಎನ್.ಪಿ.ಎ. ಎಂದು ವರ್ಗೀಕರಿಸಲಾಗುತ್ತದೆ. ಇಲ್ಲಿ ''ಸ್ವತ್ತು'' (ಅಸೆಟ್) ಎಂಬ ಪದದ ಬಳಕೆಯಿಂದ ಸಾಮಾನ್ಯ ಜನರಲ್ಲಿ ಗೊಂದಲವುಂಟಾಗುವುದು ಸಹಜ. ಯಾವುದೋ ಆಸ್ತಿ ನಿರ್ಮಾಣವಾಗುತ್ತಿದೆಯೇನೋ ಎಂಬ ಭಾವನೆ ಬರುವುದು ಸ್ವಾಭಾವಿಕ. ವರ್ಷದಿಂದ ವರ್ಷಕ್ಕೆ ಈ ಅಭಾವ ಸ್ವತ್ತುಗಳ ಮೊತ್ತ ಕೋಟಿಗಳಲ್ಲಿ ಹೆಚ್ಚುತ್ತಿರುವುದರಿಂದ, ಬ್ಯಾಂಕುಗಳಲ್ಲಿ ಅಷ್ಟು ಆಸ್ತಿ (?) ಸೃಷ್ಟಿಯಾಗುತ್ತಿರುವುದೇನೋ ಎಂಬ ಅಭಿಪ್ರಾಯಕ್ಕೆ ಒಬ್ಬ ಶ್ರೀಸಾಮಾನ್ಯ ಬರಬಹುದು.

ಭಾರತೀಯ ರಿಸರ್ವ್ ಬ್ಯಾಂಕ್‌ನ ಪ್ರಕಟಣೆ ''ಭಾರತದಲ್ಲಿ ಬ್ಯಾಂಕಿಂಗ್ ಅಭಿವೃದ್ಧಿ ಮತ್ತು ದಿಕ್ಕು'' ಎಂಬ ಹೊತ್ತಿಗೆಯ ಪ್ರಕಾರ ಮಾರ್ಚ್ ೩೧, ೧೯೯೯ರಲ್ಲಿ ಮರುಪಾವತಿಯಾಗದ ಸಾಲಗಳ ಒಟ್ಟು ಮೊತ್ತ ರೂ. ೫೮,೫೫೪ ಕೋಟಿ. ಇವುಗಳಲ್ಲಿ ಕಾರ್ಪೊರೇಟ್ ಕ್ಷೇತ್ರದಿಂದ ಬರಬೇಕಾದದ್ದು ಸುಮಾರು ರೂ. ೩೦,೦೦೦ ಕೋಟಿ. ಭಾರತೀಯ ಕೈಗಾರಿಕೆಗಳ ಮಹಾ ಒಕ್ಕೂಟದ (ಸಿ.ಐ.ಐ.) ದೊಡ್ಡ ಬಂಡವಾಳಗಾರರಿಂದಲೇ ಸುಮಾರು ರೂ. ೨೫,೦೦೦ ಕೋಟಿ ಸಾಲ ಮರುಪಾವತಿ ಯಾಗಬೇಕು. ಇಂತಹ ಸುಸ್ತಿದಾರರಲ್ಲಿ ಅನೇಕರು ಮಾಧ್ಯಮಗಳ ಮೂಲಕ ನಮ್ಮ ದೇಶದ ಆರ್ಥಿಕತೆ ಹೇಗಿರಬೇಕೆಂದು, ಪ್ರಗತಿ ಸಾಧಿಸಬೇಕಾದರೆ ಆರ್ಥಿಕ ರಂಗದಲ್ಲಿ ಯಾವ ರೀತಿಯ ಸುಧಾರಣೆಗಳನ್ನು ಜಾರಿ ಮಾಡಬೇಕೆಂದು ಸರ್ಕಾರಕ್ಕೆ ಉಪದೇಶ ನೀಡುತ್ತಾರೆ. ಬ್ಯಾಂಕ್‌ಗಳಲ್ಲಿರುವ ಸಾರ್ವಜನಿಕರ ಹಣವನ್ನು ಸಾಲಗಳ ರೂಪದಲ್ಲಿ ಲೂಟಿ ಮಾಡಿ, ಬಾಯಿ ಹರಿಬಿಡುವ ಈ ಧೂರ್ತರ ಶಿಫಾರಸ್ಸುಗಳಿಗೆ ನಿರ್ವೀರ್ಯ ಸರ್ಕಾರಗಳು ಕೋಲೆ ಬಸವನಂತೆ ತಲೆ ಅಲ್ಲಾಡಿಸುತ್ತಾ ಬಂದಿರುವುದು ನಿಜಕ್ಕೂ ಖಂಡನೀಯ. ಒಬ್ಬ ಸಾಮಾನ್ಯ ಕಳ್ಳನಿಗೆ ಜೈಲಾಗುತ್ತದೆ. ನೂರೋ ಸಾವಿರವೋ ಸಾಲ ಪಡೆದವನ ಮನೆ ಜಪ್ತಿಯಾಗುತ್ತದೆ. ಆದರೆ ಈ ಪ್ರತಿಷ್ಠಿತರೆಂಬ



ಮುಖವಾಡ ಹಾಕಿಕೊಂಡ ವಂಚಕರ ವಿರುದ್ಧ ಯಾವ ಸಕಾರಾತ್ಮಕ ಕ್ರಮವನ್ನೂ ಇದುವರೆಗೆ ಜರುಗಿಸಲು ಕೇಂದ್ರ ಸರ್ಕಾರ ಹಾಗೂ ಭಾರತೀಯ ರಿಸರ್ವ್ ಬ್ಯಾಂಕ್ ಹಿಂದೇಟು ಹೊಡೆಯುತ್ತಿವೆ. ಮರುಪಾವತಿಯಾಗದ ಬ್ಯಾಂಕ್ ಸಾಲಗಳು ಶೀಘ್ರವಾಗಿ ವಸೂಲಾಗುವಂತೆ ಸಹಕರಿಸುವಲ್ಲಿ ನಮ್ಮ ದೇಶದ ಕಾನೂನುಗಳು ಹಿಂದೆ ಬಿದ್ದಿವೆ. ಯಾಕೆ ಈ ಕಾನೂನುಗಳಲ್ಲಿ ಸೂಕ್ತವಾದ ಬದಲಾವಣೆಗಳನ್ನು ಮಾಡಿಲ್ಲ ಸರ್ಕಾರ? ಯಾವುದೇ ಕ್ಷೇತ್ರದ ಪ್ರಸ್ತಾಪ ಮಾಡಿದರೂ ಸುಧಾರಣೆಗಳಾಗ ಬೇಕೆಂದು ಘೋಷಿಸುವ ಸರ್ಕಾರ ಈ ವಿಷಯದಲ್ಲಿ ಮೌನವಾಗಿರುವುದು ಏಕೆ? ಅತ್ಯಂತ ಮೇಲಿನ ಸ್ತರಗಳಲ್ಲೂ ವ್ಯಾಪಕವಾಗಿ ಹಬ್ಬಿರುವ ಭ್ರಷ್ಟಾಚಾರ ಇದಕ್ಕೆ ಕಾರಣವೇ? ಅಥವಾ ಸಾರ್ವಜನಿಕ ವಲಯದ ಬ್ಯಾಂಕ್‌ಗಳನ್ನು ಕ್ರಮೇಣ ನಿಶ್ಶಕ್ತಿಗೊಳಿಸಿ, ಕೊನೆಗೆ ಅವುಗಳನ್ನು ಅವಸಾನದ ಅಂಚಿಗೆ ತಳ್ಳುವ ಹಾಗೂ ಖಾಸಗಿ ಮತ್ತು ವಿದೇಶಿ ಬ್ಯಾಂಕ್‌ಗಳಿಗೆ ಉತ್ತೇಜನ ನೀಡುವ ಹುನ್ನಾರದ ನೀತಿಯೇ? ಅಥವಾ ಸಾರ್ವಜನಿಕ ಸಂಪತ್ತೆಲ್ಲಾ ಕಡೆಗೆ ಕೆಲವೇ ಪ್ರತಿಷ್ಠಿತ ಗೂಬೆಗಳ ಸವಲತ್ತಿಗಾಗಿಯೇ ಇರುವುದು ಎಂಬುದರ ನಿದರ್ಶನವೇ?

ಬ್ಯಾಂಕ್ ಸಾಲಗಳನ್ನು ಮರುಪಾವತಿ ಮಾಡದವರ ವಿವರಗಳನ್ನು ಗಮನಿಸಿದಾಗ, ಒಬ್ಬನೇ ವ್ಯಕ್ತಿ ಒಂದಕ್ಕಿಂತ ಹೆಚ್ಚು ಕಂಪೆನಿಗಳಲ್ಲಿ ನಿರ್ದೇಶಕನಾಗಿರುವುದು ಹಾಗೂ ಒಂದೇ ಕಂಪೆನಿಗೆ ಒಂದಕ್ಕಿಂತ ಹೆಚ್ಚು ಬ್ಯಾಂಕ್‌ಗಳು ಸಾಲ ನೀಡಿರುವುದು ಕಂಡುಬರುತ್ತದೆ (ಕೆಲವು ಕಂಪೆನಿಗಳ ವಿಚಾರದಲ್ಲಿ). ವಿಷಯ ಹೀಗಿರಬೇಕಾದರೆ, ವಂಚನೆಯ

**ಬ್ಯಾಂಕ್ ಸುಸ್ತಿದಾರರ ಪಟ್ಟಿ (ರೂ.೧೦ ಕೋಟಿಗಿಂತಲೂ ಹೆಚ್ಚು)**

| ಕ್ರ.ಸಂ. | ಕಂಪೆನಿಯ ಹೆಸರು | ನಿರ್ದೇಶಕರು | ಮರುಪಾವತಿ ಆಗದ ಸಾಲಗಳ ಮೊತ್ತ (ಕೋಟಿಗಳಲ್ಲಿ) | ಸಾಲ ನೀಡಿದ ರಾಷ್ಟ್ರೀಕೃತ ಬ್ಯಾಂಕ್‌ಗಳು |
|---|---|---|---|---|
| ೧. | ಎಂ.ಎಸ್.ಶೂಸ್ ಲಿ. ನವದೆಹಲಿ (ರಾಂ ಜೇಠ್ಮಲಾನಿ ಕೃಪಾಪೋಷಿತ?) | ಪವನ್ ಸಚ್‌ದೇವ್<br>ಸಾಧನ ಸಚ್‌ದೇವ್<br>ಊರ್ಮಿಳಾ ಸೂರಿ<br>ಕೃಷ್ಣ ಸಚ್‌ದೇವ್ | ೨೦.೪೭ | ಅಲಹಾಬಾದ್ ಬ್ಯಾಂಕ್ |
| ೨. | ಎಂ. ಎಸ್. ಇಂಟರ್‌ನ್ಯಾಷನಲ್, ನವದೆಹಲಿ | ಕಮಲ್ ಸೂರಿ<br>ಪವನ್ ಸಚ್‌ದೇವ್<br>ಸಾಧನ ಸಚ್‌ದೇವ್ | ೧೪.೫೫ | ಕೆನರಾ ಬ್ಯಾಂಕ್ |
| ೩.. | ಎಂ. ಎಸ್. ಶೂಸ್ (ಪೂರ್ವ) ಲಿ. ನವದೆಹಲಿ | ಪವನ್ ಸಚ್‌ದೇವ್<br>ಸಾಧನ ಸಚ್‌ದೇವ್<br>ಊರ್ಮಿಳಾ ಸೂರಿ | ೧೯.೦೨<br>೧೪.೧೨<br>೧೯.೦೨<br>೩೫.೯೦ | ಸ್ಟೇಟ್ ಬ್ಯಾಂಕ್ ಆಫ್ ಟ್ರಾವನ್‌ಕೂರ್<br>ಕೆನರಾ ಬ್ಯಾಂಕ್<br>ಭಾರತೀಯ ಸ್ಟೇಟ್ ಬ್ಯಾಂಕ್<br>ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ |
| ೪. | ಪೆರಲ್ ಇಂಟರ್ ಕಾಂಟಿನೆಂಟಲ್ ಲಿ. ನವದೆಹಲಿ | ಊರ್ಮಿಳಾ ಸೂರಿ<br>ಪವನ್ ಸಚ್‌ದೇವ್ | ೧೧.೧೨ | ಇಂಡಿಯನ್ ಬ್ಯಾಂಕ್ |
| *(ಈ ಕಂಪೆನಿಗಳ ಒಡೆಯರು ಹೊಸ ಖಾಸಗಿ ಬ್ಯಾಂಕ್ ಸ್ಥಾಪಿಸಲು ಭಾರತೀಯ ರಿಸರ್ವ್ ಬ್ಯಾಂಕ್‌ನ ಪರವಾನಗಿಗಾಗಿ ಅರ್ಜಿ ಸಲ್ಲಿಸಿದ್ದರು. ಇವರು ಷೇರು ಪೇಟೆಯಲ್ಲಿ ಸಾರ್ವಜನಿಕರ ಹಲವು ಕೋಟಿ ರೂ.ಗಳನ್ನು ನುಂಗಿಹಾಕಿದ್ದಾರೆ).* | | | | |
| ೫. | ಹರ್ಷದ್ ಮೆಹ್ತ* ಮುಂಬಯಿ | ಹರ್ಷದ್ ಮೆಹ್ತ | ೮೧೨.೦೮ | ಭಾರತೀಯ ಸ್ಟೇಟ್ ಬ್ಯಾಂಕ್ |

*(ಬ್ಯಾಂಕ್‌ಗಳ ಷೇರು ಹಗರಣದಲ್ಲಿ ಕುಖ್ಯಾತನಾಗಿದ್ದ ಈತ ನಂತರ ಕೆಲವು ಪತ್ರಿಕೆಗಳಿಗೆ ವಿತ್ತ ಸಂಬಂಧಿತ ವಿಷಯಗಳ ಬಗ್ಗೆ ಬರೆಯುವ ಅಂಕಣಕಾರನಾಗಿದ್ದ)

| | | | | |
|---|---|---|---|---|
| ೬. | ಪರಸ್‌ರಾಮ್ ಪೂರಿಯ ಸಿಂಥೆಟಿಕ್ಸ್ ಲಿ. (ಆಲ್ವಾರ್, ರಾಜಸ್ತಾನ್) | ಆರ್. ಎಲ್. ಪರಸ್‌ರಾಮ್ ಪೂರಿಯ ಹಾಗೂ ಇತರರು | ೧೧.೦೪ | ಬ್ಯಾಂಕ್ ಆಫ್ ಬರೋಡ |
| ೭. | –"– | –"– | ೨೧.೯೫ | ಸ್ಟೇಟ್ ಬ್ಯಾಂಕ್ ಆಫ್ ಬಿಕನೇರ್ ಹಾಗೂ ಜಯಪುರ |
| ೮. | –"– | –"– | ೧೦.೩೭ | ಸ್ಟೇಟ್ ಬ್ಯಾಂಕ್ ಆಫ್ ಟ್ರಾವನ್‌ಕೂರ್ |
| ೯. | ಪರಸ್‌ರಾಮ್ ಪೂರಿಯ ಸಿಂಥೆಟಿಕ್ಸ್ ಲಿ. (ಭಿವಾಡಿ) ರಾಜಸ್ತಾನ | –"– | ೬೦.೪೬<br>೧೧.೯೪<br>೨೫.೪೩ | ಕೆನರಾ ಬ್ಯಾಂಕ್<br>ಭಾರತೀಯ ಸ್ಟೇಟ್ ಬ್ಯಾಂಕ್<br>ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ |
| ೧೦. | ಪರಸ್‌ರಾಮ್ ಪೂರಿಯ ಪಾಲಿಮೈಡ್ಸ್ ಲಿ. (ನಾಗಪುರ) | ಎಸ್. ಸಿ. ರಸ್ತಗಿ ಆರ್. ಎಸ್. ಬಂಕ ಎಚ್. ಪರಸ್‌ರಾಮ್ ಪೂರಿಯ | ೧೦.೧೭ | ಕೆನರಾ ಬ್ಯಾಂಕ್ |
| ೧೧. | ಪರಸ್‌ರಾಮ್ ಪೂರಿಯ ಸಿಂಥೆಟಿಕ್ಸ್ ಮತ್ತು ಇಂಡಾಲ್ ಲಿ. ಭಿವಾಡಿ | ಪಿ. ಜಿ. ಲೀಲೆ ಆರ್. ಎಲ್. ಪರಸ್‌ರಾಮ್ ಪೂರಿಯ ಹಾಗೂ ಇತರರು | ೫೭.೫೦ | ಪಂಜಾಬ್ ನ್ಯಾಷನಲ್ ಬ್ಯಾಂಕ್ |
| ೧೨. | ಪರಸ್‌ರಾಮ್ ಪೂರಿಯ ಟೆಕ್ಸ್‌ಫಾಬ್ ಲಿ. (ಆಲ್ವಾರ್) | ಆರ್. ಎಲ್. ಪರಸ್‌ರಾಮ್ ಪೂರಿಯ ಹಾಗೂ ಇತರರು | ೧೦.೯೫ | –"– |
| ೧೩. | ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್ ಲಿ. | ವಿಜಯ ಮಲ್ಯ ಹಾಗೂ ಇತರರು | ೧೧.೯೭<br>೪೭.೪೪<br>೧೫.೪೭ | ಕೆನರಾ ಬ್ಯಾಂಕ್<br>ಸಿಂಡಿಕೇಟ್ ಬ್ಯಾಂಕ್<br>ಸ್ಟೇಟ್ ಬ್ಯಾಂಕ್ ಆಫ್ ಮೈಸೂರು |
| ೧೪. | ಟಿ. ಎಂ. ಎಫ್. ಎ. (ಕಳಿಂಗ ಟ್ಯೂಬ್ ಡಿವಿಶನ್) ಭುವನೇಶ್ವರ | ಫೀಲ್ಡ್ ಮಾರ್ಷಲ್ ಮಾನೇಕ್ಷಾ ಹಾಗೂ ಇತರರು | ೪೫.೮೫ | ಇಂಡಿಯನ್ ಬ್ಯಾಂಕ್ |
| ೧೫. | ಇಂಡಿಯನ್ ಚಾರ್ಜ್ ಕ್ರೋಮ್ ಲಿ. (ಭುವನೇಶ್ವರ) | –"– | ೫೧.೦೧ | ವಿಜಯ ಬ್ಯಾಂಕ್ |
| ೧೬. | ಸಂಡೂರು ಮ್ಯಾಂಗನೀಸ್ | ಎಂ. ವೈ. ಘೋರ್ಪಡೆ | ೧೦.೫೨ | ಕೆನರಾ ಬ್ಯಾಂಕ್ |




ಕಬಂಧ ಬಾಹುಗಳ ವ್ಯಾಪ್ತಿ ಎಷ್ಟಿರಬಹುದು ? ಈ ಜಾಲದಲ್ಲಿ ಬ್ಯಾಂಕ್‌ಗಳ ಕೆಲವು ವರಿಷ್ಠ ಅಧಿಕಾರಿಗಳು, ರಾಜಕೀಯ ನೇತಾರರು ಹಾಗೂ ಭ್ರಷ್ಟ ಬಂಡವಾಳಗಾರರು ಶಾಮೀಲಾಗಿ, ವ್ಯವಸ್ಥಿತವಾಗಿ, ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಸಾರ್ವಜನಿಕರ ಹಣವನ್ನು ಸೂರೆ ಮಾಡಿದ್ದಾರೆ.

ನಮ್ಮ ದೇಶದ ದೊಡ್ಡ ಬಂಡವಾಳಗಾರರಾಗಿರುವ ಬಿರ್ಲಾ, ಗೋಯಂಕ, ಸಿಂಘಾನಿಯ, ದಾಲ್ಮಿಯ, ಮೋದಿ ಮುಂತಾದ ಗುಂಪುಗಳ ಪ್ರತಿನಿಧಿಗಳು ನಿರ್ದೇಶಕರಾಗಿರುವ ಕಂಪೆನಿಗಳು ರಾಷ್ಟ್ರೀಕೃತ ಬ್ಯಾಂಕ್‌ಗಳ ಸಾಲಗಳನ್ನು ಮರುಪಾವತಿ ಮಾಡದವರ ಪಟ್ಟಿಯಲ್ಲಿವೆ. ಬಹುಮುಖ್ಯ ವ್ಯಕ್ತಿಗಳ (ವಿ.ಐ.ಪಿ.) ಗುಂಪಿಗೆ ಸೇರುವ ಫೀಲ್ಡ್ ಮಾರ್ಷಲ್ ಎಸ್. ಮಾನೆಕ್ಷಾ ನಿರ್ದೇಶಕರಾಗಿರುವ ಎರಡು ಕಂಪೆನಿಗಳದ್ದು ಸಹ ಇದೇ ಕಥೆ. ಇತ್ತೀಚೆಗೆ ಜರುಗಿದ ರಾಜ್ಯಸಭಾ ಚುನಾವಣೆಯಲ್ಲಿ ಸೋತ ಮದ್ಯಗಳ ದೊರೆ ವಿಜಯ ಮಲ್ಯ ತಾನು "ಸಮಾಜ ಸೇವೆ" ಮಾಡುವುದಕ್ಕಾಗಿ ರಾಜಕೀಯಕ್ಕೆ ಧುಮುಕು ತ್ತಿದ್ದೇನೆ ಎಂದು ಸಾರಿದ್ದರು. ಈತ ನಿರ್ದೇಶಕರಾಗಿರುವ ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್ ಕಂಪೆನಿಯಿಂದ ಮರುಪಾವತಿಯಾಗಬೇಕಾಗಿರುವ ಬ್ಯಾಂಕ್ ಸಾಲ ಸುಮಾರು ರೂ. ೧೬೫ ಕೋಟಿ. ಇತರ ವಿತ್ತ ಸಂಸ್ಥೆಗಳನ್ನೊಳಗೊಂಡು ಈ ಹಣವನ್ನು ಮರುಪಾವತಿ ಮಾಡಿದರೆ ಅದೇ ಅವರು ದೇಶದ ಜನತೆಗೆ ಮಾಡಬಹುದಾದ ಅತ್ಯುನ್ನತ ಸಮಾಜಸೇವೆ! ಪ್ರಸ್ತುತ ನಮ್ಮ ರಾಜ್ಯ ಸರ್ಕಾರದ ಗ್ರಾಮೀಣ ಅಭಿವೃದ್ಧಿ ಸಚಿವರಾಗಿರುವ ಶ್ರೀ ಎಂ. ವೈ. ಘೋರ್ಪಡೆ ನಿರ್ದೇಶಕರಾಗಿರುವ ಸಂಡೂರು ಮ್ಯಾಂಗನೀಸ್ ಹಾಗೂ ಐರನ್ ಓರ್ಸ್ ಕಂಪೆನಿಯಿಂದ (ಬಳ್ಳಾರಿ) ಸಂದಾಯವಾಗಬೇಕಾಗಿರುವ ಬ್ಯಾಂಕ್ ಸಾಲ ಸುಮಾರು ರೂ. ೧೦.೫೨ ಕೋಟಿ. ಹಾಗೆಯೇ ಮತ್ತೊಬ್ಬ ದೊಡ್ಡ ಕುಳವಾಗಿದ್ದ ಎಂ. ಎಸ್. ರಾಮಯ್ಯ ನಿರ್ದೇಶಕರಾಗಿದ್ದ ವಿಷ್ಣು ಫೋರ್ಜ್ ಲಿ. (ಮೈಸೂರು) ಕಂಪೆನಿಯಿಂದ ಸುಮಾರು ರೂ. ೧೧.೦೬ ಕೋಟಿ ಬ್ಯಾಂಕ್ ಸಾಲ ಮರುಪಾವತಿಯಾಗಬೇಕು.

ಇತ್ತೀಚೆಗೆ, ಇಂತಹ ಸಾಲಗಳ ಬಗ್ಗೆ ಕಟ್ಟುನಿಟ್ಟಾದ ಕ್ರಮಗಳನ್ನು ಜಾರಿಗೊಳಿಸಿರುವ ಸುದ್ದಿ ಬಂದಿರುವುದು ನಮ್ಮ ನೆರೆಯ ದೇಶ ಪಾಕಿಸ್ತಾನದಿಂದ. ಅಲ್ಲಿ, ಎನ್.ಪಿ.ಎ.ಗೆ ಕಾರಣರಾದ ಕಂಪೆನಿಗಳ ನಿರ್ದೇಶಕರ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡು ಅವರು ಪರದೇಶಕ್ಕೆ ಪರಾರಿಯಾಗದಂತೆ ಬಂದೋಬಸ್ತು ಮಾಡಲಾಗಿದೆಯಂತೆ. ಈ ವಿಷಯವನ್ನು ಪ್ರಸ್ತಾಪಿಸುತ್ತಾ "ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್" ಸಂಪಾದಕೀಯದಲ್ಲಿ "ನಮ್ಮ ದೇಶದಲ್ಲೂ ಸೂಕ್ತವಾದ ಕ್ರಮಗಳನ್ನು ಜಾರಿಗೊಳಿಸಬೇಕು; ಆದರೆ ಆಸ್ತಿ ಮುಟ್ಟುಗೋಲು ಹಾಕುವಂತಹ ತೀವ್ರ ಕಠಿಣ ಕ್ರಮಗಳು ಬೇಡ" ಎಂದು ಅಭಿಪ್ರಾಯ ಮಂಡಿಸಲಾಗಿದೆ! ದೊಡ್ಡ ಬಂಡವಾಳಗಾರರ ಹಾಗೂ ವ್ಯಾಪಾರಸ್ಥರ ಕಪಿಮುಷ್ಟಿಯಲ್ಲಿರುವ ದೊಡ್ಡ ಪತ್ರಿಕೆಗಳ ಧೋರಣೆ ಈ ರೀತಿಯದು !

| | | | | |
|---|---|---|---|---|
| | ಹಾಗೂ ಐರನ್ ಓರ್ಸ್ ಲಿ.(ಬಳ್ಳಾರಿ) | ಹಾಗೂ ಇತರರು | | |
| ೧೭. | ವಿಷ್ಣು ಫೋರ್ಜ್ ಲಿ. (ಮೈಸೂರು) | ಎಂ. ಎಸ್ ರಾಮಯ್ಯ ಎಂ. ಎಸ್. ಸಂಪಂಗಿ ರಾಮಯ್ಯ ಎಂ. ಆರ್. ಜಯರಾಮ್ | ೧೧.೦೬ | ಭಾರತೀಯ ಸ್ಟೇಟ್ ಬ್ಯಾಂಕ್ |
| ೧೮. | ಒರಿಸ್ಸ ಸ್ಪಿನ್ನಿಂಗ್ ಲಿ. (ಕಲ್ಕತ್ತ) | ನಿರ್ಮಲ್ ಕುಮಾರ್ ಗೋಯೆಂಕ ಮಹವೀರ ಪ್ರಸಾದ್ ಗೋಯೆಂಕ | ೨೪.೧೦ | ಅಲಹಾಬಾದ್ ಬ್ಯಾಂಕ್ |
| ೧೯. | ಪ್ರೀಮಿಯರ್ ವಿನ್ಯಲ್ ಫ್ಲೋರಿಂಗ್ ಲಿ. (ಸಿಕಂದರಾಬಾದ್) | ಡಿ. ಎನ್. ಗೋಯೆಂಕ ಮತ್ತು ಇತರರು | ೧೧೦.೬೮ | ಕೆನರಾ ಬ್ಯಾಂಕ್ |
| ೨೦. | ಪುನಲೂರ್ ಮಿಲ್ಸ್ ಲಿ. (ಕೇರಳ) | ಎಲ್. ಎಸ್. ದಾಲ್ಮಿಯ ಹಾಗೂ ಇತರರು | ೧೨.೦೫ | ಕೆನರಾ ಬ್ಯಾಂಕ್ |
| ೨೧. | ಜೆ. ಕೆ. ಸಿಂಥೆಟಿಕ್ಸ್ ಲಿ. (ಕಾನ್ಪುರ) | ಜಿ. ಎಚ್. ಸಿಂಘಾನಿಯ ಹಾಗೂ ಇತರರು | ೩೮.೩೦ | ಬ್ಯಾಂಕ್ ಆಫ್ ಇಂಡಿಯ |
| ೨೨. | -"- | -"- | ೮೨.೫೦ | ಭಾರತೀಯ ಸ್ಟೇಟ್ ಬ್ಯಾಂಕ್ |
| ೨೩. | ಮೋದಿ ಎಸ್. ಪಿ. ಜಿ. ಹಾಗೂ ಡಬ್ಲ್ಯು.ಎನ್.ಜಿ. ಮಿಲ್ಸ್ ಲಿ. ಗಜಿಯಾಬಾದ್ | ಎಸ್. ಕೆ. ಮೋದಿ ಹಾಗೂ ಇತರರು | ೧೨೫ . ೨೬ | ಪಂಜಾಬ್ ನ್ಯಾಷನಲ್ ಬ್ಯಾಂಕ್ |
| ೨೪. | ಮೋದಿ ಟೆಲಿಫೈಬರ್ಸ್ ಲಿ. ಮೋದಿನಗರ | -"- | ೧೪.೦೫ | ಪಂಜಾಬ್ ನ್ಯಾಷನಲ್ ಬ್ಯಾಂಕ್ |
| ೨೫. | ಮೋದಿ ಕಾರ್ಪೆಟ್ಸ್ ಲಿ. ಮೋದಿನಗರ | -"- | ೨೧.೭೪ | -"- |
| ೨೬. | ಮಫತ್‌ಲಾಲ್ ಇಂಜಿನಿಯರಿಂಗ್ ಇಂಡಿಯ ಲಿ. | ಅರವಿಂದ್. ಎನ್. ಮಫತ್‌ಲಾಲ್ ಹಾಗೂ ಇತರರು | ೭೪.೬೧ | -"- |
| ೨೭. | ಜಿಯಾಜಿರಾವ್ ಕಾಟನ್ ಮಿಲ್ಸ್ ಗ್ವಾಲಿಯರ್ | ಎಸ್. ಪಿ. ಕೈತಾನ್ ಸಿ. ಕೆ. ಬಿರ್ಲಾ ಹಾಗೂ ಇತರರು | ೧೦.೭೨ | ಭಾರತೀಯ ಸ್ಟೇಟ್ ಬ್ಯಾಂಕ್ |
| ೨೮. | ಐಡಿಯಲ್ ಜಾವ (ಇಂಡಿಯ) ಲಿ. ಮೈಸೂರು | ಇರಾನಿ ಮತ್ತಿತರರು | ೩೯.೫೬ | ಇಂಡಿಯನ್ ಓವರ್ಸೀಸ್ ಬ್ಯಾಂಕ್ |
| ೨೯. | ನಮಸ್ತೇ ಎಕ್ಸ್‌ಪೋರ್ಟ್ಸ್ ಲಿ. | ಕೆ. ನಾರಾಯಣ ಭಟ್ ಹಾಗೂ ಇತರರು | ೧೦.೭೫ ೨೪.೬೫ | ಕೆನರಾ ಬ್ಯಾಂಕ್ ಭಾರತೀಯ ಸ್ಟೇಟ್ ಬ್ಯಾಂಕ್ |

ಈ ಮರುಪಾವತಿಯಾಗದ ಸಾಲಗಳ ಬಗ್ಗೆ ನಮ್ಮ ದೇಶದ ಬ್ಯಾಂಕ್ ನೌಕರರು ಅಖಿಲ ಭಾರತ ಬ್ಯಾಂಕ್ ನೌಕರರ ಸಂಘದ ನೇತೃತ್ವದಲ್ಲಿ ಹೋರಾಟ ನಡೆಸುತ್ತಿದ್ದಾರೆ. ದೇಶದಾದ್ಯಂತ ಸಾರ್ವಜನಿಕರಿಗೆ ಈ ಮರುಪಾವತಿಯಾಗದೆ ಉಳಿದಿರುವ ಸಾಲಗಳ ಬಗ್ಗೆ ಮನವರಿಕೆ ಮಾಡಿಕೊಡಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಬ್ಯಾಂಕ್ ನೌಕರರು ಇದೇ ಮಾರ್ಚ್ ೮ರಂದು ದೆಹಲಿಯಲ್ಲಿ ಬೃಹತ್ ರ್‍ಯಾಲಿ ಏರ್ಪಡಿಸಿ, ರಾಷ್ಟ್ರಾಧ್ಯಕ್ಷರು ಈ ವಿಷಯದಲ್ಲಿ ತುರ್ತಾಗಿ ಸೂಕ್ತವಾದ ಕಠಿಣ ಕ್ರಮಗಳನ್ನು ಜಾರಿಗೊಳಿಸಬೇಕೆಂದು ಆಗ್ರಹಿಸಿದ್ದಾರೆ. ಬ್ಯಾಂಕ್ ಗೌಪ್ಯತೆಯನ್ನು ಗಾಳಿಗೆ ತೂರಿ, ಸುಮಾರು ೪೭೦೦ ಬ್ಯಾಂಕ್ ಸುಸ್ತಿದಾರರ ಹೆಸರುಗಳನ್ನು ಹಾಗೂ ಅವರಿಂದ ಮರುಪಾವತಿಯಾಗಬೇಕಾಗಿರುವ ಸಾಲಗಳ ಮೊತ್ತಗಳುಳ್ಳ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಬ್ಯಾಂಕ್ ನೌಕರರು ಈ ಬೇಡಿಕೆಗಳನ್ನು ಮಂಡಿಸಿದ್ದಾರೆ : ೧) ಬ್ಯಾಂಕ್‌ಗಳು ರೂ. ೧೦ಲಕ್ಷಕ್ಕೂ ಮೀರಿದ ಸುಸ್ತಿದಾರರಾಗಿರುವವರ ಹೆಸರುಗಳನ್ನು ಬಹಿರಂಗಗೊಳಿಸಬೇಕು. ೨) ಬ್ಯಾಂಕ್ ಸಾಲ ಮರುಪಾವತಿ ಮಾಡದೆಯಿರುವುದನ್ನು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಬೇಕು ಹಾಗೂ ಅಂತಹ ಸುಸ್ತಿದಾರರ ಮೇಲೆ ಶಿಸ್ತಿನ ಕ್ರಮ ಜರುಗಿಸಬೇಕು. ೩) ಮರುಪಾವತಿಯಾಗದ ಬ್ಯಾಂಕ್ ಸಾಲಗಳ ತ್ವರಿತ ವಸೂಲಾತಿಗಾಗಿ ವಿಶೇಷ ವಸೂಲಾತಿ ನ್ಯಾಯಾಲಯಗಳನ್ನು ಸ್ಥಾಪಿಸಬೇಕು.

ನಮ್ಮ ದೇಶದ ಜನತೆ ಬ್ಯಾಂಕ್ ನೌಕರರ ಈ ಹೋರಾಟಕ್ಕೆ ಬೆಂಬಲ ನೀಡಿದಾಗಲೇ ಸರ್ಕಾರದಿಂದ ಈ ಭಾರಿ ಸಾಲಗಳ ವಿಷಯದಲ್ಲಿ ಸಕಾರಾತ್ಮಕ ನಿರ್ಧಾರಗಳನ್ನು ನಿರೀಕ್ಷಿಸಬಹುದು. ಸಾರ್ವಜನಿಕರ ಹಣ ಸೂರೆ ಮಾಡಿರುವ ಭಾರಿ ಬಂಡವಳಿಗ ತಿಮಿಂಗಲಗಳ ಹಾವಳಿ ನಿಲ್ಲದಿದ್ದರೆ ನಮ್ಮ ಸಂಪತ್ತು ಇನ್ನೂ ಅಧಿಕವಾಗಿ ಲೂಟಿಯಾದೀತು, ಎಚ್ಚರಿಕೆ.

ಬರೆದವರು : ಸಮೀಕ್ಷಕ

ಆಧಾರ : ಕರ್ನಾಟಕ ಪ್ರದೇಶ ಬ್ಯಾಂಕ್ ನೌಕರರ ಒಕ್ಕೂಟದ ಪ್ರಕಟಣೆ.

## ತಲೆದಂಡ !

*ಆ ಗುಡಿಸಲಿಗೆ ಗೋಡೆಗಳಿರಲಿಲ್ಲ*
*ಕಂಡ ಕನಸುಗಳನ್ನೇ ಸೇರಿಸಿಟ್ಟು*
*ಕುರುಚಲು ನೆನಪುಗಳ ಹಾಸಿ*
*ನಿದ್ದೆ ಹೋಗುತ್ತಿದ್ದ*



*ಅಬ್ಬ ಬೀಡಿ ಹೊತ್ತಿಸಿದಾಗ*
*ಬೀಡಿಕಟ್ಟುವ ಅಮ್ಮಿ*
*ಘಾಟಿಗೆ ರಕ್ತ ಕಕ್ಕಿದಾಗ*
*ಕಿಸುಗಣ್ಣೊಳಗೇ ಎಚ್ಚರಾಗುತ್ತಿದ್ದ*

*ಮಸ್‌ಜೀದಿನ ಕೂಗಿಗೆ ಬೆಚ್ಚಿಬಿದ್ದರೆ*
*ತೊಳೆದ ಮುಖದ ತಲೆ ಮೇಲೆ*
*ಅಮ್ಮಿ ಹೆಣೆದ ಟೋಪಿ ಅವಶೇಷ*
*ನಮಾಜಿಗೆ ಕುಳಿತವನಿಗೆ*
*ಪವಾಡದ ಕಥಾ ಕೋಶ*

*ರೇಡಿಯಂ ಲೇಪಿತ*
*ಆ ಮಸ್‌ಜೀದಿನ ಗಡಿಯಾರ*
*ಅದೇ ಅಂಕಿಗಳ ಹಾದಿಯಲ್ಲಿ*
*ದೊಡ್ಡ ಮುಳ್ಳು ಸಣ್ಣ ಮುಳ್ಳು*

*ಗೊಂದಲಗೊಳ್ಳುತ್ತಾನೆ ;*
*ಅಂಕಿ ಹನ್ನೆರಡು*
*ಗಂಟೆ ಇಪ್ಪತ್ತ ನಾಲ್ಕು !?*
*ಪ್ರಶ್ನೆ ಕೇಳುವ ಹಾಗಿಲ್ಲ*
*'ಹೇಗೆ ?'*

*ಕೇಳಿದರೆ ತಲೆದಂಡ !*

ಶಿ. ಜು. ಪಾಶ
ಇ/ಮ, ಅಮೀರ್, ಮೂರನೇ ತಿರುವು
ಕೆರೆ ಅಂಗಳ, ಮಿಳಘಟ್ಟ, ಶಿವಮೊಗ್ಗ



# ಸುಧಾರಣೆಗಳ ಹಾದಿಯಲ್ಲಿ ವೆನೆಜುವೇಲ

ಸೀಯಾರ್ಕೆ

ವೆನೆಜುವೇಲಾದಲ್ಲಿ ಇತ್ತೀಚೆಗೆ ನಡೆದ ಮಹಾ ಚುನಾವಣೆಗಳಲ್ಲಿ ಹ್ಯೂಗೊ ಚಾವೆಜ್ ರಾಷ್ಟ್ರಾಧ್ಯಕ್ಷರಾಗಿ ಪುನರಾಯ್ಕೆಗೊಂಡಿದ್ದಾರೆ. (ಚಿತ್ರ ನೋಡಿ) ಆರ್ಥಿಕ ಬಿಕ್ಕಟ್ಟಿನಿಂದ ಕೂಡಿರುವ ದಕ್ಷಿಣ ಅಮೆರಿಕಾದ ಈ ದೇಶದಲ್ಲಿ ''ಸಾಮಾಜಿಕ ಕ್ರಾಂತಿ'' ಉಂಟು ಮಾಡುವ ಭರವಸೆ ನೀಡಿರುವ ಚಾವೆಜ್ ಎಡಪಂಥೀಯ ಒಲವುಳ್ಳವರು. ವೆನೆಜುವೇಲ ಕಮ್ಯುನಿಸ್ಟ್ ಪಾರ್ಟಿಯನ್ನೂ ಸೇರಿದಂತೆ ಇತರ ವಾಮಪಕ್ಷಗಳು ಹಾಗೂ ಟ್ರೇಡ್ ಯೂನಿಯನ್‌ಗಳ ಬೆಂಬಲದಿಂದ ಅತ್ಯಧಿಕ ಮತ ಗಳಿಸಿ ಪುನರಾಯ್ಕೆ ಗೊಂಡಿರುವ ಇವರು ದೇಶದ ಮುನ್ನಡೆಗೆ ಯಾವ ಹಾದಿ ತುಳಿಯುತ್ತಾರೆಂಬುದನ್ನು ಕಾದು ನೋಡಬೇಕಾಗಿದೆ. ಕಳೆದ ೧೮ ತಿಂಗಳಿಂದ ಅಧಿಕಾರದಲ್ಲಿರುವ ಹ್ಯೂಗೊ ಚಾವೆಜ್ ೧೯೯೮ರ ಡಿಸೆಂಬರ್ ೬ರಂದು ಕಾರ್ಮಿಕ ವರ್ಗ ಮತ್ತು ರಾಷ್ಟ್ರೀಯ ವಾದಿಗಳ ಸಂಯುಕ್ತ ಬೆಂಬಲದಿಂದ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಗೊಂಡ ನಂತರ ಸುಧಾರಣೆಗಳನ್ನು ತರಲು ಹೊಸ ಸಂವಿಧಾನವನ್ನು ರೂಪಿಸಿದ್ದಾರೆ. ಕ್ಯೂಬಾದ ಮಾದರಿಯಲ್ಲಿ ಹೊಸ ಸಮಾಜವಾದಿ ವ್ಯವಸ್ಥೆ ತರುವುದು ಅವರ ಕಾರ್ಯಕ್ರಮ. ಅವರ ಪುನರಾಯ್ಕೆಯಿಂದ ಈಗಾಗಲೇ ನೆರೆಯ ದೊಡ್ಡಣ್ಣ ಅಮೆರಿಕಕ್ಕೆ ಕಣ್ಣು ಕೆಂಪಾಗಿದೆ.

ಸಾಕಷ್ಟು ತೈಲ ಸಂಪತ್ತಿದ್ದಾಗ್ಯೂ ವೆನೆಜುವೇಲ ಇಂದು ತೀವ್ರವಾದ ಆರ್ಥಿಕ ಮುಗ್ಗಟ್ಟನ್ನು ಅನುಭವಿಸುತ್ತಿದೆ. ೧೯೫೮ರಿಂದ ೪೦ ವರ್ಷಗಳ ಕಾಲ ೧೯೯೮ರವರೆಗೆ ದ್ವಿಪಕ್ಷೀಯ ವ್ಯವಸ್ಥೆಯಲ್ಲಿ ಭ್ರಷ್ಟ ಸರಕಾರ ಹೊಂದಿದ್ದು, ಆಧುನೀಕರಣದ ಹೆಸರಿನಲ್ಲಿ ತೈಲ ವರಮಾನವನ್ನು ಪೋಲು ಮಾಡಿ, ದೇಶವನ್ನು 'ಐ.ಎಂ.ಎಫ್'ನ ಬಾಯಿಗೆ ಹಾಕಿದುವು. 'ಐ.ಎಂ.ಎಫ್.' ಶಿಫಾರಸ್ಸು ಮಾಡಿದ ಉದಾರ ನೀತಿ ದೇಶವನ್ನು ಇನ್ನಷ್ಟು ದುಸ್ಥಿತಿಗೆ ನೂಕಿತು. ೧೯೭೫ರಲ್ಲಿ ದಿನಕ್ಕೆ ೨ ಡಾಲರುಗಳಿಗಿಂತ ಕಡಿಮೆ ವರಮಾನವಿದ್ದವರ ಸಂಖ್ಯೆ ಶೇ. ೩೩ ಇದ್ದದ್ದು ೧೯೯೭ರಲ್ಲಿ ಶೇ. ೬೭ಕ್ಕೇರಿತ್ತು. ಒಂದು ಡಾಲರಿಗಿಂತ ಕಡಿಮೆ ವರಮಾನವಿದ್ದವರ ಸಂಖ್ಯೆ ಶೇ. ೧೩ರಿಂದ ೩೬ಕ್ಕೇರಿತು. ಹಾಗಾಗಿ ಶೇ. ೮೦ರಷ್ಟು ಜನ ಇಂದು ಬಡತನದಲ್ಲಿ ಜೀವಿಸುತ್ತಿದ್ದಾರೆ. ಭ್ರಷ್ಟ ಆಡಳಿತೆಯ ವಿರುದ್ಧ ೧೯೯೨ರಲ್ಲಿ ಸೇನಾಧಿಕಾರಿಯಾಗಿದ್ದ ಕರ್ನಲ್ ಹ್ಯೂಗೊ ಚಾವೆಜ್, ಇತರ ಸೇನಾಧಿಕಾರಿಗಳ ಜೊತೆಗೂಡಿ ನಡೆಸಿದ ಬಂಡಾಯ ವಿಫಲಗೊಂಡಿತು. ಚಾವೆಜ್ ಮತ್ತು ಅವರ ಅನುಯಾಯಿಗಳು ಇದರಿಂದ ಎರಡು ವರ್ಷ ಕಾರಾಗೃಹದಲ್ಲಿ ಕಳೆಯಬೇಕಾಯಿತು. ಎರಡು ವರ್ಷಗಳಲ್ಲಿ ಜಾವೆಜ್ ಭ್ರಷ್ಟ ಸರಕಾರ ಕಿತ್ತೊಗೆಯಲು ಸೈನ್ಯದ ಜೊತೆಗೆ ಜನತೆಯ ಬೆಂಬಲವೂ ಅಗತ್ಯವೆಂಬುದನ್ನು ಅರಿತುಕೊಂಡರು. ಕಾರಾಗೃಹದಿಂದ ಹೊರಗೆ ಬಂದ ಮೇಲೆ ಪುರೋಗಾಮಿ ಟ್ರೇಡ್ ಯೂನಿಯನ್‌ಗಳು ಹಾಗೂ ಇತರ ಎರಡು ಪಕ್ಷಗಳ ಜೊತೆ ಕೂಡಿಕೊಂಡು ಪ್ರತಿಗಾಮಿ ಪಕ್ಷಗಳನ್ನು ಎದುರಿಸಲು ಮೂರನೇ ರಂಗ ನಿರ್ಮಿಸಿ ೧೯೯೮ರ ಡಿಸೆಂಬರ್‌ನಲ್ಲಿ ಅಧಿಕಾರಕ್ಕೆ ಬಂದರು. 'ಐದನೇ ಗಣರಾಜ್ಯಕ್ಕಾಗಿ ಚಳವಳಿ' ಹೆಸರಿನಲ್ಲಿ ಅವರು ರೂಪಿಸಿದ ರಂಗದಲ್ಲಿ ಎಡಪಂಥೀಯ ಟ್ರೇಡ್ ಯೂನಿಯನ್ ನಾಯಕರು, ಸಮುದಾಯ ತಂಡಗಳವರು, ಕಮ್ಯುನಿಸ್ಟ್ ಪಾರ್ಟಿ ಹಾಗೂ ಇತರ ಎಡಪಂಥೀಯ ಚಳವಳಿಯ ನಾಯಕರು ಇದ್ದಾರೆ.

ವೆನೆಜುವೇಲ ದಕ್ಷಿಣ ಅಮೆರಿಕದ ಅತ್ಯಂತ ಸಂಪದ್ಭರಿತ ದೇಶ. ಬ್ರೆಜಿಲ್, ಕೊಲಂಬಿಯ ಮತ್ತು ಗಯಾನ ಅದರ ಗಡಿಯಲ್ಲಿರುವ ಇತರ ದೇಶಗಳು. ಸುಮಾರು ೯,೧೨,೦೦೦ ಚ.ಕಿ.ಮೀ. ವಿಸ್ತಾರವುಳ್ಳ ಈ ದೇಶ ಗಾತ್ರದಲ್ಲಿ ಜರ್ಮನಿ ಮತ್ತು ಫ್ರಾನ್ಸ್ ಎರಡೂ ದೇಶಗಳ ಒಟ್ಟು ವಿಸ್ತೀರ್ಣಕ್ಕಿಂತ ದೊಡ್ಡದು. ಮಧ್ಯಪ್ರಾಚ್ಯಕ್ಕಿಂತಲೂ ಇಲ್ಲಿ ಅತಿ ಹೆಚ್ಚು ತೈಲ ಸಂಪತ್ತಿದೆ ಎಂದು ಅಂದಾಜು. ಆದರಿಂದಲೇ ಅಮೆರಿಕಕ್ಕೆ ಇದು ಬಹುಮುಖ್ಯವಾದ ದೇಶ. ಜನಸಂಖ್ಯೆ ೨,೧೩,೭೮,೦೦೦. ಇಲ್ಲಿನ ಮೂಲ ನಿವಾಸಿಗಳು ಇಂಡಿಯನ್ನರು. ಕ್ರಿ. ಶ. ೧೪೯೮ರಲ್ಲಿ ಸ್ಪ್ಯಾನಿಷ್ ನಾವಿಕ ಕೊಲಂಬಸ್ ಈ ದೇಶದ ತೀರ ಪ್ರವೇಶಿಸಿದ ಮೊದಲ ಯುರೋಪಿನ ನಾಗರಿಕ. ೧೪೯೯ರಲ್ಲಿ ಇಲ್ಲಿಗೆ ಬಂದ ಸ್ಪ್ಯಾನಿಷ್ ಯೋಧ ಈ ದೇಶದ ತೀರ ಪ್ರದೇಶದಲ್ಲಿ ಸುತ್ತಾಡಿ ಅದಕ್ಕೆ ವೆನೆಜುವೇಲ ಅಥವಾ ಚಿಕ್ಕ ವೆನಿಸ್ (ಲಿಟಲ್ ವೆನಿಸ್) ಎಂದು ನಾಮಕರಣ ಮಾಡಿದ. ಅಲ್ಲಿಂದ ಸ್ಪ್ಯಾನಿಷರ ವಲಸೆ ಪ್ರಾರಂಭ. ೧೫೨೦ರಿಂದಾಚೆಗೆ ಅಧಿಕ ಸಂಖ್ಯೆಯಲ್ಲಿ ಸ್ಪ್ಯಾನಿಷರು ಇಲ್ಲಿ ನೆಲೆಸತೊಡಗಿದರು. ಸ್ಥಳೀಯ ಜನರ ಮೇಲೆ ದೌರ್ಜನ್ಯ ನಡೆಸಿ ಅನತಿ ಕಾಲದಲ್ಲೇ ಅವರನ್ನು ಗುಲಾಮರನ್ನಾಗಿಸಿಕೊಂಡರು.

ಸುಮಾರು ಮುನ್ನೂರು ವರ್ಷಗಳ ಕಾಲ ವೆನೆಜುವೇಲ ಸ್ಪೇನಿನ ವಸಾಹತಾಗಿತ್ತು. ವಸಾಹತು ಆಳ್ವಿಕೆ ಕಾಲದಲ್ಲಿ ಈಗಿನ ರಾಜಧಾನಿ ಕ್ಯಾರಕಸ್ ಕಡಲ್ಗಳ್ಳರಿಗೆ, ಕಳ್ಳ ಸಾಗಾಣಿಕೆಗೆ, ಗುಲಾಮರ ಮಾರಾಟಕ್ಕೆ ಕೇಂದ್ರವಾಗಿತ್ತು. ಸ್ಪೇನಿನ ಪ್ರತಿಸ್ಪರ್ಧಿಗಳಾದ ಇಂಗ್ಲಿಷರು ಮತ್ತು ಡಚ್ಚರೂ ಈ ಚಟುವಟಿಕೆಗಳಲ್ಲಿ ಹಿಂದೆ ಬಿದ್ದಿರಲಿಲ್ಲ. ವೆನೆಜುವೇಲದ ಫಲವತ್ತಾದ ಭೂಮಿಯನ್ನು ವಶಪಡಿಸಿಕೊಂಡ ಯುರೋಪಿಯನ್ನರು ಆಫ್ರಿಕಾದಿಂದ ಗುಲಾಮರನ್ನು ತಂದು ತಮ್ಮ ಪ್ಲಾಂಟೇಷನ್ನುಗಳಲ್ಲಿ ದುಡಿಸಿಕೊಳ್ಳತೊಡಗಿದರು.

ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಸ್ಪ್ಯಾನಿಷ್ ಆಳ್ವಿಕೆ ವಿರುದ್ಧ ಹೋರಾಟ ಪ್ರಾರಂಭವಾಯಿತು. ೧೮೧೧ರಲ್ಲಿ ಮಿರಾಂಡ ಎಂಬುವನ ನಾಯಕತ್ವದಲ್ಲಿ ಜರುಗಿದ ಬಂಡಾಯದಲ್ಲಿ ಸ್ಪ್ಯಾನಿಷ್ ಗವರ್ನರನನ್ನು ಅಧಿಕಾರದಿಂದ ಉರುಳಿಸಿ ಗಣರಾಜ್ಯ ಘೋಷಿಸಲಾಯಿತು. ಆದರೆ ಇದು ಹೆಚ್ಚು ದಿನ ಉಳಿಯಲಿಲ್ಲ. ೧೮೧೨ರಲ್ಲಿ ಮಿರಾಂಡ ಸ್ಪ್ಯಾನಿಷರಿಗೆ ಶರಣಾಗತನಾಗಿ ಕಾರಾಗೃಹದಲ್ಲಿ ಮಡಿದ. ಅನಂತರ ಸಿಮೋನ್ ಬೊಲಿವರ್ ನೇತೃತ್ವದಲ್ಲಿ ಜರುಗಿದ ವಿಮೋಚನಾ ಚಳವಳಿಯಿಂದ ವೆನೆಜುವೇಲ ವಸಾಹತು ಶಾಹಿ ಸಂಕೋಲೆ ಕಳಚಿಕೊಂಡು ೧೮೩೦ರಲ್ಲಿ ಸ್ವತಂತ್ರ ರಾಷ್ಟ್ರವಾಯಿತು. ಸ್ವಾತಂತ್ರ್ಯಾನಂತರ ೧೮೫೪ರಲ್ಲಿ ಗುಲಾಮ ಪದ್ಧತಿಯನ್ನು ತೊಡೆದುಹಾಕಲಾಯಿತು. ೧೯ನೇ



*ಮತ್ತೆ ಮನೆಗೆ ವಾಪಸು ಹೋಗಬಾರದೂಂತಿದೀನಿ ರಾತ್ರಿವರೆಗಾದ್ರೂ,*

ಶತಮಾನದುದ್ದಕ್ಕೂ ವೆನೆಜುವೇಲ ಮುಖ್ಯವಾಗಿ ಬಂಡವಾಳಶಾಹಿ ದೇಶಗಳಿಗೆ ಕಚ್ಚಾ ಮಾಲು ಒದಗಿಸುವುದರಲ್ಲಿ ನಿರತವಾಗಿತ್ತು. ಕಾಫಿ ಮತ್ತು ಕೃಷಿ ಪದಾರ್ಥಗಳನ್ನು ರಫ್ತು ಮಾಡುತ್ತಿತ್ತು. ದೇಶದ ಆಡಳಿತ ಸರ್ವಾಧಿಕಾರಿಗಳ ಹಿಡಿತದಲ್ಲಿತ್ತು.

೧೯೧೮ರಲ್ಲಿ ತೈಲ ನಿಕ್ಷೇಪ ಪತ್ತೆಯಾದ ಮೇಲೆ ತೈಲೋತ್ಪಾದನೆಗಾಗಿ ದೇಶೀ ತೈಲ ಕಂಪೆನಿಗಳಿಗೆ ಪರವಾನಗಿ ನೀಡಲಾಯಿತು. ದೇಶದ ಸರ್ವಾಧಿಕಾರಿಯಾಗಿದ್ದ ವಿನ್ಸೆಂಟ್ ಗೋಮೆಜ್ ತೈಲ ಮಾರಾಟದಿಂದ ಬಂದ ಹಣವನ್ನು ಸೂರೆ ಮಾಡಿದ. ೧೯೦೮ರಿಂದ ೧೯೩೫ರವರೆಗೆ ಕ್ರೂರತೆಯಿಂದ ಆಡಳಿತ ನಡೆಸಿದ ಗೋಮೆಜ್‌ನ ಮರಣ ವೆನೆಜುವೇಲದ ರಾಜಕೀಯ ಇತಿಹಾಸದಲ್ಲಿ ಒಂದು ಹೊಸ ತಿರುವನ್ನು ತಂದಿತು. ಅನಂತರ ಅಧಿಕಾರಕ್ಕೆ ಬಂದ ಲೋಪೆಜ್ ಸರಕಾರ ಪ್ರತಿಗಾಮಿ ನೀತಿಯನ್ನೇ ಮುಂದುವರೆಸಿಕೊಂಡು ಹೋಯಿತು. ವೆನೆಜುವೇಲದ ಕಮ್ಯುನಿಸ್ಟ್ ಪಾರ್ಟಿ ಹಾಗೂ ಪ್ರಜಾಪ್ರಭುತ್ವಕ್ಕಾಗಿ ಶ್ರಮಿಸುತ್ತಿದ್ದ ಪುರೋಗಾಮಿ ಪಕ್ಷಗಳು ನಿಷೇಧಿಸಲ್ಪಟ್ಟಿದ್ದುವು. ೧೯೪೧ರಿಂದ ೧೯೪೫ರವರೆಗೆ ಮೆದಿನಾ ಅಂಗಾರಿಕಾ ಅಧ್ಯಕ್ಷತೆಯಲ್ಲಿದ್ದ ಸರಕಾರ ತಕ್ಕ ಮಟ್ಟಿಗೆ ಪುರೋಗಾಮಿಯಾಗಿತ್ತು. ಎಡಪಂಥೀಯ ಪಕ್ಷಗಳ ಮೇಲಿನ ನಿಷೇಧಾಜ್ಞೆಯನ್ನು ರದ್ದುಗೊಳಿಸಿ ಭೂ ಸುಧಾರಣೆಗಳನ್ನು ಜಾರಿಗೆ ತಂದಿತು.

ಎರಡನೇ ಮಹಾಯುದ್ಧದ ನಂತರ ರಹಸ್ಯ ಮತದಾನ ಪದ್ಧತಿಯನ್ನು ಜಾರಿಗೆ ತರಲು ರೊಮುಲೆ ಬೆಟಾನುಕೋರ್ಟಿನ ಸರಕಾರ ಪ್ರಯತ್ನಿಸಿತು. ಸರಕಾರ ಪುರೋಗಾಮಿ ಭೂಸುಧಾರಣಾ ಕಾರ್ಯಕ್ರಮ ಜಾರಿಗೆ ತಂದಿತು. ಆದರೆ ೧೯೪೮ರಲ್ಲಿ ಈ ಸರಕಾರ ಉರುಳಿ ಸರ್ವಾಧಿಕಾರಿ ಆಡಳಿತೆ ಬಂದಿತು. ೧೯೫೮ರವರೆಗೆ ಸರ್ವಾಧಿಕಾರಿ ಆಡಳಿಕೆ ಇದ್ದು, ಅನಂತರ ಮತ್ತೆ ಬೆಟಾನುಕೋರ್ಟ್ ನೇತೃತ್ವದ ಆಕ್ಸಿನ್ ಡೆಮಾಕ್ರಟಿಕ್ ಪಕ್ಷ ಅಧಿಕಾರಕ್ಕೆ ಬಂದಿತು. ಅಲ್ಲಿಂದ ೧೯೯೮ರವರೆಗೆ ವೆನೆಜುವೇಲದಲ್ಲಿ ಅಧಿಕಾರ ಮತ್ತೆ ಆಕ್ಸಿನ್ ಡೆಮಾಕ್ರಟಿಕ್ ಮತ್ತು ಸೋಷಿಯಲ್ ಕ್ರಿಶ್ಚಿಯನ್ ಪಕ್ಷ, ಈ ಎರಡು ಬಲ ಪಂಥೀಯ ಮಾರ್ಹುವಾ ಪಾರ್ಟಿಗಳ ಕೈಯಲ್ಲಿದ್ದಿತು.

ನಲವತ್ತು ವರ್ಷಗಳು ದೇಶದ ಆಡಳಿತ ನಡೆಸಿದ ಈ ಪ್ರತಿಗಾಮಿ ಪಕ್ಷಗಳು ಭ್ರಷ್ಟಾಚಾರದಲ್ಲಿ ಮುಳುಗಿದ್ದು ದೇಶವನ್ನು ಆರ್ಥಿಕವಾಗಿ ದಿವಾಳಿ ಮಾಡಿದುವು. ವೆನೆಜುವೇಲ ಸಾಲದಲ್ಲಿ ಮುಳುಗಿತು. ಐ.ಎಂ.ಎಫ್.ನ ದವಡೆಗೆ ಸಿಕ್ಕಿತು. ೧೯೮೯ರಲ್ಲಿ 'ಐ.ಎಂ.ಎಫ್.' ಶಿಫಾರಸ್ಸಿನ ಮೇಲೆ ತಂದ ಸುಧಾರಣೆಗಳಿಂದ ಆಹಾರ ಪದಾರ್ಥಗಳು ಮತ್ತು ಅಗತ್ಯ ವಸ್ತುಗಳ ಬೆಲೆ ವಿಪರೀತ ಏರಿ ಜನಜೀವನ ದುಸ್ತರವಾಯಿತು. ಪ್ರತಿಭಟನಾ ಪ್ರದರ್ಶನಗಳು, ಮುಷ್ಕರ ಹೋರಾಟಗಳು ದಿನನಿತ್ಯದ ಮಾತಾಯಿತು. ರಾಜಕೀಯ ಭ್ರಷ್ಟಾಚಾರದ ವಿರುದ್ಧ ಹೋರಾಟ ತೀವ್ರಗೊಂಡಿತು. ೧೯೯೩ರಲ್ಲಿ ಸೋಷಿಯಲ್ ಕ್ರಿಶ್ಚಿಯನ್ ಪಾರ್ಟಿಯ ರಾಫೆಲ್ ಕಾಲ್ಡೆರಾ ಐ.ಎಂ.ಎಫ್. ಸೂಚಿಸಿದ್ದ ಇನ್ನೊಂದು ಸುಧಾರಣೆ ಜಾರಿಗೆ ತರಲು ಪ್ರಯತ್ನಿಸಿದ. ಆದರೆ ಇದೂ ಕೂಡ ಫಲಿಸಲಿಲ್ಲ. ಮತ್ತಷ್ಟು ಪ್ರತಿಭಟನೆಗಳು, ಮುಷ್ಕರಗಳು ಮುಂದುವರಿದುವು.

ಈಗ ಅತ್ಯಧಿಕ ಬಹುಮತದಿಂದ ಆಯ್ಕೆಗೊಂಡಿರುವ ಹ್ಯೂಗೊ ಚಾವೆಜ್ ವೆನೆಜುವೇಲವನ್ನು ಆರ್ಥಿಕ ಬಿಕ್ಕಟ್ಟಿನಿಂದ ಬಿಡುಗಡೆ ಮಾಡುವ ಭರವಸೆ ನೀಡಿದ್ದಾರೆ. ಅಪಾರವಾದ ಸಾಲದ ಹೊರೆ ಹೊಂದಿರುವ ವೆನೆಜುವೇಲ ವರ್ಷಕ್ಕೆ ೪ ಬಿಲಿಯ ಡಾಲರುಗಳಷ್ಟು ಸಾಲ ಮರುಪಾವತಿ ಮಾಡಬೇಕಾಗಿದೆ. ಅಮೆರಿಕನ್ ಸಾಮ್ರಾಜ್ಯಶಾಹಿಗಳಿಗೆ ಚಾವೆಜ್ ಈಗಾಗಲೇ ಕಂಟಕವಾಗಿದ್ದಾರೆ. ಚಾವೆಜ್ ಜನಪ್ರಿಯ ಸುಧಾರಣೆಗಳನ್ನು ಜಾರಿಗೆ ತರುವುದಾಗಿ ಘೋಷಿಸಿದ್ದಾಗ್ಯೂ ಎಷ್ಟರಮಟ್ಟಿಗೆ ಅದು ಕಾರ್ಯಗತವಾಗುವುದು ಮತ್ತು ಐ.ಎಂ.ಎಫ್. ಹಾಗೂ ಅಮೆರಿಕದ ಒತ್ತಡಗಳನ್ನು ಎಷ್ಟರಮಟ್ಟಿಗೆ ವಿರೋಧಿಸಲಾಗುವುದು ಎಂಬುದನ್ನು ಕಾಲವೇ ನಿರ್ಣಯಿಸುತ್ತದೆ. ಆದರೆ ವೆನೆಜುವೇಲದ ಜನತೆ ದೀರ್ಘಕಾಲದ ಭ್ರಷ್ಟ ಆಡಳಿತ ಅನುಭವಿಸಿ ಈಗ ಎಚ್ಚತ್ತಿರುವುದು ಮುಂದಿನ ಬೆಳವಣಿಗೆಗೆ ಶ್ರೀ ರಕ್ಷೆ.

*('ಹೊಸತು'ವಿಗಾಗಿಯೇ ಈ ಲೇಖನವನ್ನು ಬರೆದವರು ಶ್ರೀ ಮುರಳಿಕುಂಬ್ಳೆ. ಅಮೆರಿಕಾದಲ್ಲಿ ಇಂಜನಿಯರಿಂಗ್ ಕನ್ಸಲ್‌ಟೆಂಟ್ ಆಗಿ ಕೆಲಸ ಮಾಡುತ್ತಿರುವ ಇವರು ರಾಜಕೀಯ - ಆರ್ಥಿಕ ವಿಶ್ಲೇಷಣೆಗಳಲ್ಲಿ ಪರಿಣತರು. ಅವರ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಶ್ರೀ ಸೀಯಾರ್ಕೆ.)*

ಸಾಮ್ರಾಜ್ಯಶಾಹಿ ಪರಿಕಲ್ಪನೆ ಹಾಗೂ ಸಮಾಜದಲ್ಲಿನ ಶೋಷಣೆಯ ವಿರುದ್ಧ ಹೋರಾಟ ನಡೆಸಿದ ಹೋರಾಟಗಾರ, ಪ್ರಗತಿಶೀಲ ಉರ್ದುಕವಿ ಸರ್ದಾರ್ ಜಾಫ್ರಿ ನಮ್ಮ ಮಧ್ಯೆ ಇನ್ನಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿನ ಅತ್ಯುನ್ನತ ಪ್ರಶಸ್ತಿಯಾದ ಜ್ಞಾನಪೀಠವನ್ನು ಪಡೆದ ಜಾಫ್ರಿ, ಐಷಾರಾಮಿ ಜೀವನ ನಡೆಸಲಿಲ್ಲ. ಆದರೆ ಶೋಷಿತರ, ಕೊಳಗೇರಿಗಳ, ಕೋಮುವಾದದ ಹೀಗೆ ಹತ್ತು ಹಲವಾರು ವಿಷಯಗಳ ಕುರಿತು ವೈಜ್ಞಾನಿಕ ಸಮಾಜವಾದದ ದೃಷ್ಟಿಕೋನದಲ್ಲಿ ವಿಶ್ಲೇಷಿಸಿದರು.

ಫಿರಾಕ್ ಗೋರಖ್‌ಪುರಿ ಮತ್ತು ಜಿ. ಹೈದರ್‌ರ ನಂತರ ಜ್ಞಾನಪೀಠ ಪ್ರಶಸ್ತಿ ಪಡೆದ ಸರ್ದಾರ್ ಜಾಫ್ರಿ 'ಮಂಜಿಲ್' ಕಥಾ ಸಂಕಲನದೊಂದಿಗೆ ತಮ್ಮ ಉರ್ದು ಸಾಹಿತ್ಯ ಜೀವನ ಆರಂಭಿಸಿ ೧೯೪೩ರಲ್ಲಿ ತಮ್ಮ ಕೃತಿ 'ಪರ್ವಾಜ್'ನೊಂದಿಗೆ ಕವಿತಾ ಕ್ಷೇತ್ರದಲ್ಲಿಯೂ ಅಪ್ರತಿಮ ಖ್ಯಾತಿ ಗಳಿಸಿದರು. ಅವರ ಸಾಹಿತ್ಯ ಕೃತಿಗಳಲ್ಲಿ ಒಂಭತ್ತು ಕವನ ಸಂಗ್ರಹಗಳು ಎರಡು ನಾಟಕಗಳು ಹಾಗೂ ಒಂದು ಕಥಾ ಸಂಕಲನದ ಜೊತೆಗೆ ಹಲವಾರು ವಿಮರ್ಶಾ ಲೇಖನಗಳು ಸೇರಿವೆ.

**ಜನನ - ಬಾಲ್ಯ**

ಜಾಫ್ರಿ ೧೯೧೩ ನವೆಂಬರ್ ೨೯ರಂದು ಉತ್ತರ ಪ್ರದೇಶದ ಬಲರಾಂಪುರದ ದೊಡ್ಡ ಜಮೀನ್ದಾರಿ ಮನೆತನದಲ್ಲಿ ಜನಿಸಿದರು. ಬಾಲ್ಯದಲ್ಲೇ ತುಂಟತನದಿಂದಿದ್ದ ಅವರು ಬರುಬರುತ್ತಾ ಪ್ರಬುದ್ಧತೆಯ ದಾರಿ ಹಿಡಿದಾಗ ಮೊದಲೊಂದು ಕವನ ರಚಿಸಿದರು. ''ನವೆಂಬರ್ ಮೇರಾ ಗೇಹವಾರಾ'' (ನನ್ನ ತಿಂಗಳು ನವೆಂಬರ್): ನವೆಂಬರ್ ಮೇರಾ ಗೇಹವಾರಾ ಹೈ, ಯಹ್ ಮೇರಾ ಮಹೀನಾ ಹೈ. ಇಸೀ ಮಾಹೆಮುನ್ವಾರ್ ಮೇರಿ ಮೇರಿ ಆಂಖೋಂ ನೇ ಪೆಹ್ಲಿ ಬಾರ್ ಸುರಜ್ ಕೆ ಸುನ್ಹೇರಿ ರೌಶ್ನಿ ದೇಖಿ. ಮೇರಿ ಕಾನೋ ಮೇಂ ಪೆಹ್ಲಿ ಬಾರ್ ಇನ್‌ಸಾನ್ ಸಾದಾ ಆಯೇ (ನವೆಂಬರ್ ನನ್ನ ಅಚ್ಚುಮೆಚ್ಚಿನ ತಿಂಗಳು, ಈ ತಿಂಗಳಲ್ಲೇ ಧರೆಗೆ ಬಂದ ನಾನು ಸೂರ್ಯನ ಬಂಗಾರದಂತಹ ಕಿರಣ ನೋಡಿದೆ. ಮೊಟ್ಟ ಮೊದಲು ನನ್ನ ಕಿವಿಗೆ ಮನುಷ್ಯನ ಶಬ್ದಗಳು ತಾಕಿದವು. ಆದಕ್ಕೆ ನನಗೆ ಈ ತಿಂಗಳೇ ಅಚ್ಚುಮೆಚ್ಚು).

೧೯೩೩ರಲ್ಲಿ ಪ್ರೌಢಶಿಕ್ಷಣ ಮುಗಿಸಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅಲಿಗರ್ ಮುಸ್ಲಿಂ ವಿಶ್ವವಿದ್ಯಾಲಯ ಸೇರಿದರು. ವಿದ್ಯಾರ್ಥಿ ಚಳವಳಿಯ ನಾಯಕತ್ವ ವಹಿಸಿ ಹೋರಾಟ ನಡೆಸಿದ ತಪ್ಪಿಗೆ ಅವರನ್ನು ಅಲ್ಲಿಂದ ಹೊರದೂಡಲಾಯಿತು. ನಂತರ ಪದವಿಯನ್ನು ದೆಹಲಿಯ ಕಾಲೇಜೊಂದರಲ್ಲಿ ಮುಗಿಸಿ, ೧೯೪೦ರಲ್ಲಿ ಸ್ನಾತಕೋತ್ತರ ಪದವಿಯನ್ನು ಉತ್ತರ ಪ್ರದೇಶದ ಲಕ್ನೋದಲ್ಲಿ ಪಡೆದುಕೊಂಡರು. ಯಾವ ಅಲಿಗರ್ ಮುಸ್ಲಿಂ ವಿಶ್ವವಿದ್ಯಾಲಯ ಇವರನ್ನು ಹೊರಗೆ ಹಾಕಿತ್ತೋ ಅದೇ ವಿಶ್ವವಿದ್ಯಾಲಯ ೧೯೮೬ರಲ್ಲಿ ಡಿ.ಲಿಟ್. ಪದವಿ ನೀಡಿ ಸನ್ಮಾನಿಸಿತು. ಇದು ಅವರ ಬೆಳವಣಿಗೆಗೆ ಮತ್ತು ನೈಜ ಕಾಳಜಿಯ ಬರವಣಿಗೆಗೆ ದಕ್ಕ ಪ್ರಶಸ್ತಿ ಎನ್ನಬಹುದು.




೧೯೩೬ರಲ್ಲಿ ಹುಟ್ಟಿಕೊಂಡ ಪ್ರಗತಿಶೀಲ ಲೇಖಕರ ಒಕ್ಕೂಟದ ರೂವಾರಿಗಳಲ್ಲೊಬ್ಬರಾಗಿದ್ದ ಸರ್ದಾರ್ ಜಾಫ್ರಿ ಹಲವಾರು ಬಾರಿ ತಮ್ಮ ಹರಿತ ಲೇಖನ ಬರೆದ ತಪ್ಪಿಗೆ ಜೈಲುವಾಸ ಅನುಭವಿಸಿದ್ದೂ ಉಂಟು. ಕೊಳಚೆ ಮಕ್ಕಳ ಸ್ಥಿತಿಗತಿ ಕುರಿತ ಅವರ 'ಖೂನ್ ಕಿ ಲಾಕೇರ್' ಎಂಬ ಪುಸ್ತಕ ಬರೆದ ತಪ್ಪಿಗೆ ಮಹಾರಾಷ್ಟ್ರ ಸರ್ಕಾರ ಇವರನ್ನು ಬಂಧಿಸಿ ಜೈಲಿಗೆ ತಳ್ಳಿತ್ತು. ಆದರೆ ವಿಪರ್ಯಾಸವೆಂದರೆ ಅದೇ ಸರ್ಕಾರ ೧೯೬೭ರಲ್ಲಿ ಉರ್ದು ಸಾಹಿತ್ಯದಲ್ಲಿ ಸಲ್ಲಿಸಿದ ಗಣನೀಯ ಸಾಧನೆಗಾಗಿ ಪದ್ಮಶ್ರೀ ಪುರಸ್ಕಾರಕ್ಕೆ ಅವರನ್ನು ಸೂಚಿಸಿತ್ತು. ಉರ್ದು ಕೇವಲ ಉರ್ದು ಭಾಷಿಕರಿಗಷ್ಟೇ ಅಲ್ಲ, ಉಳಿದ ಇತರೆ ಜನರಿಗೂ ಈ ಭಾಷೆ, ಸಾಹಿತ್ಯ ಹರಡಬೇಕೆಂಬ ಉತ್ಕಟ ಆಸೆ ಹೊತ್ತಿದ್ದ ಜಾಫ್ರಿ ಕೊನೆಗೂ ನಿರಂತರ ಸಂಘರ್ಷಶೀಲ ಜೀವನ ನಡೆಸಿ ಹೋದರು.

**ಅವರ ನಿಲವು, ನೋಟ**

ಹಲವು ಸಿದ್ಧಾಂತ, ಆದರ್ಶಗಳಡಿ ಸಾಹಿತ್ಯ ರಚನೆ ಮಾಡಿದವರು ಬಹು ವಿರಳ. ಅದರಲ್ಲೂ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿ ಅವರು ಮಾಡಿದ ಕಾರ್ಯ ಅಷ್ಟಿಷ್ಟಲ್ಲ. ಬಹುಶಃ ಪ್ರೇಮಚಂದರ ನಿಲುವು ಮತ್ತು ಸರ್ದಾರ್ ಜಾಫ್ರಿ ನಿಲುವು ಒಂದೇ ಎನ್ನಬಹುದು. ವಿದ್ಯಾರ್ಥಿ ದೆಸೆಯಲ್ಲೇ ವಿದ್ಯಾರ್ಥಿ ಚಳವಳಿಗೆ ಧುಮುಕಿದ ಅವರು ಮಾರ್ಕ್ಸ್‌ನ ಹಾಗೂ ಪ್ರಗತಿಪರ ವಿಚಾರಗಳನ್ನು ಮನನ ಮಾಡಿದರು. ಸಮಾಜದಲ್ಲಿನ ಏರುಪೇರು, ಉಚ್ಚ ನೀಚ, ಬಡವ ಬಲ್ಲಿದ ವಿಂಗಡನೆ ಹಾಗೂ ಸಾಮ್ರಾಜ್ಯಶಾಹಿಯ ಅಟ್ಟಹಾಸವನ್ನು ಮೆಟ್ಟಿ ನಿಲ್ಲುವ ಧೈರ್ಯ ತೋರಿದವರು ಸರ್ದಾರ್ ಜಾಫ್ರಿ.

ಅವರ ಅಪಾರ ಸಾಹಿತ್ಯ ರಚನೆಯ ಎಳೆ ಎಳೆಯಲ್ಲೂ ದೀನ ದಲಿತರ ಜೀವ ಅಡಗಿದೆ, ಶೋಷಿತರ ಧ್ವನಿಗೆ ಸಹಮತವಿದೆ. ಅವರೊಟ್ಟಿಗೆ ನಾನು, ನನ್ನ ಸಾಹಿತ್ಯ ಬೆಂಬಲಕ್ಕಿದೆ ಎನ್ನುವ ಸತ್ಯದ ಅಂಶಗಳು ಇಲ್ಲಿ ಕಂಡು ಬರುತ್ತವೆ. ತಮ್ಮ ಲೇಖನ, ಕವನಗಳಲ್ಲಿ ಮನುಷ್ಯನ ಕಥೆವ್ಯಥೆಗಳನ್ನು ಸುಂದರವಾಗಿ ಹಾಗೂ ಒಗಟಾಗಿ ಬಿಂಬಿಸಿದ ಅವರು ಸಮಾಜದಲ್ಲಿ ಸಮಾನತೆ ಮೂಡಿಸಲು ಕೊನೆಯುಸಿರು ಇರುವ ತನಕ ಶ್ರಮಿಸಿ ಕಣ್ಮರೆಯಾದರು. ಆಧುನಿಕ ಸಮಾಜದ ಥಳಕು ಬೆಳಕುಗಳಿಂದ ಭ್ರಮ ನಿರಸನಗೊಂಡಂತಾಗಿದ್ದ ಜಾಫ್ರಿ ಮನಃಸ್ಥಿತಿ ಅವರ ಕಾವ್ಯಗಳಲ್ಲಿ ಮೂಡಿಬಂದಿದೆ. ಅವರು ಸಿನಿಮಾ ಕ್ಷೇತ್ರದಲ್ಲೂ ಕೈಯಾಡಿಸಿ ಮೊದಲಿಗೆ ''ಗ್ಯಾರಹ್ ಹಜಾರ್ ಲಡಕಿಯಾಂ'' (ಹನ್ನೊಂದು ಸಾವಿರ ಹುಡುಗಿಯರು) ಎಂಬ ಚಿತ್ರ ರಚಿಸಿದರು. ಈ ಚಿತ್ರ ಗಲ್ಲಾ ಪೆಟ್ಟಿಗೆಯಲ್ಲಿ ಮುರಿದುಬಿತ್ತು. ಆದರೆ ಪ್ರಪ್ರಥಮವಾಗಿ ಲಿಂಗಗಳ ಆಧಾರಿತ ಪರಿಣಾಮಕಾರಿ ಚಿತ್ರ ಅದಾಗಿತ್ತು. ಅದೇ ರೀತಿ ಹಲವಾರು ಚಲನಚಿತ್ರಗಳಿಗೆ ಹಾಡನ್ನು ಬರೆದರು. ಅವುಗಳಲ್ಲಿ 'ಪರದೇಶಿ' ಅತಿಮುಖ್ಯವಾಗಿತ್ತೆನ್ನಬಹುದು.

ಕಮ್ಯುನಿಸಂನ ತತ್ವ ಸಿದ್ಧಾಂತಗಳನ್ನು ಕರಗತ ಮಾಡಿಕೊಂಡಿದ್ದ ಅವರು, ಖ್ಯಾತ ಸಾಹಿತಿಗಳು, ಬರಹಗಾರರು, ಪ್ರಗತಿಪರರಾದ, ಸಜ್ಜಾದ್ ಜಾಹೀರ್, ರಜಿಯಾ ಸಜ್ಜಾದ್ ಜಾಹಿರ್, ಸಾಹಿರ್ ಸಾಹಿಬ್, ಮಜರೂಹ್ ಸಾಹಿಬ್, ಪಾಬ್ಲೊ ನೆರುದಾ, ಫೈಜ್ ಅಹ್ಮದ್ ಫೈಜ್, ನಜೀಮ್ ಹಿಕ್ಮತ್, ಕೈಫಿ ಅಜ್ಮಿ, ಬಲರಾಜ್ ಸಾಹ್ನಿ ಹೀಗೆ ಹಲವಾರು ಜನರ ಜೊತೆ ಒಡನಾಡಿಯಾಗಿದ್ದರು. ಭಾರತದ ವಿಭಜನೆಗೆ ತೀವ್ರ ಪ್ರತಿರೋಧ ಒಡ್ಡಿದ್ದ ಸರ್ದಾರ್ ಅವರಿಗೆ ಅದೇ ಕಾರಣಕ್ಕಾಗಿ ಪಾಕಿಸ್ತಾನಕ್ಕೆ ಹೋಗಲು ವೀಸಾ ನಿರಾಕರಿಸಿದ ಪ್ರಸಂಗವೂ ನಡೆದಿದೆ. ಭಾರತ ವಿಭಜನೆಯ ಕಾಲದಲ್ಲಿ ನಡೆದ ಕೋಮು ದಳ್ಳುರಿಯಲ್ಲಿ ತನ್ನ ಸಹೋದರರನ್ನು ಕಳೆದುಕೊಂಡ ದುಃಖಿ ಜಾಫ್ರಿ.

ಅವಿಭಜಿತ ಕಮ್ಯುನಿಸ್ಟ್ ಪಕ್ಷದ ಉರ್ದು ವಾರಪತ್ರಿಕೆ ಕ್ವಾಮಿ ಜಂಗ್‌ನ್ನು ಹುಟ್ಟು ಹಾಕಿದ ಪ್ರಮುಖರು ಅವರು. ೧೯೯೮ರಲ್ಲಿ ಅವರಿಗೆ ಜ್ಞಾನಪೀಠ ಪುರಸ್ಕಾರ ನೀಡಲಾಯಿತು. ಭಾರತ ಪಾಕ್ ನಡುವಿನ ಶಾಂತಿ ಸೌಹಾರ್ದ ಕಾಪಾಡುವ ನಿಟ್ಟಿನಲ್ಲಿ ಪಾಕ್ ಪ್ರಯಾಣ ಬೆಳೆಸಿದಾಗ ಪ್ರಧಾನಿ ವಾಜಪೇಯಿ ಜಾಫ್ರಿ ಅವರ 'ಸರ್ಹದ್' ಕವನ ಸಂಕಲನವೊಂದನ್ನು ಆಗಿನ ಪ್ರಧಾನಿ ನವಾಜ್ ಷರೀಫ್‌ಗೆ ನೀಡಿದ್ದನ್ನು ಸ್ಮರಿಸಬಹುದು.

- ಲಕ್ಷ್ಮಣ್

# ಅಸ್ಥಿ ಚಿಕಿತ್ಸೆಯಲ್ಲಿ ಹೊಸ ಶಸ್ತ್ರಚಿಕಿತ್ಸೆಗಳು

ಮಾನವನ ಚಿಕಿತ್ಸಕ ಬುದ್ಧಿ ಬೆಳೆದಂತೆ ವಿಜ್ಞಾನ ಬೆಳೆಯುತ್ತಿದೆ. ಎಲ್ಲ ಕ್ಷೇತ್ರಗಳಲ್ಲಿಯಂತೆ ವೈದ್ಯ ವಿಜ್ಞಾನದಲ್ಲೂ ಸಾಕಷ್ಟು ಬದಲಾವಣೆ ಕಾಣುತ್ತಿದೆ. ಮೂಳೆ ಮತ್ತು ಕೀಲುಗಳ ಸಮಸ್ಯೆಗಳ ಪರಿಹಾರ ಬಲು ನಿಧಾನವೆಂಬುದು ಎಲ್ಲರಿಗೂ ತಿಳಿದದ್ದೆ. ಮೊದಲಿನ ದಿನಗಳನ್ನು ನೆನೆಸಿಕೊಂಡರೆ ಈಗ ಎಷ್ಟೋ ವಾಸಿ!

ಕಾಲಿನ ಮೂಳೆ ಮುರಿದುಕೊಂಡ ವ್ಯಕ್ತಿ ಎದ್ದು ತಿರುಗಾಡಲು ತಿಂಗಳುಗಳೇ ಬೇಕಾಗುತ್ತಿತ್ತು. ಕೀಲು ರೋಗಕ್ಕೆ ತುತ್ತಾದವನು ಮತ್ತೆ ಎದ್ದು ತಿರುಗಾಡಲು ಸಾಧ್ಯವಾಗುತ್ತಿರಲಿಲ್ಲ. ವಯಸ್ಸಾದಂತೆ ಸಹಜ ಸವೆಯುವ ಕ್ರಿಯೆಗೊಳಪಟ್ಟು ಎಲುಗೀಲುರಿತ ಉಂಟಾಗಿ ಹಾಸಿಗೆ ಬಿಡಲು ಸಾಧ್ಯವಾಗುತ್ತಿರಲಿಲ್ಲ. ಹೊಸ ಹೊಸ ಆವಿಷ್ಕಾರಗಳಿಂದಾಗಿ ಇಂದು ಎಂತಹ ರೋಗಿಯಾದರೂ ಆದಷ್ಟು ಶೀಘ್ರ ತನ್ನಷ್ಟಕ್ಕೆ ತಾನು ಎದ್ದು ತಿರುಗಾಡುವಂತಾಗಿದೆ.

**ಮುರಿತ** : ಎಲುವುಗಳ ಮುರಿತಗಳನ್ನು ಮುಖ್ಯವಾಗಿ ಎರಡು ವಿಧಗಳಾಗಿ ವಿಂಗಡಿಸಬಹುದು. ಅ) ಚರ್ಮದಲ್ಲಿ ಗಾಯವಿಲ್ಲದ ಮುರಿತ; ಇದಕ್ಕೆ 'ಮುಚ್ಚಿದ ಮುರಿತ' ವೆನ್ನುತ್ತೇವೆ; ಆ) ಚರ್ಮದಲ್ಲಿ ಗಾಯವಾಗಿ ಮುರಿದೆಲುವುಗಳ ತುದಿಗಳು ಬಾಹ್ಯ ಸಂಪರ್ಕ ಹೊಂದುತ್ತವೆ. ಇದಕ್ಕೆ



*ಹೊರ ಹಿಡಿತ ಪದ್ಧತಿ*

'ತೆರೆದ ಮುರಿತ'ವೆನ್ನುತ್ತೇವೆ. ತೆರೆದ ಮುರಿತದಲ್ಲಿ ಎಲುವು ಸೋಂಕಿಗೊಳಗಾಗುವ ಸಾಧ್ಯತೆ ಇರುವುದರಿಂದ ಅದರ ಚಿಕಿತ್ಸೆ ಕಷ್ಟ ಹಾಗೂ ಕ್ಲಿಷ್ಟಕರವಾಗುತ್ತದೆ. ಇಲ್ಲಿ ಶಸ್ತ್ರ ಚಿಕಿತ್ಸೆ ಅತ್ಯಾವಶ್ಯಕ.

ಮುಚ್ಚಿದ ಮುರಿತಗಳನ್ನು ಪ್ಲ್ಯಾಸ್ಟರ ಆಫ್ ಪ್ಯಾರಿಸ್‌ನ ಪಟ್ಟಿ ಹಾಕಿ ಉಪಚರಿಸುವುದು ವಾಡಿಕೆ. ಈ ಪಟ್ಟಿಯಲ್ಲಿ ಮುರಿದೆಲುವುಗಳು ಕೂಡಿಕೊಂಡರೂ, ಚಲನೆಯಿಂದ ವಂಚಿತಗೊಂಡ ಕೀಲುಗಳು ಗಟ್ಟಿಗೊಳ್ಳುತ್ತವೆ; ಎಲುವುಗಳು ಮೆತ್ತಗಾಗುತ್ತವೆ; ಸ್ನಾಯುಗಳು ಸೊರಗುತ್ತವೆ. ಅಲ್ಲದೆ ಬಹಳ ದಿನಗಳವರೆಗೆ ಮುರಿತಕ್ಕೊಳಗಾದ ಅಂಗವನ್ನು ಉಪಯೋಗಿಸಲು ಸಾಧ್ಯವಾಗುವುದಿಲ್ಲ.



*ತೊಡೆಲು ಕತ್ತು ಮುರಿತವನ್ನು ಡೈನಮಿಕ್ ಕಂಪ್ರೆಶನ್ ಮೊಳೆಯಿಂದ ಜೋಡಿಸಿದೆ.*

ಅದೇ ಮುರಿತವನ್ನು ಶಸ್ತ್ರಕ್ರಿಯೆಯಿಂದ ಒಳಜೋಡಣೆಗೊಳಪಡಿಸಿ ಯಾವ ಕೀಲನ್ನೂ ಹಿಡಿದಿಡದೆ ಮುರಿತಕ್ಕೊಳಗಾದ ಆ ಭಾಗವನ್ನು ತಕ್ಷಣದಲ್ಲೇ ಬಳಸಲು ಪ್ರಾರಂಭಿಸಬಹುದು. ಒಳಜೋಡಣೆಗಾಗಿ 'ತೂತು ತಟ್ಟೆ - ತಿರುವು ಮೊಳೆ', ಒಳೆಲು ಮೊಳೆ, ತಂತಿಗಳನ್ನು ಬಳಸುತ್ತೇವೆ.

ತೊಡೆಯಲ್ಲಿರುವ ತೊಡೆಲು ಅಥವಾ ಮುಂಗಾಲಿನ ದೊಡ್ಡ ಎಲುವಾದ ಕಣಕಾಲೆ (ಟಿಬಿಯಾ) ಮುರಿದಾಗ ಎಲುವಿನೊಳಗೆ ಉದ್ದದ ಮೊಳೆ ತೂರಿಸಿ ಒಳ ಹಿಡಿಯುವ ವಾಡಿಕೆ ಬೆಳೆದು ಬಂದಿತ್ತು. ಇತ್ತೀತ್ತಲಾಗಿ ಆ ಒಳೆಲು ಮೊಳೆಯ ಎರಡೂ ತುದಿಗಳಲ್ಲಿ ರಂಧ್ರ ಹಾಕಿ, ಆ ಮೂಲಕ ಎಲುವಿನೊಳಗೆ ತಿರುವುಮೊಳೆಯನ್ನು ತಿರುಗಿಸಿ ಮುರಿತವನ್ನು ಗಟ್ಟಿ ಹಿಡಿಯುವುದರಿಂದ ವ್ಯಕ್ತಿ ಕೆಲವೇ ದಿನಗಳಲ್ಲಿ ಬಗಲ ಬಡಿಗೆಗಳ ಸಹಾಯದಿಂದ ನಡೆದಾಡಲು ಸಾಧ್ಯವಾಗುತ್ತದೆ. ಕಾಲಿನ ಎಲ್ಲ ಕೀಲುಗಳನ್ನೂ ಚೂಟಿಯಾಗಿ ಮಡಿಚುತ್ತಾನೆ, ನೀಡುತ್ತಾನೆ. ತಿಂಗಳುಗಟ್ಟಲೇ ಹಾಸಿಗೆಯಲ್ಲಿ ಕೊಳೆಯಬೇಕಾದ ಹಿಂಸೆ ಹೀಗೆ ತಪ್ಪುತ್ತದೆ.

ತೊಡೆಲುವಿನ ಕತ್ತು ಮುರಿದಾಗ ಚಿಕಿತ್ಸೆ ಸಂತೋಷದಾಯಕವಾಗಿರಲಿಲ್ಲ. ಪ್ಲ್ಯಾಸ್ಟರ್ ಪಟ್ಟಿ ಹಾಕುವುದು ಕಷ್ಟಸಾಧ್ಯ. ಹಾಕಿದರೂ ಮುರಿತ ಕೂಡಿಕೊಳ್ಳುವ ಭರವಸೆ ಇಲ್ಲ. ನಾನಾ ವಿಧಧ ಶಸ್ತ್ರ ಕ್ರಿಯೆಗಳು ಮೂಡಿಬಂದವು; ಸಮರ್ಪಕವಾದ ಫಲ ಸಿಗಲಿಲ್ಲ. ಸಧ್ಯದಲ್ಲಿ ಇದನ್ನು ಡೈನಮಿಕ್ ಕಂಪ್ರೆಶನ್ ಮೊಳೆಯಿಂದ ಜೋಡಿಸಿ ಉಪಚರಿಸುತ್ತಿದ್ದಾರೆ. ಈ ಶಸ್ತ್ರಕ್ರಿಯೆಯ ನಂತರ ವ್ಯಕ್ತಿ ಭಾರ ಹಾಕದೆ ಬಗಲ ಬಡಿಗೆಗಳ ಸಹಾಯದಿಂದ ತಿರುಗಾಡುತ್ತಿರುವಾಗ ಮುರಿತ ಕೂಡಿಕೊಳ್ಳುತ್ತದೆ. ವಿವಿಧ ರೀತಿಯ ಕಂಪ್ರೆಶನ್ ಮೊಳೆಗಳು ಬಳಕೆಯಲ್ಲಿವೆ. ಉತ್ತಮ ಫಲಿತಾಂಶವನ್ನು ಇವುಗಳಿಂದ ನಿರೀಕ್ಷಿಸಬಹುದು.

ವಯಸ್ಸಾದವರಲ್ಲಿ ತೊಡೆಲುವಿನ ಕತ್ತು ಮುರಿದಾಗ ಮುರಿತವನ್ನು ಒಳಜೋಡಣೆಗೊಳಪಡಿಸುವುದರಲ್ಲಿ ಅರ್ಥವಿಲ್ಲ. ವೃದ್ಧರು ಹಾಸಿಗೆ ಹಿಡಿದು ಮಲಗಿದರೆ ದಿನದಿನಕ್ಕೆ ಅವರ ಆರೋಗ್ಯ ಹದಗೆಡುತ್ತದೆ. ಆದಷ್ಟು ಶೀಘ್ರ ಅವರು ಎದ್ದು ಓಡಾಡುವಂತಾದರೆ, ಪುಪ್ಪುಸಗಳ, ಮೂತ್ರ ಪಿಂಡಗಳ ಹಾಗೂ ಹಾಸಿಗೆ ಹುಣ್ಣಿನ ಸಮಸ್ಯೆಗಳನ್ನು ತಡೆಗಟ್ಟಬಹುದು. ಅವರಿಗೆ ಶಸ್ತ್ರ ಚಿಕಿತ್ಸೆ ಮಾಡಿ ತೊಡೆಲು ತಲೆಯನ್ನು ಕೊಯ್ತೆಗೆದು ಅದರ ಸ್ಥಾನದಲ್ಲಿ ಕೃತಕ ತಲೆಯನ್ನು ಅಳವಡಿಸಿದರೆ ಮರುದಿನದಿಂದಲೇ ಅವರು ನಡೆದಾಡುವಂತಾಗುತ್ತಾರೆ. ನೋವಿಲ್ಲದೆ, ಹೆಚ್ಚಿನ ಕುಂಟು ಕಾಣದೆ ಓಡಾಡುವ ಅಜ್ಜ ಅಜ್ಜಿಯರು ತಮ್ಮ ತೊಡೆಲು ಕತ್ತು ಮುರಿತದ ನಂತರವೂ ಸಹಜ ಓಡಾಡಿಕೊಂಡು ಬಾಳುವುದು ಎಲ್ಲರಿಗೂ ಸಂತಸಕರವಲ್ಲವೆ ?

ತೆರೆದ ಮುರಿತದಲ್ಲಿ 'ಕೀವು' ಉಂಟಾಗುವ ಸಾಧ್ಯತೆ ಹೆಚ್ಚಿಗಿರುತ್ತದೆ. ಗಾಯವಾಗುವ ರಭಸ, ಗಾಯದ ಆಳ, ಗಾಯದ ಸಂಮಿಳತೆಯ ಮೇಲೆ ಸೋಂಕು ಕಾಡುವುದು, ಇವೆಲ್ಲಾ ಗಣನೆಗೆ ಬರುತ್ತವೆ. ಇಂತಹ ಮುರಿತಗಳನ್ನು ಉಪಚರಿಸುವುದು ಕಷ್ಟ. ಮುರಿದೆಲುವುಗಳು ಅಲುಗಾಡದಂತೆ ಹಿಡಿದಿಡಬೇಕು, ಪ್ರತಿದಿನ ಇಲ್ಲವೆ ದಿನ ಬಿಟ್ಟು ದಿನ ಗಾಯ ತೊಳೆದು ಪಟ್ಟಿ ಹಾಕಬೇಕು. ಪಟ್ಟಿ ಹಾಕಲು



*ಎಲಿಜಾರೋ ಪದ್ಧತಿಯಲ್ಲಿ ಎಕಲಗೊಂಡ ಕಾಲಿನೆಲುಬುಗಳ ಚಿಕಿತ್ಸೆ*

**ಡಾ|| ಎಸ್. ಎಸ್. ಪಾಟೀಲ**

ಅನುಕೂಲವಾಗುವ ಚಿಕಿತ್ಸೆ ಬೇಕು. ಹೊರ ಹಿಡಿತದ ಚಿಕಿತ್ಸೆ ಸಮರ್ಪಕ ಫಲ ನೀಡುತ್ತದೆ. ಗಾಯದಿಂದ ದೂರ, ಮುರಿತದ ಮೇಲೆ ಹಾಗೂ ಕೆಳಗೆ ತೆಳು ಸಲಾಕೆಗಳನ್ನು ಮೂಳೆಯಲ್ಲಿ ತೂರಿಸಿ ಆ ಸಲಾಕೆಗಳನ್ನು ಹೊರಗೆ ಇನ್ನೊಂದು ದೃಢ ಕೊಳವೆಯ ಸಹಾಯದಿಂದ ಹಿಡಿಯುತ್ತೇವೆ. ಪಟ್ಟಿ ಹಾಕುವಾಗ ಮುರಿದೆಲುವುಗಳು ಅಲುಗಾಡುವುದಿಲ್ಲ. ಹೀಗಾಗಿ ಗಾಯ ಮಾಯುವ ಸಮಯದಲ್ಲೇ ಮುರಿತವೂ ಕೂಡಿಕೊಳ್ಳುತ್ತದೆ.

ಎಲಿಜಾರೋವ ಪದ್ಧತಿಯಲ್ಲಿ ಎಲುವಿನೊಳಗೆ ಸರಳುಗಳನ್ನು ತೂರಿಸಿ ಅವುಗಳನ್ನು ಹೊರಭಾಗದಲ್ಲಿ ಗೋಳಾಕಾರದ ತಟ್ಟೆಯಿಂದ ಹಿಡಿದಿಡುತ್ತಾರೆ. ತೆರೆದ ಮುರಿತ, ಕೂಡಿಕೊಳ್ಳದ ಮುರಿತ, ಕೆಡುಕೂಡಿದ ಮುರಿತ ಹಾಗೂ ವಿಕಲಗೊಂಡ ಎಲುವನ್ನೂ ಸರಿಪಡಿಸಲು ಎಲಿಜಾರೋವ ಪದ್ಧತಿ ಬಳಸುತ್ತಾರೆ. ಚಿಕಿತ್ಸೆಯ ಸಮಯದಲ್ಲಿ ವ್ಯಕ್ತಿ ಬಗಲಬಡಿಗೆಗಳ ಸಹಾಯದಿಂದ ಓಡಾಡುತ್ತಿರಲು ಸಾಧ್ಯವಿದ್ದು ಉತ್ತಮ ಫಲ ಸಿಗುತ್ತದೆ.

**ಕೀಲು :** ಚಲನೆಗಾಗಿ ಕೀಲು ಬೇಕು. ಎರಡು ಎಲುವುಗಳು ತುದಿಯಲ್ಲಿ ಸಂಪರ್ಕಿಸಿ ಕೀಲು ರಚಿಸುತ್ತವೆ. ಕೀಲು ಚೀಲ, ಕೀಲು ಹುರಿ ಹಾಗೂ ಸ್ನಾಯುಗಳು ಕೀಲಿಗೆ ದೃಢತೆ ನೀಡುತ್ತವೆ. ಗಾಯದಿಂದ ಅಥವಾ ರೋಗದಿಂದಾಗಿ ಕೀಲಿನಲ್ಲಿ ಸಮಸ್ಯೆ ಉದ್ಭವಿಸಬಹುದು. ಕೀಲಿನೊಳಗಿನ ಸಮಸ್ಯೆಗಳನ್ನು ಪರಿಹರಿಸಲು ಶಸ್ತ್ರಕ್ರಿಯೆ ಬೇಕಾಗುತ್ತದೆ. ಶಸ್ತ್ರಕ್ರಿಯೆ ಮಾಡಿದರೆ ವ್ಯಕ್ತಿ ಅನಿವಾರ್ಯವಾಗಿ ಬಹಳ ಸಮಯ ವಿಶ್ರಾಂತಿ ಪಡೆಯಬೇಕಾಗುತ್ತದೆ. ಸಮಯ ಕೊಡುವುದು ಈ ದಿನಗಳಲ್ಲಿ ಕಷ್ಟದ ಕೆಲಸ. ಕ್ರಿಕೆಟ್ಟಿನ ದೈತ್ಯ ಆಟಗಾರ ಕಪಿಲ್‌ದೇವನ ಮಂಡಿ ಒಳಗಿನ ತಟ್ಟೆ ಹರಿದಿತ್ತು. ಅದನ್ನು ಸರಿಪಡಿಸಲು ಶಸ್ತ್ರಕ್ರಿಯೆ ಬೇಕಾಗಿತ್ತು. ಸಹಜ ಶಸ್ತ್ರಕ್ರಿಯೆ ಮಾಡಿದ್ದಾದರೆ ಸುಮಾರು ಮೂರು ತಿಂಗಳು ಸಂಪೂರ್ಣ ವಿಶ್ರಾಂತಿ ಬೇಕಾಗುತ್ತಿತ್ತು. ಆದರೆ ಹೊಸದಾಗಿ ಪ್ರಾರಂಭಿಸಿದ 'ಕೀಲುದರ್ಶಕ'ದ ಚಿಕಿತ್ಸೆ ಸಹಾಯಕ್ಕೆ ಬಂದಿತು. ಕೀಲುದರ್ಶಕದಿಂದ ಪರೀಕ್ಷಿಸಿ ಕೀಲಿನೊಳಗೆ ಏನಾಗಿದೆ ಎಂಬುದನ್ನು ನೂರಕ್ಕೆ ನೂರು ಪ್ರತಿಶತ ಖಚಿತ ತಿಳಿದುಕೊಂಡು ದರ್ಶಕದಿಂದಲೇ ಅದನ್ನು ಸರಿಪಡಿಸಿ, ಮರುದಿನದಿಂದಲೇ ಓಡಾಡಲು ಸಾಧ್ಯವಾಯಿತು. ಕಪಿಲ್ ಕೆಲವೇ ವಾರಗಳಲ್ಲಿ ಮತ್ತೆ ಕ್ರಿಕೆಟ್ ಆಡಲು ಅರ್ಹನಾದನು.



*ಒಳಜೋಡಣೆಗಾಗಿ ತೂತುತಟ್ಟೆ ತಿರುವು ಮೊಳೆ*

ಕುಟುಂಬ ಯೋಜನೆಯ ಅಡಿಯಲ್ಲಿ 'ಉದರ ದರ್ಶಕ'ದಿಂದ ಸ್ತ್ರೀಯರ ಅಂಡನಾಳ ಶಸ್ತ್ರಕ್ರಿಯೆ ಮಾಡುವುದು ಸಹಜವಾದಂತೆ ಕೀಲುದರ್ಶಕದ ವಿಚಾರ ಹೊಳೆಯಿತು. ಚರ್ಮದಲ್ಲಿ ಚಿಕ್ಕ ರಂಧ್ರ ಹಾಕಿ ಅದರ ಮೂಲಕ ಕೀಲುದರ್ಶಕ ನಾಳವನ್ನು ಕೀಲಿನೊಳಗೆ ಸೇರಿಸುತ್ತಾರೆ. ಇನ್ನೊಂದು ಚಿಕ್ಕರಂಧ್ರದ ಮೂಲಕ ತಿಳಿ ಜಲ ಹರಿಸಿದರೆ ಮತ್ತೊಂದು ರಂಧ್ರದ ಮೂಲಕ ಜಲ ಹೊರ ಹರಿಯುವಂತೆ ನೋಡಿಕೊಳ್ಳುತ್ತಾರೆ. ದರ್ಶಕವನ್ನು ಕೀಲಿನೊಳಭಾಗಕ್ಕೆಲ್ಲ ಓಡಾಡಿಸಿ ಸಮಸ್ಯೆಯನ್ನೂ ಗುರುತಿಸಿ ಅದನ್ನು ಕೂಡಲೆ ಸರಿಪಡಿಸುತ್ತಾರೆ. ಇದರಿಂದ ಸಮಯ ಉಳಿಯುತ್ತದೆ, ನೋವು ಅನುಭವಿಸುವುದು ಇಲ್ಲವಾಗುತ್ತದೆ, ಶಸ್ತ್ರಕ್ರಿಯೆಯ ಹಾಗೂ ನಂತರದ ತೊಂದರೆಗಳನ್ನು ತಡೆದಂತಾಗುತ್ತದೆ. ಅಲ್ಲದೆ ವ್ಯಕ್ತಿ ಕೂಡಲೇ ಎದ್ದು ಓಡಾಡುವಂತಾಗುತ್ತದೆ. ಕೀಲುದರ್ಶಕವನ್ನು ಯಾವ ಕೀಲಿಗಾದರೂ ಬಳಸಬಹುದಾದರೂ ಹೆಚ್ಚಾಗಿ ಮಂಡಿಗಾಗಿ ಬಳಸುವುದು ಸಾಮಾನ್ಯ.

ವಯಸ್ಸಾದಂತೆ ಕೀಲುಗಳು ಸವೆಯುತ್ತವೆ. ಕೀಲಿನೆಲುವುಗಳ ಮಧ್ಯದ ಅಂತರ ಕಡಿಮೆಯಾಗುತ್ತದೆ. ನೋವು ಕಾಣಿಸಿಕೊಂಡು ಬಲಿಯುತ್ತದೆ. ಚಲನೆ ಕುಂಠಿತಗೊಳ್ಳುತ್ತದೆ. ಭಾರ ಹೊರುವ ಕೀಲುಗಳಾದ ಮಂಡಿ ಹಾಗೂ ಚಪ್ಪೆ ಕೀಲಿನಲ್ಲಿ ಈ ಸಮಸ್ಯೆ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಎಲುಗೀಲುರಿತದ (ಆಸ್ಟಿಯೋ ಆರ್ತ್ರೈಟಿಸ್) ಈ ಸಮಸ್ಯೆ ವೃದ್ಧರಲ್ಲಿ ಜಾಸ್ತಿ. ಇಂತಹ ಬದಲಾವಣೆ ರುಮಟಾಯ್ಡ್ ಕೀಲುವಾತದ ರೋಗದಲ್ಲಿ ಸಹ ಕಾಣಿಸಿಕೊಳ್ಳುತ್ತದೆ. ಇದರ ಉಪಚಾರ ವೈದ್ಯರಿಗೆ ಒಂದು ಸವಾಲು. ನೋವಳಿಕೆ ಮಾತ್ರೆಗಳು ಸಮಯ ಕಳೆದಂತೆ ಪರಿಣಾಮಹೀನವಾಗುತ್ತವೆ. ವ್ಯಕ್ತಿ ಕೂಡಲು, ಏಳಲು, ನಡೆದಾಡಲು ಪರದಾಡಬೇಕಾಗುತ್ತದೆ. ಜೀವಿಸುವುದೇ ಬೇಡವೆನಿಸುತ್ತದೆ. ಈ ಸಮಸ್ಯೆಗೆ ಪರಿಹಾರ ನೀಡುವಲ್ಲಿ ವೈದ್ಯ ವಿಜ್ಞಾನ ಪ್ರಯತ್ನಿಸಿ ಸಫಲತೆ ಪಡೆಯುತ್ತಿದೆ. ಸವೆದ ಕೀಲಿನೆಲುವುಗಳನ್ನು ತೆಗೆದು ಅದರ ಬದಲಿಗೆ ಕೃತಕ ಅಂಗವನ್ನು ಅಳವಡಿಸಲಾಗುತ್ತಿದೆ. ಮೊದಲಿಗೆ ಚಪ್ಪೆ ಕೀಲಿನಲ್ಲಿ ತೊಡೆಲು ತಲೆ ಮಾತ್ರ ಬದಲಿ ಮಾಡುವುದು ಪ್ರಾರಂಭವಾಗಿ ಬರುಬರುತ್ತ ಪೂರ್ಣ ಬದಲಿ ಶಸ್ತ್ರಕ್ರಿಯೆಗೆ ಬಡತಿ ಪಡೆಯಿತು. ಜಡ ಧಾತುವಿನ ತೊಡೆಲು ತಲೆಯನ್ನು (ಉದಾ : ಸ್ಟೇನ್‌ಲೆಸ್ ಸ್ಟೀಲ್) ಅಧಿಕ ಸಾಂದ್ರತೆ, ಕಡಿಮೆ ಉಜ್ಜುವಿಕೆ ಇರುವ ಪ್ಲಾಸ್ಟಿಕ್ ಪಾತ್ರೆಯಲ್ಲಿ ಕೀಲಿಸುವಂತೆ ಜೋಡಿಸಿ, ವ್ಯಕ್ತಿ ನೋವಿಲ್ಲದೆ ಓಡಾಡುವಂತೆ ಮಾಡಲು ಸಾಧ್ಯವಾಗಿದೆ. ಮಂಡಿ ಕೀಲಿನಲ್ಲಿ ಸಹ ಈ ರೀತಿಯ ಇಡೀ ಬದಲಿ ಅಳವಡಿಕೆಯನ್ನು ಮಾಡಿ ವೃದ್ಧರು ತಮ್ಮ ಉಳಿದ ಜೀವಿತಾವಧಿಯನ್ನು ಸ್ವತಂತ್ರವಾಗಿ ಓಡಾಡುತ್ತಾ ಕಳೆಯುವಂತೆ ಸಹಾಯ ಮಾಡುವಂತಾಗಿದೆ. ಈ ಶಸ್ತ್ರಕ್ರಿಯೆಗಳ ಖರ್ಚು ಸಾಮಾನ್ಯ ಭಾರತೀಯನಿಗೆ ತಲುಪುವುದು ಕಷ್ಟ. ಉಳ್ಳವರು ಇದರ ಲಾಭ ಪಡೆಯುತ್ತಿದ್ದಾರೆ. ಬರುವ ದಿನಗಳಲ್ಲಿ ಇದು ಎಲ್ಲರಿಗೂ ಸಿಗಬಹುದೆಂಬ ಆಶೆ ಇದೆ.



*ಒಳಜೋಡಣೆಗಾಗಿ ತಂತಿ*

**ಸೊಂಟ :** ಸೊಂಟ ನೋವು ಜಟಿಲವಾದ ಸಮಸ್ಯೆ. ಸೊಂಟ ನೋವನ್ನು ಜೀವನದಲ್ಲಿ ಒಮ್ಮೆಯಾದರೂ ಅನುಭವಿಸದ ಮನುಷ್ಯರು ಸಿಗುವುದು ಅಪರೂಪ. ಸೊಂಟ ನೋವಿಗೆ ಅನೇಕ ಕಾರಣಗಳಿವೆ. ಅಂದಿನ ನಮ್ಮ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು ಕಾರಿನಲ್ಲಿ ಪ್ರಯಾಣ ಮಾಡುತ್ತಿದ್ದರು. ರಸ್ತೆ ಭಾರತ ದೇಶದ್ದು ! ಒಮ್ಮೆ ಎತ್ತಿಹಾಕಿದಾಗ ಅವರಿಗೆ ಸೊಂಟನೋವು ಕಾಣಿಸಿಕೊಂಡಿತು. ತಕ್ಷಣ ವಿಶ್ರಾಂತಿ ಸಿಗಲಿಲ್ಲ. ನೋವು ದಿನದಿನಕ್ಕೆ ಹೆಚ್ಚಾಯಿತು. ನೋವಿನ ಕಾರಣ ಡಿಸ್ಕ್ ಪ್ರೊಲ್ಯಾಪ್ಸ್ ಶಸ್ತ್ರಕ್ರಿಯೆ ಇಲ್ಲದೆ ನೂರಕ್ಕೆ ತೊಂಭತ್ತಕ್ಕೂ ಹೆಚ್ಚು ಇಂತಹ ಜನರನ್ನು ಉಪಚರಿಸಬಹುದು. ಉಳಿದವರಿಗೆ ಶಸ್ತ್ರಕ್ರಿಯೆ ಬೇಕಾಗುತ್ತದೆ. ನಡುಬೆನ್ನಿನಲ್ಲಿ ಕೊಯ್ದು, ಬೆನ್ನೆಲುಬುಗಳ ಮಧ್ಯದಲ್ಲಿ ಅಡಗಿರುವ ತಟ್ಟೆ ಬೆನ್ನು ಕಿಂಡಿಯಲ್ಲಿ ಇಣುಕಿರುವುದನ್ನು ಕಂಡು, ನಾಜೂಕಾಗಿರುವ ಬೆನ್ನು ಹುರಿಯನ್ನು ಬದಿಗೆ ಸರಿಸುತ್ತ ಶಸ್ತ್ರಕ್ರಿಯೆ ಮಾಡಬೇಕಾಗುತ್ತದೆ. ಕೆಲವು ಗಂಟೆಗಳ ಸಮಯ ಹಾಗೂ ತಾಳ್ಮೆ ಬೇಕು. ವೈದ್ಯ ವಿಜ್ಞಾನದ ಹೊಸ ಹೊಸ ಹುಡುಕಾಟದ ಹಸಿವಿನಿಂದಾಗಿ - ಚರ್ಮದಲ್ಲಿ ಚಿಕ್ಕ ರಂಧ್ರ ಹಾಕಿ ಅದರ ಮೂಲಕ ಪರ್ಕ್ಯುಟೇನಿಯಸ್ ಡಿಸೆಕ್ಟೋಮಿ ಎನ್ನುವ ಶಸ್ತ್ರಕ್ರಿಯಾ ವಿಧಾನದಿಂದ ಇಣುಕಿದ ತಟ್ಟೆ ಕಂಡು, ಕೊಯ್ದೆಗೆಯುವಲ್ಲಿ ಯಶಸ್ಸು ಸಾಧಿಸಲಾಗಿದೆ. ಇದರಿಂದ ವ್ಯಕ್ತಿ ರೋಗಿಯಾಗಿ ಆಸ್ಪತ್ರೆಯಲ್ಲಿ ದಿನ ಕಳೆಯುವುದು ತಪ್ಪುತ್ತದೆ. ಶೀಘ್ರವಾಗಿ ತನ್ನ ಕೆಲಸಕ್ಕೆ ಮರಳುವಂತಾಗಿದೆ.

ಹೀಗೆ ಅಸ್ಥಿ ಶಸ್ತ್ರ ಚಿಕಿತ್ಸೆಯಲ್ಲಿ ಅನೇಕ ಹೊಸ ಹೊಸ ಶಸ್ತ್ರಕ್ರಿಯಾ ಪದ್ಧತಿಗಳು ಬಳಕೆಗೆ ಬರುತ್ತಿವೆ. ಈ ಎಲ್ಲ ಶಸ್ತ್ರಕ್ರಿಯೆಗಳಿಗೆ ಅನೇಕ ಸಹಾಯಕ ಸಾಧನಗಳ ಆವಿಷ್ಕಾರಗಳೂ ಆಗಿವೆ. ಬೋನ್ ಸಿಮೆಂಟ್, ಎಂ.ಆರ್.ಐ., ನ್ಯೂಕ್ಲಿಯರ್ ಮೆಡಿಸಿನ್ ಮುಂತಾದುವನ್ನು ಇಲ್ಲಿ ಹೆಸರಿಸಬಹುದು. ಬರುವ ದಿನಗಳಲ್ಲಿ ವೃದ್ಧರೆಲ್ಲರೂ ಅಸ್ಥಿ ಸಮಸ್ಯೆಯಿಂದ ನರಳುವುದು ತಪ್ಪಿದರೆ ಅದು ವಿಜ್ಞಾನದ ಕೊಡುಗೆ ಎಂಬುವುದರಲ್ಲಿ ಸಂಶಯವಿಲ್ಲ.

ಡಾ|| ಎಸ್. ಎಸ್. ಪಾಟೀಲ
'ಸಿದ್ಧರತ್ನ', ಧನ್ವಂತರಿ ಬಡಾವಣೆ, ಗುಲಬರ್ಗಾ - ೫೮೫ ೧೦೫

# ಮಧುಮೇಹ ಹಾಗೂ ಜಿನ್‌ಸಂಗ್

ಮಧುಮೇಹವನ್ನು ಸಕ್ಕರೆ ಕಾಹಿಲೆ ಎನ್ನುವರು. ಆಂಗ್ಲ ಭಾಷೆಯಲ್ಲಿ ಇದನ್ನು ಡೈಯಾಬಿಟಸ್ ಮೆಲಿಟಸ್ ಎಂದು ಕರೆಯುವರು. ಈ ರೋಗವನ್ನು ಪುರಾತನರೇ ಪತ್ತೆ ಹಚ್ಚಿದ್ದರು. ವಿಧವಿಧದ ಮದ್ದುಗಳನ್ನೂ ಕೊಡುತ್ತಿದ್ದರು. ಇತ್ತೀಚೆಗೆ ಮಧುಮೇಹಿಗಳ ಸಂಖ್ಯೆ ಹೆಚ್ಚುತ್ತಲಿದೆ. ಪ್ರತಿಶತ ೧೦ರಷ್ಟು ಜನರಲ್ಲಿ ಮಧುಮೇಹ ಕಾಣುತ್ತಲಿದೆ.

ಮಧುಮೇಹದ ಅರ್ಥ ಮೂತ್ರದಲ್ಲಿ ಸಕ್ಕರೆ. ಮೊದಲು ಕೇವಲ ಮೂತ್ರ ಪರೀಕ್ಷೆಯಿಂದ ಮಧುಮೇಹ ಕಂಡುಹಿಡಿಯುತ್ತಿದ್ದರು. ಕಾರಣವೇ ರೋಗದ ಹೆಸರು 'ಮಧುಮೇಹ'. ವಿಜ್ಞಾನದಲ್ಲಿ ಪ್ರಗತಿ ಕಂಡಂತೆ ಮೂತ್ರ ಪರೀಕ್ಷಿಸುವುದು ಅಷ್ಟು ತರವಲ್ಲ, ಎಂದು ತಿಳಿಯಿತು. ಆಗ ಮಧುಮೇಹ ಗುರುತಿಸಲು ರಕ್ತ ಪರೀಕ್ಷೆ ಬೇಕು ಎಂಬುದು ಕಡ್ಡಾಯವಾಯಿತು. ರಕ್ತದಲ್ಲಿ ಸಕ್ಕರೆಯ ಪ್ರಮಾಣ ಸಾಮಾನ್ಯ ಮಟ್ಟಕ್ಕಿಂತ ಜಾಸ್ತಿ ಇರುವುದೇ ಮಧುಮೇಹ. ಈ ರೋಗದಲ್ಲಿ ಎರಡು ಪ್ರಕಾರಗಳಿವೆ. ಒಂದು ಚಿಕ್ಕ ವಯಸ್ಸಿನವರಲ್ಲಿ ಕಾಣುತ್ತದೆ. ಎರಡನೆಯದು ವಯಸ್ಕರಲ್ಲಿ ತೋರುತ್ತದೆ. ಎರಡನೆಯ ಪ್ರಕಾರದ ಮಧುಮೇಹ ಪ್ರತಿಶತ ೯೫ ರಿಂದ ೯೮ರವರೆಗೆ ಇರುವುದು. ಮಧುಮೇಹಿಗಳ ಪ್ರಮುಖ ತೊಂದರೆಯೆಂದರೆ ರಕ್ತದಲ್ಲಿ ಸಕ್ಕರೆಯ ಪ್ರಮಾಣ ಜಾಸ್ತಿ ಇರುವುದು. ಇದಲ್ಲದೆ ಮಧುಮೇಹಿಗಳಲ್ಲಿ ಇನ್ನೂ ಹಲವಾರು ತೊಂದರೆಗಳು ಕಾಣುತ್ತವೆ. ಅವುಗಳನ್ನು ಕೆಳಗಿನಂತೆ ಯಾದಿ ತಯಾರಿಸಬಹುದು :

೧) ಅಶಕ್ತತೆ ೨) ಒತ್ತಡದ ಪರಿಸ್ಥಿತಿಗಳಲ್ಲಿ ಕುಸಿಯುವಿಕೆ ೩) ಶೀಘ್ರ ದಣಿವು ೪) ತಲೆನೋವು ೫) ಕೈ ಕಾಲುಗಳಲ್ಲಿ ತಂಪಾಗುವಿಕೆ ೬) ಕೈ ಕಾಲುಗಳಲ್ಲಿ ಚುಚ್ಚುವಿಕೆ ೭) ಎದೆ ಡವಗುಟ್ಟುವಿಕೆ ೮) ತ್ವಚೆ ಹಾಗೂ ಲೋಳ್ಪರೆಗಳ ಪಿಸುಗುವಿಕೆ (ಬೇಗನೆ ಹರಿಯುವುದು) ೯) ಗಾಯಗಳು ಬೇಗನೆ ಮಾಯದೆ ಹೋಗುವುದು ೧೦) ಸೋಂಕು ರೋಗಗಳು ಉಗ್ರಗೊಳ್ಳುವಿಕೆ ೧೧) ವಿರೋಧಕ ಶಕ್ತಿಯ ಕುಂದುವಿಕೆ ಇತ್ಯಾದಿ. ಬಹಳವಾಗಿ ಚರ್ಚೆ ನಡೆಯದೇ ಹೋದರೂ ಲೈಂಗಿಕತೆಯಲ್ಲಿ ನಿರಾಸಕ್ತಿ ಹಾಗೂ ನಪುಂಸಕತೆಗಳೂ ಮಹತ್ವದ ತೊಂದರೆಗಳು.



ಇನ್‌ಸುಲಿನ್ ಉತ್ಪತ್ತಿ ಮಾಡುವ ಗ್ರಂಥಿ

ಮಧುಮೇಹದ ಮುಖ್ಯ ಕಾರಣವೆಂದರೆ ಇನ್ಸುಲಿನ್ ಸ್ರವಿಕೆಯ ಅಭಾವ ಎನ್ನುವರು. ಮಧುಮೇಹಿಗಳಿಗೆ ಇನ್ಸುಲಿನ್ ಕೊಟ್ಟು ಉಪಚರಿಸಿದರೆ ಮೇಲಿನ ಎಲ್ಲ ತೊಂದರೆಗಳು ಮಾಯ ವಾಗುವುದಿಲ್ಲ ಎಂಬುದು ಎಲ್ಲರಿಗೂ ಗೊತ್ತು. ರಕ್ತದ ಸಕ್ಕರೆಯ ಪ್ರಮಾಣ ಕಡಿಮೆಯಾಗುವುದೇನೋ ನಿಜ. ಆದರೆ ಉಳಿದ ತೊಂದರೆಗಳು ಹಾಗೆಯೇ ಉಳಿಯುತ್ತವೆ. ನಿಜವಾಗಿ ಇದೊಂದು ಸಮಸ್ಯೆಯೇ ಆಗಿತ್ತು. ಆಗಿದೆ.

ಕೆಲವು ವರ್ಷಗಳ ಹಿಂದೆ 'ಜೆನ್‌ಸಂಗ್' ಎಂಬ ಔಷಧ ಹೊರಬಂದಿತು. ಇದರ ಉಪಚಾರದಿಂದ ಲೈಂಗಿಕ ಶಕ್ತಿ ಹೆಚ್ಚುವುದೆಂದು ತಿಳಿಯಿತು. ಜನರು ಇಂದು ಈ ಔಷಧದ ಹಿಂದೆ ಬಿದ್ದಿದ್ದಾರೆ. ಕೆಲವು ಪ್ರಮಾಣದಲ್ಲಿ ಯಶಸ್ಸು ದೊರೆತಿದೆ.

ಒಂದು ಗುಂಪಿನ ಸಂಶೋಧಕರಿಗೆ ಈ ಸಂಗತಿಯು ಆಕರ್ಷಕ ಎನಿಸಿತು. ಇವರು ಅನೇಕ ಮಧುಮೇಹಿಗಳನ್ನು ಕೂಡಿಸಿದರು. ಅವರನ್ನು ಎರಡು ಗುಂಪುಗಳಲ್ಲಿ ವಿಂಗಡಿಸಿದರು. ಎಲ್ಲರಿಗೂ ಆದೇ ರೀತಿಯ ರೋಗ ಲಕ್ಷಣಗಳು ಇದ್ದವು. ಒಂದು ಗುಂಪಿನ ರೋಗಿಗಳಿಗೆ ಮಧುಮೇಹದ ಉಪಚಾರದೊಡನೆ 'ಜೆನ್‌ಸಂಗ್' ಮದ್ದು ಕೊಟ್ಟರು. ಎರಡನೆಯ ಗುಂಪಿನ ಮಧುಮೇಹಿಗಳಿಗೆ 'ಜೆನ್‌ಸಂಗ್' ಬಿಟ್ಟು ಉಳಿದೆಲ್ಲ ಮದ್ದು ಕೊಡಿಸಿದರು. ಒಂದು ತಿಂಗಳಾದ ಮೇಲೆ ಎಲ್ಲರನ್ನೂ ಕೂಲಂಕಷವಾಗಿ ಪರೀಕ್ಷಿಸಿದರು. ಅವರ ತೊಂದರೆಗಳನ್ನು ಪಟ್ಟೀಕರಿಸಿದರು.

ಆಗ ಬೆಳಕಿಗೆ ಬಂದ ಸಂಗತಿಯೆಂದರೆ, 'ಜೆನ್‌ಸಂಗ್' ಉಪಯೋಗಿಸಿದವರು ಜಾಸ್ತಿ ಚುರುಕಾಗಿದ್ದರು. ಅವರಲ್ಲಿ ಒಳ್ಳೆಯ ಬದಲಾವಣೆಗಳಾಗಿದ್ದವು. ಜೆನ್‌ಸಂಗ್ ಉಪಯೋಗಿಸದೇ ಇದ್ದವರಲ್ಲಿ ಮೊದಲಿದ್ದ ತೊಂದರೆಗಳು ಯಥಾವತ್ತಾಗಿ ಮುಂದುವರೆದಿದ್ದವು.

ಈ ಪ್ರಯೋಗದ ಫಲಿತಾಂಶಗಳು ಬಲು ಸ್ವಾರಸ್ಯಕರವಾಗಿವೆ. ಮಧುಮೇಹಕ್ಕೂ ಲೈಂಗಿಕ ಶಕ್ತಿಗೂ ಹೊಂದಾಣಿಕೆ ಇದೆ ಎಂಬುದು ಬಲವಾಗುತ್ತದೆ. ಎರಡನೆಯದಾಗಿ ಮಧುಮೇಹವೆಂದರೆ ಕೇವಲ ಇನ್ಸುಲಿನ್ ಸ್ರವಿಕೆಯ ಅಭಾವ ಎಂದಾಗದೇ ಬೇರೆ ತೊಡಕುಗಳೂ ಇವೆ ಎಂಬುದು ಹೊಳೆಯುತ್ತದೆ.

ಮಧುಮೇಹಿಗಳ ಸರಿಯಾದ ಚಿತ್ರ ಕಾಣಬೇಕಾದರೆ ಇನ್ನೂ ಕೆಲ ವರ್ಷಗಳು ಅವಶ್ಯ ಎನಿಸುವುದು.

ಡಾ|| ಸ. ಜ. ನಾಗಲೋಟಿಮಠ
ವೈದ್ಯಕೀಯ ನಿರ್ದೇಶಕರು, ಬ.ವಿ.ವ. ಸಂಘ
ಬಾಗಲಕೋಟ - ೫೮೭ ೧೦೧

# ೨೦೦೦ದಲ್ಲಿ ಭೂಮಿ - ಜನ - ಪರಿಸರ ವಿಕಾಸಕ್ಕೆ ಸಂತತ ಬೇಸಾಯ

**ಪ್ರೊ॥ ಬಿ. ವಿ. ವೆಂಕಟರಾವ್**

**ಕ**ಳೆದ ಅರ್ಧ ಶತಮಾನದಲ್ಲಿ ಜನಸಂಖ್ಯೆ ಅಪಾರವಾಗಿ ಬೆಳೆದಿದೆ. ಇವರ ಆಹಾರ ಮತ್ತಿತರ ಅವಶ್ಯಕತೆ ಪೂರೈಕೆ ಆಗಲೇಬೇಕು. ಹಾಗೆಯೇ ಅದು ಬೇಕು, ಇದು ಬೇಕು, ಇನ್ನೂ ಬೇಕು ಎಂಬ ಮಿತಿಯಿಲ್ಲದ ಆಸೆ - ಆಕಾಂಕ್ಷೆ, ಅದರಲ್ಲೂ ಮುಂದುವರೆದ ದೇಶಗಳಲ್ಲಿ, ತಾನೇ ತಾನಾಗಿ ತಾಂಡವವಾಡುತ್ತಿದೆ. ನೆಲ, ಜಲ, ಗಾಳಿ, ವನ್ಯ ಜೀವಿಗಳು, ಕಾಡು ಇಂಥಾ ಎಲ್ಲಾ ಪ್ರಾಕೃತಿಕ ಸಂಪತ್ತುಗಳನ್ನು ಮಾನವ ಅವು ತನ್ನದಲ್ಲವೇನೊ ಎಂಬ ರೀತಿಯಲ್ಲಿ ದೋಚುತ್ತಿದ್ದಾನೆ. ಅವು ಭಯಾನಕವಾದ ವಿನಾಶದ ಅಂಚಿನಲ್ಲಿವೆ. ಈ ೧೦ - ೨೦ ವರ್ಷಗಳಲ್ಲಿ ಚಿಂತನಶೀಲರಲ್ಲದೆ ಸಾಮಾನ್ಯ ಜನ ಸಹ ಭವಿಷ್ಯದ ಬಗ್ಗೆ ಆತಂಕಕ್ಕೊಳಗಾಗಿದ್ದಾರೆ. ಮಾನವ ಸಂತತಿಯ ಉಳಿವಿಗೆ ಸಂತತ ಜೀವನಶೈಲಿ ಆಗತ್ಯವೆಂಬ ಬಗ್ಗೆ ಒಲವು ಬೆಳೆಯುತ್ತಿದೆ. ಇದು ಆಕರ್ಷಕ ಜಾಣತನದ ಮಾತುಗಳಲ್ಲಷ್ಟೇ ಮುಗಿಯದೆ ಕಾರ್ಯಶೀಲ ವಾಸ್ತವಕ್ಕೆ ನಾಂದಿಯಾಗಬೇಕು.

ಭೂಮಿ ಅಥವಾ ವ್ಯಾಪಕ ಅರ್ಥದಲ್ಲಿ, ಸಾಗುವಳಿ ಭೂಮಿ, ಬಂಜರು, ವನ್ಯಜೀವಿಗಳೂ ಸೇರಿದಂತೆ ಕಾಡು, ಬೆಟ್ಟಗುಡ್ಡ, ಪರ್ವತ, ಬಂಡೆ. ಖನಿಜ, ನದಿ, ಕೆರೆಕುಂಟೆ, ಜಲಾಶಯ ಎಲ್ಲವನ್ನೊಳಗೊಂಡಿರುವ ಪೃಥ್ವಿಯ ಮೇಲ್ಮೈ ಪ್ರದೇಶ ಭೌತಿಕ ಅರ್ಥದಲ್ಲಿ ನಿಲ್ಲಲು ಒಂದು ಸ್ಥಳ, ನೆಲ - ನೆಲೆ, ಬದುಕಿಗೆ ಮೂಲ ಆಧಾರ, ಭಾವನಾತ್ಮಕ ಭೂಮಿ ತಾಯಿ, ರಾಜಕೀಯವಾಗಿ ಪ್ರತಿಯೊಬ್ಬ ಮನುಷ್ಯ ಹೆಮ್ಮೆಯಿಂದ ಇಂಥ ದೇಶದವ ಎಂದು ಹೇಳಿಕೊಳ್ಳಬಹುದಾದ ಭೂ ಪ್ರದೇಶ. ಆಕಾಶ, ನೀರು, ಗಾಳಿ, ಬೆಂಕಿಗಳೊಂದಿಗೆ ಪಂಚಭೂತಗಳಲ್ಲಿ ಒಂದು. ಭೂಮಿ, ವಿಶ್ವದಲ್ಲಿ, ದೇಶದಲ್ಲಿ ಪರಿಮಿತಿಯಾದ ಸಂಪತ್ಸಾಧನ. ಶ್ರದ್ಧೆಯಿಂದ ಅದನ್ನು ಕೃಷಿಮಾಡಿ ನಮ್ಮ ಬದುಕಿಗೆ ಬೇಕಾದ ಅನ್ನ, ಬಟ್ಟೆ, ವಸತಿ, ಕೈಗಾರಿಕಾ ಕಚ್ಚಾವಸ್ತು ಒದಗಿಸಿಕೊಳ್ಳುವುದು ಸಾಧ್ಯ. ಇದಕ್ಕಿಂತ ಹೆಚ್ಚಾಗಿ ಭೂಮಿ, ಬಿದ್ದ ಮಳೆ ನೀರನ್ನು ಹಿಡಿದು ತನ್ನ ಮೈಯಲ್ಲಿ ಉಳಿಸಿಕೊಂಡು ಎಲ್ಲ ಜೀವಿಗಳ ಅಸ್ತಿತ್ವವನ್ನು ಸಾಧ್ಯಗೊಳಿಸಿದೆ.

ಕಾಡು ಮೇಡುಗಳಲ್ಲಿ ಪ್ರಾಣಿಗಳಂತೆಯೇ ಜೀವಿಸಿದ್ದ ಮನುಷ್ಯ ಈಗ ೧೦ -೧೫ ಸಾವಿರ ವರ್ಷಗಳ ಹಿಂದಷ್ಟೇ ಕಾಡು ಕಡಿದು, ಭೂಮಿ ಕೆದಕಿ, ಬೀಜ ಬಿತ್ತಿ ತನ್ನ ಆಹಾರ ಪಡೆದುಕೊಳ್ಳುವುದನ್ನು ಕಂಡುಕೊಂಡಿದ್ದು. ಭೂಮಿ ಬಳಸಬಹುದಾದ ವಸ್ತು, ತಾನು ಅದರ ಮಾಲಿಕ - ಪ್ರಭು ಅನ್ನುವ ಅಮಲು ಅವನ ತಲೆಗೆ ಹೊಕ್ಕಿತು.

**ಭೂ ಸಂಪತ್ತು** : ವಿಶ್ವದ ಭೂಮೇಲ್ಮೈ ವಿಸ್ತಾರ ೧೯೨೫ ಕೋಟಿ ಎಕರೆಗಳು, ಅದರಲ್ಲಿ ೨೭೫ ಕೋಟಿ ಎಕರೆ ಪ್ರದೇಶ ಸಾಗುವಳಿಯಾಗಿದೆ. ಭಾರತದ ೮೨ ಕೋಟಿ ಎಕರೆ ಭೂ ಪ್ರದೇಶದಲ್ಲಿ ೫೦ ಕೋಟಿ ಎಕರೆ ಭೂಮಿಯಲ್ಲಿ ಬೆಳೆ ಸಾಧ್ಯ. ಅದರಲ್ಲಿ ೩೫.೫ ಕೋಟಿ ಎಕರೆ ಸಾಗಾಗಿದೆ. ಇದು ಪ್ರಕೃತಿ ನಮಗೆ ಎಷ್ಟೊಂದು ಅನುಕೂಲಕರವಾಗಿದೆ ಎನ್ನುವುದನ್ನು ಶ್ರುತಪಡಿಸುತ್ತದೆ. ಸಮೃದ್ಧ ಮಳೆಯ ಕಾರಣ ೨೫ ಕೋಟಿ ಎಕರೆ ಜಮೀನಿಗೆ ನೀರಾವರಿ ಕಲ್ಪನೆ ಸಾಧ್ಯವಿದೆ. ಅದರಲ್ಲಿ ೧೨.೫ ಕೋಟಿ ಎಕರೆಗೆ ನೀರಾವರಿ ಸೌಲಭ್ಯ ಇದ್ದು ಒಟ್ಟು ೧೬.೨೫ ಕೋಟಿ ಎಕರೆಯಲ್ಲಿ ನೀರಾವರಿ ಬೆಳೆ ತೆಗೆಯಲಾಗುತ್ತಿದೆ. ಉಳಿದ ಭೂಮಿಗಳಲ್ಲಿ ಬೆಳೆ, ಮಳೆ ಪ್ರಮಾಣ - ಹರವಿನಷ್ಟೇ ನಿಶ್ಚಯ ಇಲ್ಲವೇ ಅನಿಶ್ಚಯ.

ಕರ್ನಾಟಕದ ೪೭೫ ಲಕ್ಷ ಎಕರೆ ಭೂ ಪ್ರದೇಶದಲ್ಲಿ ೩೦೭.೫ ಲಕ್ಷ ಎಕರೆ ಉಳುಮೆಯಾಗಿದೆ. ಅದರಲ್ಲಿ ಹಾಲಿ ಬೀಳು ೫೨.೫ ಲಕ್ಷ ಎಕರೆ. ಉಳಿದ ಭೂಮಿಯ ವಿಂಗಡನೆ ಹೆಕ್ಟೇರುಗಳಲ್ಲಿ (೧ ಹೆ. = ೨.೫ ಎಕರೆ):

ಕಾಡು - ೨೯ ಲಕ್ಷ (ಶೇ. ೧೫); ಖಾಯಂ ಹುಲ್ಲುಗಾವಲು ಅಥವಾ ಗೋಮಾಳ, ತೋಪು ಇತ್ಯಾದಿ - ೧೮ ಲಕ್ಷ (ಶೇ. ೯.೫); ವ್ಯವಸಾಯೇತರ ಅಂದರೆ, ಹಳ್ಳಿ, ಊರು, ಪಟ್ಟಣ, ರಸ್ತೆ, ಇತ್ಯಾದಿ - ೧೮ ಲಕ್ಷ (ಶೇ. ೯.೫)

ಭಾರತಮಟ್ಟದಲ್ಲಿ ೩೨.೮ ಕೋಟಿ ಹೆಕ್ಟೇರ್ ಭೂಮಿ ವಿಂಗಡಣೆ : ಶೇಕಡವಾರು ಸಾಗುವಳಿ ಭೂಮಿ - ೪೫, ಬೀಳು - ೭, ಕಾಡು - ೨೨, ಗೋಮಾಳ ಇತ್ಯಾದಿ - ೧೧, ವ್ಯವಸಾಯೇತರ - ೧೫. ಸ್ವಾಭಾವಿಕ ಪರಿಸ್ಥಿತಿಯಲ್ಲಿ ಭೂಮಿಯ ಸಸ್ಯ ಹೊದಿಕೆಯ ಸಾಂದ್ರತೆ ಹಾಗೂ ವೈವಿಧ್ಯತೆ ವಾಯುಗುಣವನ್ನವಲಂಬಿಸಿರುತ್ತದೆ.

ಯಾವುದೇ ಭೂಮಿಯಲ್ಲಿ ಬೆಳೆ ಯಶಸ್ಸು ಮಣ್ಣಿನ ಅನುಕೂಲ ಪರಿಸ್ಥಿತಿ ಅಂದರೆ ನೀರು, ಫಲವತ್ತು, ಗಾಳಿ ತೂರುವಿಕೆ, ನೀರು ಬಸಿಯುವಿಕೆ ಇವುಗಳನ್ನು ಅವಲಂಬಿಸಿರುತ್ತದೆ.

ಕಳೆದ ೨೦೦ ವರ್ಷಗಳಲ್ಲಿ ರಸಾಯನ ಶಾಸ್ತ್ರ, ಸಸ್ಯ ಶರೀರ ಶಾಸ್ತ್ರ, ಭೌತಶಾಸ್ತ್ರ ಇವುಗಳಲ್ಲಿನ ಪ್ರಗತಿಯ ಅನ್ವಯದಿಂದ ಸಸ್ಯ ಬೆಳವಣಿಗೆಯನ್ನು ಕುರಿತು ಸಾಕಷ್ಟು ಅಧ್ಯಯನ ಆಗಿದೆ. ಗಣನೀಯ ತಿಳುವಳಿಕೆ ಒದಗಿದೆ. ಇದರ ಫಲವಾಗಿ ಗೊಬ್ಬರಗಳ ಬಳಕೆ, ನೀರಾವರಿ, ಮಣ್ಣುಗಳನ್ನು ಅವುಗಳ ಸಾಮರ್ಥ್ಯಕ್ಕನುಗುಣವಾಗಿ ಅಭಿವೃದ್ಧಿ ಪಡಿಸುವ ಪರಿಪಾಠ ಬೆಳೆದುಬಂದಿದೆ. ಪಾಶ್ಚಾತ್ಯ ದೇಶಗಳಲ್ಲಿ ಕೃಷಿಯಲ್ಲಿ ವ್ಯಾಪಕ ಯಾಂತ್ರೀಕರಣ ಹಾಗೂ ರಾಸಾಯನಿಕಗಳ ಬಳಕೆ ಎದ್ದು ಕಾಣುವ ಅಂಶ. ನಮ್ಮಲ್ಲೂ ಅನುಕೂಲಸ್ಥ ರೈತರು ಇತ್ತ ಸಾಗುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸಂತತ ಬೇಸಾಯ, ಮುಂತಾದ ಪದ್ಧತಿಗಳ ಬಗ್ಗೆ ಆಸಕ್ತಿ ಕೆರಳಿದೆ. ಇದರ ಮುಖ್ಯ ಅಂಶಗಳೆಂದರೆ ಆದಷ್ಟು ಪ್ರಾಣಿ - ಸಸ್ಯಮೂಲ ಗೊಬ್ಬರಗಳು, ಕೀಟ - ರೋಗ ಮಾರಕಗಳನ್ನು ಬಳಸಿ ಪ್ರಕೃತಿಯಲ್ಲಿ ತಾನೇ ತಾನಾಗಿರುವ ಎಲ್ಲ ವಸ್ತುಗಳ ಪುನರಾವರ್ತಿಯನ್ನು ಕಾಪಾಡಿಕೊಳ್ಳುವುದು. ಆದಷ್ಟು ಪ್ರಕೃತಿ ಪ್ರಕ್ರಿಯೆಗಳನ್ನು ಅನುಸರಿಸಿ ಅದರ ಮೇಲೆ ಆಗುತ್ತಿರುವ ದಾರುಣ ಅಸಮತೋಲನಕ್ಕೆ ಕಡಿವಾಣ ಹಾಕುವುದು. ನಾವು ಈ ದೃಷ್ಟಿಕೋನಗಳನ್ನು ಪರಿಶೀಲಿಸುವಾಗ ನಮ್ಮಲ್ಲಿ ಅನೂಚಾನವಾಗಿ ನಡೆದು ಬಂದಿರುವ ಸಾಂಪ್ರದಾಯಿಕ ಕೃಷಿವಿಧಾನ ಈ ಅಂಶಗಳನ್ನು ಧಾರಾಳವಾಗಿ ಒಳಗೊಂಡಿರುವುದನ್ನು ಕಾಣುತ್ತೇವೆ. ಇದನ್ನು ಬದಲಾಗುತ್ತಿರುವ ಕೃಷಿ ಅವಶ್ಯಕತೆಗಳಿಗೆ ವಿವೇಚನೆಯಿಂದ ಅಳವಡಿಸಿಕೊಳ್ಳುವತ್ತ ಪ್ರಯತ್ನ ಆಗತ್ಯ.

**ಭೂ ಬಳಕೆಯ ಸಾಮಾಜಿಕ ಆರ್ಥಿಕ ಲಕ್ಷಣಗಳು**

ಹಳ್ಳಿಗಾಡಿನಲ್ಲಿ, ರೈತನ ಅಸ್ತಿತ್ವಕ್ಕೆ ತಳಹದಿ ತುಂಡು ಭೂಮಿ, ಅದಿಲ್ಲದವ ಅತಂತ್ರ. ದೇಶದಲ್ಲಿನ ೧೪೨ ಮಿಲಿಯನ್ ಹೆಕ್ಟೇರ್ ಸಾಗುವಳಿ ಭೂಮಿಯು ೮೨ ಮಿಲಿಯನ್ ಹಿಡುವಳಿಗಳಾಗಿ ಹಂಚಿ ಹರಿದು ಹೋಗಿದೆ (೧೦ ಮಿ = ೧ ಕೋಟಿ). ಸರಾಸರಿ ಹಿಡುವಳಿಯ ವಿಸ್ತೀರ್ಣ ೨ ಹೆಕ್ಟೇರಿಗಿಂತ ಕಡಿಮೆ. ತಲಾವಾರು ಒದಗುವ ಭೂಮಿ ೦.೧೪ ಹೆಕ್ಟೇರ್.

ಹಿಡುವಳಿಗಳ ವರ್ಗೀಕರಣ : ಹಿಡುವಳಿಗಳನ್ನು ವಿಸ್ತೀರ್ಣದ ಆಧಾರದ ಮೇಲೆ : ೧. ತೀರಾ ಸಣ್ಣ (೦.೫ ಹೆಕ್ಟೇರಿಗಿಂತ ಕಡಿಮೆಯವು), ೨. ಅತಿ ಸಣ್ಣ (೦.೪ ರಿಂದ ೧.೦ ಹೆಕ್ಟೇರ್ ಅಂತರದಲ್ಲಿನವು), ೩. ಸಣ್ಣ (೧ ರಿಂದ ೨ ಹೆಕ್ಟೇರ್ ಅಂತರದಲ್ಲಿನವು), ೪. ಉಪಮಾಧ್ಯಮ (೨ ರಿಂದ ೪ ಹೆಕ್ಟೇರ್ ಒಳಗಿನವು), ೫. ಮಧ್ಯದ್ದು (೪ ರಿಂದ ೧೦ ಹೆಕ್ಟೇರ್ ಅಂತರದವು), ಮತ್ತು ೬. ದೊಡ್ಡದು (೧೦ ಹೆಕ್ಟೇರ್‌ಗಿಂತ ಜಾಸ್ತಿ) ಎಂದು ಹೆಸರಿಸುತ್ತಾರೆ.

ರಾಷ್ಟ್ರಮಟ್ಟದಲ್ಲಿ ೧೯೭೦-೭೫ರ ರಾಷ್ಟ್ರೀಯ ಸ್ಯಾಂಪಲ್ ಅಧೀಕ್ಷಣದ ವರದಿಯಂತೆ ೮೨ ಮಿಲಿಯನ್ ಹಿಡುವಳಿಗಳ ವಿತರಣೆ ಹೀಗಿದೆ : ಅತಿಸಣ್ಣ : ೪೪.೫ ಮಿಲಿಯನ್; ಸಣ್ಣ: ೧೪.೫ ಮಿಲಿಯನ್; ಉಪಮಾಧ್ಯಮ : ೧೧.೫ ಮಿಲಿಯನ್, ಮಧ್ಯದ್ದು : ೮.೨ ಮಿಲಿಯನ್ ಮತ್ತು ದೊಡ್ಡದು : ೨.೫ ಮಿಲಿಯನ್. ಒಟ್ಟು ಹಿಡುವಳಿಯಲ್ಲಿ ಇವುಗಳ ಶೇಕಡ ಪಾಲು ಅನುಕ್ರಮವಾಗಿ ೪೪.೫, ೧೮.೦, ೧೪.೩, ೧೦.೧ ಹಾಗೂ ೩.೦. ೧೯೯೦-೯೧ರ ಗಣತಿ ಮೇರೆಗೆ ಸಣ್ಣ - ಅತಿಸಣ್ಣ ಹಿಡುವಳಿಗಳ ಪ್ರಮಾಣ ಶೇ. ೭೮. ಅವುಗಳ ಒಟ್ಟು ಭೂ ವಿಸ್ತೀರ್ಣದ ಪಾಲು ಶೇ. ೨೨.

ಗ್ರಾಮೀಣ ಅಭಿವೃದ್ಧಿಯ ಗುರಿ ನಮ್ಮ ಕೋಟ್ಯಾಂತರ ಜನರಿಗೆ ಕನಿಷ್ಠ ಮಟ್ಟದಲ್ಲಾದರೂ ಅನ್ನ, ಬಟ್ಟೆ, ವಸತಿ, ಆರೋಗ್ಯ, ನೈರ್ಮಲ್ಯ, ವಿದ್ಯಾಭ್ಯಾಸಗಳ ಕಲ್ಪನೆ. ಸ್ವಾತಂತ್ರ್ಯದೀಚಿನ ೫೦ ವರ್ಷಗಳಲ್ಲಿ ಅನೇಕ

ಯೋಜನೆಗಳಾಗಿವೆ. ಕಾರ್ಯಕ್ರಮಗಳು ರೂಪಿತವಾಗಿವೆ. ಅವೆಲ್ಲ ಬಹುಮಟ್ಟಿಗೆ ಸದುದ್ದೇಶಗಳಾಗಿಯೇ ಉಳಿದು ಹೋಗಿವೆ. ಕೆಲವು ಕೇವಲ ಘೋಷಣೆಗಳಾಗಿ ದಾರಿ ತಪ್ಪಿವೆ. ದೇಶದ ಮುಂದಿರುವ ಸವಾಲು ಇತಿಮಿತಿಗಳಿಂದ ಕೂಡಿದ ಭೂ ಸಂಪತ್ಸಾಧನವನ್ನು ವಿವೇಚನೆಯಿಂದ ಬಳಸಿ ಅದನ್ನೇ ಅವಲಂಬಿಸಿರುವ ಜನಸ್ತೋಮದ ಉನ್ನತಿಯ ದಿಸೆಯಲ್ಲಿ ಮುನ್ನಡೆ. ಈ ಸವಾಲನ್ನೆದರಿಸಲು ಒಂದು **ಹೊಸ ಚಿಂತನ**, ಒಂದು **ಹೊಸ ದೃಷ್ಟಿ** ಅವಶ್ಯಕ ಎಂದು ಕಾಣುತ್ತೆ.

ಏನೇ ಕಾರಣ ಒಡ್ಡಿದರೂ ಆದ್ಯ ಉತ್ಪಾದಕ ಮೂಲ ವಾದ ನಮ್ಮ ಭೂಮಿ ಹೀನಸ್ಥಿತಿಯಲ್ಲಿದೆ. ಸಮೃದ್ಧ ಮಳೆ - ಸೂರ್ಯ ರಶ್ಮಿ, ವರ್ಷದುದ್ದಕ್ಕೂ ಒಂದಲ್ಲ ಒಂದು ಬೆಳೆ ತೆಗೆಯಬಲ್ಲ ಅನುಕೂಲ ಹವಾಗುಣ, ಸಾಕಷ್ಟು ನೀರಾವರಿ ಎಲ್ಲ ಇದ್ದರೂ ನಮ್ಮ ವ್ಯವಸಾಯೋತ್ಪನ್ನ ತೀರಾ ಸಾಧಾರಣ. ಅನೇಕ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ದೇಶಗಳಿಗೆ ಹೋಲಿಸಿದರೆ, ಭತ್ತ, ಗೋಧಿ, ಉಳಿದ ಧಾನ್ಯ ಬೆಳೆಗಳ ಸರಾಸರಿ ಇಳುವರಿ ತುಂಬಾ ಕನಿಷ್ಠ. ಬಹುಸಂಖ್ಯೆಯಲ್ಲಿರುವ ಸಣ್ಣ ಹಿಡುವಳಿ ರೈತಾಪಿ ಜನರ ಬೇಸಾಯೋದ್ಯಮ ಮಳೆಯಷ್ಟೇ ಅನಿಶ್ಚಿತ. ಈ ಭೂಮಿಗಳು ಕೆಟ್ಟು, ಒಣಗಿ ಬರಡಾಗಿ ಬಡವಾಗಿವೆ. ತತ್ಫಲ ರೈತರು ಬಡವರಾಗಿದ್ದಾರೆ. ಇದೊಂದು ವಿಷವೃತ್ತ. ಭೂಮಿ ಸುಧಾರಿಸದೆ ಉತ್ಪನ್ನ ವೃದ್ಧಿಯಾಗುವುದಿಲ್ಲ. ಅವರು ಉದ್ಯಮಶೀಲರಾಗಿ ಉಳುಮೆಯ ಜೊತೆಗೆ ತಮ್ಮನ್ನು ಒಂದಲ್ಲ ಒಂದು ಉತ್ಪಾದನಾ ಕೆಲಸದಲ್ಲಿ ತೊಡಗಿಸಿ ಕೊಂಡು ಸರ್ವತೋಮುಖ ಬೆಳವಣಿಗೆಗೆ ಕಾರಣರಾಗಬೇಕು. ಅವರಿರುವೆಡೆಯೇ ಹೆಚ್ಚು ಹೆಚ್ಚು ಕೆಲಸ ಒದಗಿಸಬೇಕು. ಪಟ್ಟಣಗಳಲ್ಲಿ ಕೈಗಾರಿಕೀಕರಣದಿಂದ ಇಷ್ಟೊಂದು ಜನಕ್ಕೆ ಕೆಲಸ ಒದಗಿಸುವುದು ಅಸಾಧ್ಯ.

ನಮ್ಮ ಹೊಲದ ಭೂಮಿಗಳು ಜೀವಕೊಡಬಲ್ಲ ದನದ ಗೊಬ್ಬರ, ಹಸಿರು ಗೊಬ್ಬರ ಈ ಬಗೆಯ ಉಪಚಾರದಿಂದ ವಂಚಿತವಾಗಿವೆ. ಅವುಗಳು ಬಿದ್ದ ಮಳೆನೀರನ್ನು ಉಳಿಸಿ ಕೊಳ್ಳುವ ಸಾಮರ್ಥ್ಯ ಮತ್ತು ಫಲವತ್ತನ್ನು ಕಳೆದುಕೊಂಡಿವೆ.

ಬೆಳೆ ಹೇಗೋ ಹಾಗೆಯೇ ದನ, ಕೋಳಿ, ಕುರಿ, ಮೊಲ ಇಂಥವುಗಳ ಸಾಗಣೆ ರೈತನ ಜೀವನದ ಅವಿಭಾಜ್ಯ ಅಂಗ. ತನಗೆ ಲಭ್ಯವಿರುವ ಜಮೀನಿನಲ್ಲಿ ಅದು ಸಣ್ಣದಿರಲಿ, ದೊಡ್ಡದಿರಲಿ ಧಾನ್ಯದ ಬೆಳೆಗಳ ಜೊತೆ ಮೇವು ಒದಗಿಸಬಲ್ಲ ಗಿಡಮರಗಳನ್ನು ಅಂಚಿನಲ್ಲಿ ಬದುಗಳ ಮೇಲೆ ಇಳಿಜಾರಿಗೆ ಎದುರಾಗಿ ಸಮಪಾತಳಿ ಸಾಲುಗಳಲ್ಲಿ ವ್ಯಾಪಕವಾಗಿ ಬೆಳೆಯುವುದು ಮೊದಲ ಹೆಜ್ಜೆ. ಇತ್ತೀಚೆಗೆ ಮೇವು, ಸೊಪ್ಪು, ಉರುವಲು, ಸಣ್ಣ ನಾಟಿ ಒದಗಿಸಬಲ್ಲ ಹಲವಾರು ಬಹು ಉಪಯೋಗಿ ಮರ ಗಿಡಗಳು ಜನಪ್ರಿಯವಾಗುತ್ತಾ ಬಂದಿವೆ. ಇವುಗಳೊಟ್ಟಿಗೆ ಜಮೀನಿನ ಮೂಲೆಗಳಲ್ಲಿ, ಸರಹದ್ದಿನಲ್ಲಿ, ಇತರ ಸೂಕ್ತ ಸ್ಥಳಗಳಲ್ಲಿ ಹುಣಸೆ, ಹಲಸು, ಬೇವು, ಹಿಪ್ಪೆ, ಹೊಂಗೆ, ಮಾವು ಈ ರೀತಿಯ ವರಮಾನ ತರಬಲ್ಲ ಮರಗಳನ್ನು ಬೆಳೆಯಬಹುದು. ಒಂದು ಕ್ರಮಬದ್ಧ ರೀತಿಯಲ್ಲಿ ಅಳವಡಿಸಿಕೊಂಡ ಈ ಮರಗಿಡಗಳು ಗಾಳಿಗೆ ಮಣ್ಣಿನ ಕೆಚ್ಚಣೆಗೆ ಪರಿಣಾಮಕಾರಿಯಾದ ತಡೆಯಾಗುತ್ತವೆ. ನೀರು ಹರಿದು ಕೆಚ್ಚದೆ ಭೂಮಿಯಲ್ಲಿ ಇಳಿದು ಅದರ ತಂಪು ಹೆಚ್ಚಿ ಅಂತರ್ಜಲ ವೃದ್ಧಿಯಾಗುತ್ತದೆ. ಹಳ್ಳಿಗಾಡು ಹಸಿರಾಗುವು ದಲ್ಲದೆ ರೈತನಿಗೆ ಸ್ವಪ್ರಯತ್ನದಿಂದಲೇ ಮೇವು,ಉರುವಲು, ಸೊಪ್ಪು, ಸಣ್ಣಪುಟ್ಟ ನಾಟಿ ದೊರೆಯುವುದರಿಂದ ಅವಕ್ಕಾಗಿ ಅವನಿಂದ ಕಾಡಿನ ಮೇಲಿನ ಒತ್ತಡ ಕಡಿಮೆಯಾಗುತ್ತದೆ. ಒಟ್ಟಾರೆ ಪರಿಸರ ಸುಧಾರಣೆಯಾಗುತ್ತೆ.

ಕೇವಲ ೧-೨ ಚೀಲ ಧಾನ್ಯ ಕೊಡುತ್ತಿದ್ದ ಸಣ್ಣಪುಟ್ಟ ಹೊಲ, ಮೇವು, ಸೊಪ್ಪು, ಸೌದೆ ಅವುಗಳಿಂದ ಹೊರಹೊಮ್ಮುವ ಪಶುಸಂಗೋಪನೆ ಇಂಥ ಅನೇಕ ಚಟುವಟಿಕೆಗಳಿಗೆ ನೆಲೆಯಾಗಿ ಅದರ ಉತ್ಪಾದನೆ ಹೆಚ್ಚಿ ಅದನ್ನವಲಂಬಿಸಿದ ರೈತನ ಜೀವನ ಸುಧಾರಣೆಗೆ ದಾರಿ. ಜಮೀನು, ಚಟುವಟಿಕೆ ಲಾಭದಾಯಕವಾಗಿ ಬಂಡ ವಾಳದ ಕೇಂದ್ರವಾದಂತೆ ರೈತ ತನ್ನ ನೆಲೆಯನ್ನು - ವಾಸಸ್ಥವನ್ನು, ಹಳ್ಳಿಗಳ ಕೊಳುಕು - ಕೊಚ್ಚೆಗಳಿಂದ ನಿರ್ಮಲ ವಿಶಾಲ ಜಮೀನು ಆವರಣಕ್ಕೆ ಬದಲಿಸುವ ಸಾಧ್ಯತೆ ಸಮಗ್ರ ಗ್ರಾಮೀಣ ಅಭ್ಯುದಯದಲ್ಲಿ ಒಂದು ಅತ್ಯಂತ ಅಪೇಕ್ಷಣೀಯ ಹೆಜ್ಜೆ. ಅಗ್ರೋ ಫಾರೆಸ್ಟ್ರಿ ಎಂದು ಕರೆಯುವ ಈ ಭೂ ಬಳಕೆ ವಿಧಾನದಿಂದ ಮಹಾನ್ ಸಮಾಜ ಸುಧಾರಕರಾದ ಗಾಂಧೀಜಿ, ಹೆನ್ರಿ, ಜಾರ್ಜ್ ಷೂಮಾಕರ್‌ರಂಥವರು ಪ್ರತಿಪಾದಿಸಿದ ಸರಳ ಸುಂದರ ಸಂಪದ್ಯುಕ್ತ ಮಾನವೀಯ ಜೀವನಶೈಲಿಗೆ ನಾಂದಿ. ಪರಿಸರಪರ ಗ್ರಾಮೀಣಾಭಿವೃದ್ಧಿ ಸಾಧನೆಯ ದಿಸೆಯಲ್ಲಿ ನಮ್ಮೆಲ್ಲರ ಕಳಕಳಿಯ ಚಿಂತನೆ ಅಗತ್ಯ.

**ಪ್ರೊ॥ ಬಿ. ವಿ. ವೆಂಕಟರಾವ್**
ನಿವೃತ್ತ ಪ್ರಾಧ್ಯಾಪಕರು, ಕೃಷಿವಿಶ್ವವಿದ್ಯಾಲಯ, ಬೆಂಗಳೂರು.

ವ್ಯವಸ್ಥೆಯ ಗರ್ಭದಿಂದ

# ಮೀಸಾ ಟಾಡಾ ನಂತರ ಮತ್ತೊಂದು ಕರಾಳ ಶಾಸನ

ಹೊಸ ಆರ್ಥಿಕ ನೀತಿಗೆ ಪೂರಕವಾಗಿ ಸಂವಿಧಾನದ ಪರಾಮರ್ಶೆ, ಕಾರ್ಮಿಕ ಕಾನೂನುಗಳ ಮಾರ್ಪಾಡು, ಪೇಟೆಂಟ್ಸ್ ಕಾನೂನು, ಕಂಪೆನಿ ಕಾನೂನಿಗೆ ತಿದ್ದುಪಡಿ, ಇತ್ಯಾದಿಗಳ ಹಿನ್ನೆಲೆಯಲ್ಲೇ ಮತ್ತೊಂದು ಕಾನೂನಿನ ಜನನಕ್ಕೆ ಸೂಲಗಿತ್ತಿಯಾಗಲು ಹೊರಟಿದೆ ವಾಜಪೇಯಿ ನೇತೃತ್ವದ ಕೇಂದ್ರ ಸರಕಾರ. ''ಭಯೋತ್ಪಾದಕತೆ ತಡೆಗಟ್ಟುವಿಕೆ ಮಸೂದೆ'' ಸಂಸತ್ತಿನ ಮುಂದೆ ಮುಂದಿಡಲಾಗುವುದೆಂದು ಕೇಂದ್ರ ಸರಕಾರ ಘೋಷಿಸಿದೆ. ಪ್ರಧಾನ ಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಈ ಮಸೂದೆ ಮಾನವ ಹಕ್ಕುಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ಆತಂಕವಾದವನ್ನು ತಡೆಗಟ್ಟುವುದಕ್ಕೆ ಅತ್ಯಂತ ಸಮರ್ಪಕ ಸಾಧನವಾಗುತ್ತದೆಂದು ಈಗಾಗಲೇ ಸಾರಿದ್ದಾರೆ. ಆದರೆ ಹಿಂದಿನ ಕಾನೂನು ಮಂತ್ರಿ ಶ್ರೀ ರಾಂ ಜೇತ್‌ಮಲಾನಿ ಅಪರೂಪವಾಗಿ ಈ ಮಸೂದೆಯ ವಿರುದ್ಧ ಧ್ವನಿಯೆತ್ತಿದ್ದಾರೆ. ಈ ರೀತಿಯ ಕಾನೂನು ಪೊಲೀಸ್ ಯಂತ್ರಕ್ಕೆ ಅನಗತ್ಯವಾಗಿ ಹೆಚ್ಚಿನ ಅಧಿಕಾರ ನೀಡಿ ಅದರ ದುರ್ಬಳಕೆಗೆ ಕಾರಣವಾಗುತ್ತದೆಂದು ಇವರ ವಾದ. ತಮ್ಮ ಈ ಅಭಿಪ್ರಾಯವನ್ನು ಕೇಂದ್ರ ಮಂತ್ರಿಮಂಡಳದ ಮುಂದೆ ಮಂಡಿಸುವುದಾಗಿ ಸಾರಿದ ಶ್ರೀ ಜೇತ್‌ಮಲಾನಿ ಶ್ರೀಕೃಷ್ಣ ಆಯೋಗದ ವರದಿಯ ಸಂಬಂಧವಾಗಿ ಸರ್ವೋಚ್ಚ ನ್ಯಾಯಾಲಯದ ಬಗ್ಗೆ ಮಾಡಿದ ಟೀಕೆಯ ಹಿನ್ನೆಲೆಯಲ್ಲಿ ಪ್ರಧಾನ ಮಂತ್ರಿಯವರ ಆದೇಶದ ಮೇರೆಗೆ ಕಾನೂನು ಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬಂದಿರುವುದು ಈಗಾಗಲೇ ಹಳೆಯ ಸುದ್ದಿ.

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ''ಭಯೋತ್ಪಾದಕತೆ ತಡೆಗಟ್ಟುವಿಕೆ ಮಸೂದೆ''ಯ ಬಗ್ಗೆ ತನ್ನ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದೆ. ಇಂತಹ ಕಾನೂನು ಅನಗತ್ಯವೆಂದು ವಾದಿಸುತ್ತಾ ಆಯೋಗವು ಮಸೂದೆಯ ಅನೇಕ ಅಂಶಗಳು ಮಾನವ ಹಕ್ಕುಗಳ ಪ್ರತಿರೋಧವಾಗಿದೆ ಮತ್ತು ಆತಂಕವಾದವನ್ನು ಎದುರಿಸಲು ಈಗಿರುವ ಕ್ರಿಮಿನಲ್ ಕಾನೂನುಗಳು ಸಾಕು ಎಂದು ತಿಳಿಸಿದೆ. ಈ ಮಸೂದೆಯ ಅಗತ್ಯ ಮತ್ತು ರೂಪರೇಷೆಯನ್ನು ಕಾನೂನು ಆಯೋಗ ತನ್ನ ವರದಿಯಲ್ಲಿ ಶಿಫಾರಸ್ಸು ಮಾಡಿದೆಯೆಂಬ ಕಾರಣವನ್ನು ಮುಂದೊಡ್ಡಿ ಇದನ್ನು ಅನುಷ್ಠಾನಕ್ಕೆ ತರುವ ತರಾತುರಿಯನ್ನು ಬಿಜೆಪಿ ನೇತೃತ್ವದ ಕೇಂದ್ರ ಸರಕಾರ ತೋರಿಸುತ್ತಿದೆ. ಸರ್ಕಾರದ ಮಿತ್ರಪಕ್ಷಗಳು ಬಸವಣ್ಣನಂತೆ ತಲೆದೂಗುತ್ತಿವೆ.

ಈ ವಿವಾದಾಸ್ಪದ ''ಭಯೋತ್ಪಾದಕತೆ ತಡೆಗಟ್ಟುವಿಕೆ ಮಸೂದೆ'' ೧೯೮೭ರಲ್ಲಿ ಜಾರಿಗೆ ಬಂದ ''ಭಯೋತ್ಪಾದಕ ಹಾಗೂ ವಿಚ್ಛಿದ್ರಕಾರಕ ಚಟುವಟಿಕೆ (ತಡೆಯುವಿಕೆ) ಕಾಯ್ದೆ''ಯ ಪ್ರತಿರೂಪ. ಟಾಡಾ ಇದರ ಸಂಕ್ಷಿಪ್ತ ಹೆಸರು. ಸಾಕಷ್ಟು ವಿರೋಧವಿದ್ದರೂ ಈ ಟಾಡಾ ಕಾಯ್ದೆ ದೇಶದ ಅಖಂಡತೆ ಮತ್ತು ಹಿತಕ್ಕೆ ಅಗತ್ಯವೆಂದು ಸಬೂಬು ಹೇಳಿ ಅಂದಿನ ರಾಜೀವ್ ಗಾಂಧಿ ನೇತೃತ್ವದ ಕಾಂಗ್ರೆಸ್ ಸರಕಾರ ಜಾರಿಗೆ ತಂದರೂ, ೧೯೯೫ರ ಹೊತ್ತಿಗೆ ೨೨ ರಾಜ್ಯ ಸರಕಾರಗಳು ಅಗತ್ಯವಿರಲಿ - ಇಲ್ಲದಿರಲಿ, ಈ ಕಾಯ್ದೆಯನ್ನು ತಮ್ಮ ರಾಜ್ಯಗಳಿಗೆ ಅಳವಡಿಸಿಕೊಂಡರೂ, ಭಯೋತ್ಪಾದಕತೆಯನ್ನಾಗಲಿ, ವಿಚ್ಛಿದ್ರಕಾರಕ ಚಟುವಟಿಕೆಗಳನ್ನಾಗಲಿ ತಡೆಯಲು ಸಂಪೂರ್ಣವಾಗಿ ವಿಫಲವಾಗಿವೆಯೆನ್ನುವುದು ವಸ್ತುಸತ್ಯ. ಅಂಕಿ - ಅಂಶಗಳ ಪ್ರಕಾರ ೧೯೮೭ರ ಟಾಡಾ ಕಾಯ್ದೆಯನ್ವಯ ಸುಮಾರು ೫೩,೦೦೦ ಪ್ರಕರಣಗಳನ್ನು ದಾಖಲಿಸಿಕೊಂಡರೂ ಕೇವಲ ೪೪೮ ಪ್ರಕರಣಗಳು ಮಾತ್ರ ಶಿಕ್ಷೆಯಲ್ಲಿ ಕೊನೆಗೊಂಡವು ಎಂಬ ಗಮನಾರ್ಹ ಅಂಶ ಈ ಕಾಯ್ದೆಯ ವ್ಯಾಪಕ ದುರುಪಯೋಗಕ್ಕೆ ಸಾಕ್ಷಿ. ರಾಜಕಾರಣಿ - ಅಧಿಕಾರಿ - ಪೊಲೀಸ್ ಕೂಟದ ತೀಟೆಗೆ ಅನೇಕ ನಿರಪರಾಧಿಗಳು ಈ ಕಾನೂನಿಗೆ ಬೇಟೆಯಾಗಿ ಬಲಿಯಾದ ಸಹಸ್ರಾರು ಪ್ರಕರಣಗಳು ಬೆಳಕಿಗೆ ಬಂದಿವೆ. ವಿಚ್ಛಿದ್ರಕಾರಕ ಚಟುವಟಿಕೆಗಳಲ್ಲಿ ತೊಡಗಿದ್ದಾರೆಂಬ ಶಂಕೆಗೆ ಗುರಿಯಾದ ತಮ್ಮ ಗಂಡಂದಿರಿಗೆ ''ಆಶ್ರಯ'' ಕೊಟ್ಟರೆಂಬ ಆಪಾದನೆಯ ಮೇಲೆ ಹೆಂಡತಿ - ಮಕ್ಕಳನ್ನು ಬಂಧಿಸಿ ಜೈಲಿಗೆ ಹಾಕಿದ್ದು, ಇಬ್ಬರು ಕಾಲೇಜು ವಿದ್ಯಾರ್ಥಿಗಳು ಹೆಣ್ಣು ಮಕ್ಕಳನ್ನು ಚುಡಾಯಿಸಿದರೆಂದು ಆರೋಪಿಸಿ ಟಾಡಾದನ್ವಯ ಅವರನ್ನು ಬಂಧಿಸಿದ್ದು, ಗ್ಯಾಟ್ ಒಪ್ಪಂದದ ವಿರುದ್ಧ ಪ್ರತಿಭಟಿಸಿದ ಪ್ರಗತಿಪರ ಮಹಿಳೆಯರನ್ನು ಬಂಧಿಸಿದ್ದು ಈ ಕಾಯ್ದೆಯ ದುರುಪಯೋಗದ ಕೆಲವು ನಿದರ್ಶನಗಳು ಮಾತ್ರ. ಅಸಂಖ್ಯಾತ ಪ್ರಕರಣಗಳು ಬೆಳಕಿಗೆ ಬಂದಿಲ್ಲ. ಸರ್ವೋಚ್ಚ ನ್ಯಾಯಾಲಯ ಟಾಡಾ ಪ್ರಕರಣವೊಂದರ ನಡೆವಳಿಕೆಯ ಸಂದರ್ಭದಲ್ಲಿ ಟಾಡಾವನ್ನು ಆರ್.ಡಿ.ಎಕ್ಸ್.ನ್ನಾಗಿ ಪರಿವರ್ತಿಸಬೇಡಿ ಎಂದು ಸರಕಾರಕ್ಕೆ ಎಚ್ಚರಿಕೆ ನೀಡಿತ್ತು. ನಿವೃತ್ತ ನ್ಯಾಯಮೂರ್ತಿ ಶ್ರೀ ಕೃಷ್ಣ ಅಯ್ಯರ್ ಅವರು ಟಾಡಾವನ್ನು ತುರ್ತು ಪರಿಸ್ಥಿತಿಯ ಶಿಶುವೆಂದು ಹೀಗಳೆದಿದ್ದರು. ೧೯೯೨ - ೯೩ರಲ್ಲಿ ಮುಂಬೈನಲ್ಲಿ ನಡೆದ ಕೋಮುಗಲಭೆಯ ಸಂದರ್ಭದಲ್ಲಿ ಟಾಡಾ ಅಡಿಯಲ್ಲಿ ಬಂಧಿಸುವುದಾಗಿ ಹೆದರಿಸಿ ಅಸಹಾಯಕ ಜನರಿಂದ ಪೊಲೀಸರು ದುಡ್ಡು ಕಿತ್ತಿದ್ದು ಕೂಡ ಬೆಳಕಿಗೆ ಬಂದಿದೆ. ಈ ಕರಾಳ ಶಾಸನದ ವಿರುದ್ಧ ಜನತೆಯ ಪ್ರತಿಭಟನೆ ಹಾಗೂ ಆಕ್ರೋಶದ ಫಲವಾಗಿ ೧೯೯೫ರಲ್ಲಿ ಇದನ್ನು ರದ್ದು ಪಡಿಸಲಾಯಿತು. ಆದರೆ ಮತ್ತೊಮ್ಮೆ ಈ ಕರಾಳ ಶಾಸನ ಪುನರ್ ಜನಿಸುವಂತೆ ಕಾಣುತ್ತದೆ.




ಬಂಡವಾಳಶಾಹಿ ವರ್ಗದ ಬಿಕ್ಕಟ್ಟು ಆರ್ಥಿಕ-ರಾಜಕೀಯ-ಸಾಮಾಜಿಕ ಸ್ತರಗಳಲ್ಲಿ ಪ್ರತಿಫಲನಗೊಳ್ಳುತ್ತದೆ. ಆರ್ಥಿಕ ಸಂಕಷ್ಟದ ಹಿನ್ನೆಲೆಯಲ್ಲಿ ಸಾಮಾಜಿಕ ಆಂದೋಲನಗಳು ಹುಟ್ಟುತ್ತವೆ - ಬೆಳೆಯುತ್ತವೆ. ಜನಪರ ಹೋರಾಟಗಳನ್ನು ಸದೆಬಡಿಯಲು, ಪ್ರಜಾಪ್ರಭುತ್ವದ ಹಕ್ಕುಗಳನ್ನು ಚ್ಯುತಿಗೊಳಿಸಲು ಬಂಡವಾಳಶಾಹಿ ವರ್ಗ ತನ್ನ ರಾಜ್ಯಯಂತ್ರ ಶಕ್ತಿಯನ್ನು ದುರುಪಯೋಗಿಸುವುದು

ನಾವು ಇತಿಹಾಸದಲ್ಲಿ ಕಾಣಬಹುದು. ಜರ್ಮನಿಯ ಹಿಟ್ಲರ್, ಇಟಲಿಯ ಮುಸೋಲಿನಿ, ಸ್ಪೇನ್‌ನ ಫ್ರಾಂಕೊ, ಚಿಲಿಯ ಅಗಸ್ಟೊ ಪಿನೋಶೆ, ಉಗಾಂಡಾದ ಇದೀ ಅಮಿನ್ ದಮನಕಾರಿ ಆಡಳಿತಕ್ಕೆ ನಿದರ್ಶನಗಳಾದರೆ, ತುರ್ತು ಪರಿಸ್ಥಿತಿಯನ್ನು ೧೯೭೫ - ೭೭ರಲ್ಲಿ ಈ ದೇಶದ ಮೇಲೆ ಹೇರಿದ ಶ್ರೀಮತಿ ಇಂದಿರಾ ಗಾಂಧಿ ಸರ್ವಾಧಿಕಾರಿ ಪ್ರಭುತ್ವದ ಇನ್ನೊಂದು ಸ್ವರೂಪ. ರಾಷ್ಟ್ರೀಯ ಸಂರಕ್ಷಣಾ ಕಾಯ್ದೆ, ಮೀಸಾ, ಇತ್ಯಾದಿ ಕಾಯ್ದೆಗಳ ಮೂಲಕ ಸಹಸ್ರಾರು ಜನರನ್ನು ಬಂಧಿಸಿ ಜೈಲಿನಲ್ಲಿ ಕೊಳೆಸಿದ್ದು ಈ ಕರಾಳ ಶಾಸನಗಳ ಮಾರಕ ಬಳಕೆಯ ನಿದರ್ಶನಗಳು. ಆತಂಕವಾದವನ್ನು ಎದುರಿಸಲು ಈಗಿರುವ ಕಾನೂನುಗಳು ಸಾಕೆಂಬ ಅಭಿಪ್ರಾಯವನ್ನು ಅಲ್ಲಗಳೆಯಲಾಗುವುದಿಲ್ಲ. ಭಾರತ ದಂಡ ಸಂಹಿತೆ, ಅಪರಾಧ ಪ್ರಕ್ರಿಯಾ ಸಂಹಿತೆ, ರಾಷ್ಟ್ರೀಯ ಭದ್ರತಾ ಕಾಯ್ದೆ, ವಿಮಾನ ಅಪಹರಣಾ ವಿರೋಧಿ ಕಾಯ್ದೆ, ಮುಂತಾದವು ಸವಿಸ್ತಾರವಾದ ಪ್ರಮುಖ ಕಾಯ್ದೆಗಳು. ಎಲ್ಲ ಪರಿಸ್ಥಿತಿಗೂ ಅನ್ವಯವಾಗುವಂತಹವು. ಈ ಕಾಯ್ದೆಗಳು ಸಹ ದುರ್ಬಳಕೆಯಾಗಿ ಪೊಲೀಸ್ ರಾಜ್ಯ ಸೃಷ್ಟಿಯಾದ ಉದಾಹರಣೆಗಳಿವೆ. ಆದರಿಂದ ಪೊಲೀಸ್ ವ್ಯವಸ್ಥೆಗೆ ಇನ್ನೂ ಹೆಚ್ಚಿನ ಅಧಿಕಾರ ಕೊಟ್ಟಲ್ಲಿ ಮಾನವ ಹಕ್ಕುಗಳು, ಪ್ರಜಾಪ್ರಭುತ್ವದ ಹಕ್ಕುಗಳು, ಪ್ರತಿಭಟನಾ ಸ್ವಾತಂತ್ರ್ಯ ಇವೆಲ್ಲಾ ಮುಕ್ಕಾಗುವುದರಲ್ಲಿ ಸಂದೇಹವಿಲ್ಲ. ಮೀಸಾ, ಟಾಡಾಗಳ ಅನುಭವ ಈ ಸತ್ಯವನ್ನು ಈಗಾಗಲೇ ನಮಗೆ ಪರಿಚಯಿಸಿದೆ.

''ಭಯೋತ್ಪಾದಕತೆ ತಡೆಯುವಿಕೆ ಮಸೂದೆ'' ಮಾನವ ಹಕ್ಕುಗಳನ್ನು ಗಮನದಲ್ಲಿಟ್ಟು ರೂಪಿಸಿರುವ ಮಸೂದೆಯೆಂದು ವಾಜಪೇಯಿ ಸರಕಾರ ಸಾರಿದ್ದರೂ ಇದರಲ್ಲಿ ಅಡಕವಾಗಿರುವ ಅನೇಕ ಅಂಶಗಳು ಆತಂಕಕಾರಿಯಾಗಿವೆ. ಉದಾಹರಣೆಗೆ, ಪತ್ರಕರ್ತ ತನ್ನ ಸುದ್ದಿಯ ಮೂಲವನ್ನು ಗೋಪ್ಯವಾಗಿಟ್ಟಲ್ಲಿ ಅವನನ್ನು ಕೂಡ ಈ ಮಸೂದೆಯಡಿ ಬಂಧಿಸಬಹುದು. ಅಮೇರಿಕ, ಬ್ರಿಟನ್ ಇತ್ಯಾದಿ ಮುಂದುವರಿದ ರಾಷ್ಟ್ರಗಳಲ್ಲಿ ಇಂತಹ ಕಾನೂನುಗಳು ಈಗಾಗಲೇ ಜಾರಿಗೆ ಬಂದಿವೆ. ಆದ್ದರಿಂದ ಈ ಕಾನೂನು ಮಾನವ ಹಕ್ಕುಗಳ ಉಲ್ಲಂಘನೆಯಾಗುವುದಿಲ್ಲ ಎಂದು ಮಸೂದೆಯ ಪರವಾಗಿರುವ ಜನ ವಾದಿಸುತ್ತಿದ್ದಾರೆ. ಆದರೆ ಭಾರತದ ರಾಜ್ಯಶಕ್ತಿಯ ಕೈಗೆ ಸಿಕ್ಕ ಅನೇಕ ಸಾಮಾನ್ಯ ಕಾನೂನುಗಳೂ ಕರಾಳ ಶಾಸನಗಳಾಗುವ ಸಂಭವವೇ ಹೆಚ್ಚಿರುವಾಗ ಅನಿರ್ಬಂಧಿತ ಅಧಿಕಾರ ನೀಡುವ ಕಾನೂನುಗಳು ಯಥೇಚ್ಛವಾಗಿ ದುರುಪಯೋಗವಾಗುವುದರಲ್ಲಿ ಯಾವ ಸಂದೇಹವಿಲ್ಲ. ಅಮೇರಿಕಾದಲ್ಲಿ ಅವೇ ಕಾನೂನುಗಳು ದುರುಪಯೋಗವಾಗುತ್ತಿಲ್ಲವೆಂಬುದು ಕೂಡ ಹುರುಳಿಲ್ಲದ ಮಾತು.

ಆತಂಕವಾದವನ್ನಾಗಲಿ, ವಿಚ್ಛಿದ್ರಕಾರಕ ಚಟುವಟಿಕೆಗಳನ್ನಾಗಲಿ ಕಾನೂನುಗಳ ಮೂಲಕ ಹತ್ತಿಕ್ಕಿ ಪರಿಸಮಾಪ್ತಿ ಮಾಡಬಹುದೆಂಬುದು ಪೊಳ್ಳುತನವಾದೀತು. ಇದೊಂದು ಆರ್ಥಿಕ - ಸಾಮಾಜಿಕ - ರಾಜಕೀಯ ಸಮಸ್ಯೆ. ಈ ಆಧಾರದ ಮೇಲೆ ಇದಕ್ಕೆ ಪರಿಹಾರ ಕಂಡುಹಿಡಿಯಬೇಕು. ಆದ್ದರಿಂದ ಪ್ರಜಾಪ್ರಭುತ್ವದ ಹಕ್ಕುಗಳು, ಪ್ರತಿಭಟನೆಯ ಹಕ್ಕು ಉಳಿಸಿಕೊಳ್ಳಲು ಜನತೆ ಕರಾಳ ಶಾಸನಗಳ ಬಗ್ಗೆ ಜಾಗೃತರಾಗಿ, ಅವುಗಳ ವಿರುದ್ಧ ಧ್ವನಿ ಎತ್ತಬೇಕು. ಇಲ್ಲವಾದಲ್ಲಿ ಮಾನವ ಹಕ್ಕುಗಳ ದಮನಕ್ಕೆ ನಾವೇ ದಾರಿ ಮಾಡಿಕೊಟ್ಟಂತಾಗುತ್ತದೆ.

**ಮುರಲೀಧರ್**
ವಕೀಲರು, ಎ. ಐ. ಟಿ.ಯು.ಸಿ. ಕಾನೂನು ಘಟಕ, ಸಂಪಿಗೆ ರಸ್ತೆ
ಮಲ್ಲೇಶ್ವರಂ, ಬೆಂಗಳೂರು - ೩

## ಸಾದರ ಸ್ವೀಕಾರ

**ಶಂಕ್ರಿ** (ಕಥಾ ಸಂಕಲನ)
*ಜಯಾ ಯಾಜಿ. ಶಿರಾಲಿ*
**ಪುಟ : ೧೧೬** **ಬೆಲೆ : ರೂ. ೫೦**
ಸೀತಾಕೃಷ್ಣ ಪ್ರಕಾಶನ,೧೨೦ ಎಂ. ಐ. ಜಿ - ೧
೩ನೇ ಹಂತ, ಹೌಸಿಂಗ್ ಬೋರ್ಡ್, ಜ್ಯೋತಿನಗರ
ಚಿಕ್ಕಮಗಳೂರು - ೫೭೭ ೧೦೨

**ನನ್ನ ಐವತ್ತೊಂದು ಕವಿತೆಗಳು**
*ಅಟಲ್ ಬಿಹಾರಿ ವಾಜಪೇಯಿ*
*ಅನು : ಗುರುಮೂರ್ತಿ ಪೆಂಡಕೂರು*
**ಪುಟ : ೧೩೪** **ಬೆಲೆ : ರೂ. ೭೦**
**ಯುವಕರ ಸಂಘ** (ರಿ) ರಾಮನಗರ
ಹಗರಿಬೊಮ್ಮನ ಹಳ್ಳಿ -೫೮೩ ೨೧೨ ಬಳ್ಳಾರಿ ಜಿಲ್ಲೆ.

**ನಿರೀಕ್ಷೆ** (ಕವನ ಸಂಕಲನ) *ಶ್ರೀಲತಾ*
**ಪುಟ : ೬೦** **ಬೆಲೆ : ರೂ. ೩೦**
ಶ್ರೀ ಪ್ರಕಾಶನ, ೬೦, ಸ್ಕಂದಾ, ೩ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಎನ್. ಜಿ. ಇ. ಎಫ್. ಬಡಾವಣೆ,
೨ನೇ ಹಂತ, ನೃಪತುಂಗ ನಗರ, ಬೆಂಗಳೂರು - ೭೨

**ಬೀದಿನಾಟಕ ಅಂಗಳಕ್ಕಿಳಿಯುವ ಮುನ್ನ**
(ನಾಟಕ ಕೈಪಿಡಿ) *ಮೋಹನ್ ಚಂದ್ರಾಯು*
**ಪುಟ : ೮೮** **ಸೂಚಿತ ದೇಣಿಗೆ : ರೂ. ೫೦**
**ಮಿಂಚು ಮಾಯ** *ಎಚ್. ಎನ್. ಸೋಮಸುಂದರಂ*
**ಪುಟ : ೨೮** **ಬೆಲೆ : ರೂ. ೨೦**
**ಚೌಕಿ ಸಮುಚ್ಚಯ ಸಂಪನ್ಮೂಲ,** ೧೦-೩೯/೧
ಸೆಕ್ಕೆರೆಮಾರ್, ಗೋರಿಗುಡ್ಡೆ, ಮಂಗಳೂರು - ೫೭೫ ೦೦೨

**ಹೂವುಗಳಲ್ಲಿ ಔಷಧೀಯ ಗುಣಗಳು**
*ಡಾ|| ವಿ. ಎನ್. ಮೂರ್ತಿ*
**ಪುಟ : ೨೧೦** **ಬೆಲೆ : ರೂ. ೫೦**

**೫೦೧ ಜೋಕುಗಳ ಸ್ವರ್ಗ**
*ಎಂ. ಎಸ್. ನರಸಿಂಹಮೂರ್ತಿ*
**ಪುಟ : ೧೬೦** **ಬೆಲೆ : ರೂ. ೩೫**

**ಸೂಪರ್ ಕ್ವಿಜ್ ಟೈಮ್**
ಸಂಗ್ರಹ : ಕೃ. ನಾರಾಯಣರಾವ್
**ಪುಟ : ೧೪೦** **ಬೆಲೆ : ರೂ. ೨೫**

**ಆರೋಗ್ಯ ಆಯುರ್ವೇದ** (ಮಾಹಿತಿ)
*ಡಾ|| ವಸುಂಧರಾ ಭೂಪತಿ*
**ಪುಟ : ೧೨೮** **ಬೆಲೆ : ರೂ. ೨೫**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
ದಿವ್ಯ ಚಂದ್ರ ಪ್ರಕಾಶನ, ನಂ. ೪೫. (ಪಾಪಣ್ಣನ ತೋಟ)
ಕೆ. ಎಚ್. ಬಿ. ೨ನೇ ಹಂತ, ೬ನೇ ಮುಖ್ಯರಸ್ತೆ, ೮ನೇ ಅಡ್ಡರಸ್ತೆ, ಬಸವೇಶ್ವರ ನಗರ, ಬೆಂಗಳೂರು-೭೯

**ಜನರ ಧ್ವನಿ ರಾಷ್ಟ್ರಪತಿಗಳ ಪ್ರತಿಧ್ವನಿ**
ರಾಷ್ಟ್ರಪತಿ ಕೆ. ಆರ್. ನಾರಾಯಣರ ಮೂರು ಭಾಷಣಗಳು
*ಸಂಗ್ರಹ : ಸಿ. ಆರ್. ಭಟ್*
**ಪುಟ : ೨೮** **ಬೆಲೆ : ರೂ. ೬**
**ಕರ್ನಾಟಕ ಸಮಾಜ ವಿಜ್ಞಾನ ಕೇಂದ್ರ**, ೩೮, ಬಸವನಗರ
ಧಾರವಾಡ - ೩

**ಸಹಕಾರ** (ಕವನ ಸಂಕಲನ)
*ನಾರಾಯಣ ಯಾಜಿ. ಶಿರಾಲಿ*
**ಪುಟ : ೫೦** **ಬೆಲೆ : ರೂ. ೨೫**
**ಸೀತಾಕೃಷ್ಣ ಪ್ರಕಾಶನ**, ೧೨೦, ಎಂ.ಐ.ಜಿ.ಕೆ.ಎಚ್. ರಸ್ತೆ,
ಜ್ಯೋತಿ ನಗರ, ಚಿಕ್ಕಮಗಳೂರು - ೫೭೭ ೧೦೨

**ಬೆಂಡಿನಗಾಡಿ** (ಮಕ್ಕಳ ಚುಟುಕುಗಳು)
*ದೊಡ್ಡಣ್ಣ ಎಚ್. ಗದ್ದನಕೇರಿ*
**ಪುಟ : ೬೦** **ಬೆಲೆ : ರೂ. ೩೦**
**ಕಮಲ ಪ್ರಕಾಶನ**,ಚಿತ್ತವಾಡಗಿ, ಹುನುಗುಂದ ತಾ.
ಬಿಜಾಪೂರ ಜಿಲ್ಲೆ.

**ವೈದ್ಯಕೀಯ ಮಗುವಚನ**
*ಡಾ|| ಎಸ್. ಎಸ್. ಪಾಟೀಲ*
**ಪುಟ : ೬೬** **ಬೆಲೆ : ರೂ. ೨೫**
**ಸಿದ್ಧರತ್ನ ಪ್ರಕಾಶನ**, ಧನ್ವಂತರಿ ಕಾಲೋನಿ
ಗುಲಬರ್ಗಾ - ೫೮೫೧೦೫

**ಸೂಕ್ತಿಗಳಲ್ಲಿ ರಾಜಕಾರಣ**
*ಸಂಪಾದಕ: ಟಿ. ವಿ. ವೆಂಕಟರಮಣಯ್ಯ*
**ಪುಟ : ೪೦** **ಬೆಲೆ : ರೂ. ೧೦**

**ಅಮೂಲ್ಯ ಆಸ್ತಿ ಸ್ನೇಹ**
*ಸಂಪಾದಕ : ಟಿ. ವಿ. ವೆಂಕಟರಮಣಯ್ಯ*
**ಪುಟ : ೪೬** **ಬೆಲೆ : ರೂ. ೧೫**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು :*
**ಟಿ. ವಿ. ವೆಂಕಟರಮಣಯ್ಯ,** ಇ. ಡಬ್ಲ್ಯೂ. ಎಸ್. ೨೧೮,
ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

# ಸುದ್ದಿ ಮಾಡಿದ ಅನುರಾಧಾ

ಚಂದ್ರನ ಸ್ಥಾನದ ಸಹಾಯದಿಂದ ನಕ್ಷತ್ರ ಪುಂಜಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಉದಾಹರಣೆಗೆ, ಸೆಪ್ಟೆಂಬರ್ ೫ರಂದು ಚಂದ್ರ ವೃಶ್ಚಿಕ ರಾಶಿಯಲ್ಲಿ ಕಾಣುತ್ತದೆ. ಅಂದು ಚಂದ್ರನ ಸಮೀಪ ಕಾಣುವ ನಕ್ಷತ್ರಗಳಲ್ಲಿ ಪ್ರಕಾಶಮಾನವಾದುದು ಅನುರಾಧಾ. ಕಳೆದ ತಿಂಗಳು ಪ್ರಕಟವಾಗಿದ್ದ ಗಣಪತಿಯ ಚಿತ್ರ ನೆನಪಿರಬೇಕಲ್ಲವೇ ? ಗಣಪತಿಯನ್ನು ಆಕಾಶದಲ್ಲಿ ಕಲ್ಪಿಸಿಕೊಂಡರೆ ಅದರ ಕಣ್ಣುಗಳೆರಡರ ನಡುವಿನ ನಕ್ಷತ್ರವೇ ಅನುರಾಧಾ. ಡೆಲ್ಟಾಸ್ಕಾರ್ಪಿಯೈ ಎಂಬುದು ವೈಜ್ಞಾನಿಕ ನಾಮ. ಅಂದರೆ ವೃಶ್ಚಿಕ ರಾಶಿಯ (ಪ್ರಕಾಶದಲ್ಲಿ) ನಾಲ್ಕನೆಯ ನಕ್ಷತ್ರ ಎಂದರ್ಥ. ಕಳೆದ ತಿಂಗಳು (ಜುಲೈ - ಆಗಸ್ಟ್‌ಗಳಲ್ಲಿ) ಇದ್ದಕ್ಕಿದ್ದಂತೆ ಅದರ ಪ್ರಕಾಶ ಹತ್ತು ಪಟ್ಟು ಹೆಚ್ಚಾಯಿತು. ನೀಲಿಬಣ್ಣದ ಈ ನಕ್ಷತ್ರದ ಪ್ರಕಾಶದ ಹೆಚ್ಚಳ ಬರಿಗಣ್ಣಿಗೂ ಗೋಚರಿಸುವಂತಿತ್ತು. ಈಗಲೂ ಅದು ಸಾಕಷ್ಟು ಪ್ರಕಾಶಮಾನವಾಗಿಯೇ ಇದೆ. ಖಗೋಳ ವಿಜ್ಞಾನಿಗಳು ಅದರ ಪ್ರಕಾಶವನ್ನು ಅಳತೆಮಾಡಿದರು. ರೋಹಿತವನ್ನೂ ಅಭ್ಯಸಿಸಿದರು. ಅದರ ಹೊರ ಪದರ ಸಿಡಿದು ವಿಸ್ತರಿಸುತ್ತಿದೆ - ಈ ಕಾರಣ ಪ್ರಕಾಶ ಹೆಚ್ಚಾಗಿದೆ ಎಂಬ ಅಂಶ ತಿಳಿದು ಬಂದಿತು.

ಸೆಪ್ಟೆಂಬರ್ ೬ ರಂದು ಚಂದ್ರನ ಸಮೀಪ ಇರುವ ಕೆಂಪು ನಕ್ಷತ್ರ ಜ್ಯೇಷ್ಠಾ. ಇದು ವೃಶ್ಚಿಕ ರಾಶಿಯ ಅತಿ ಪ್ರಕಾಶಮಾನವಾದ ನಕ್ಷತ್ರ. ಆದ್ದರಿಂದ ಆಲ್ಫಾ ಸ್ಕಾರ್ಪಿಯೈ ಎಂಬುದು ವೈಜ್ಞಾನಿಕ ನಾಮ. ವಾಸ್ತವವಾಗಿ ೬ರಂದು ಚಂದ್ರ ವೃಶ್ಚಿಕ ಮತ್ತು ಒಫಿಯೂಕಸ್ ನಕ್ಷತ್ರ ಪುಂಜಗಳ ಗಡಿಯಲ್ಲಿ ಕಾಣುತ್ತದೆ. ೭ರಂದು ಒಫಿಯೂಕಸ್ ಪಕ್ಕದ ಧನುರಾಶಿಯ ಗಡಿಯಲ್ಲಿ ಕಾಣುತ್ತದೆ. ಹೀಗೆ ಚಂದ್ರ ರಾಶಿಚಕ್ರವನ್ನು ಬಿಟ್ಟು ಒಫಿಯೂಕಸ್‌ಗೆ ಏಕೆ ಹೋಯಿತು ಎಂಬುದನ್ನು ತಿಳಿಯುವ ಮೊದಲು ಒಫಿಯೂಕಸ್ ಬಗ್ಗೆ ತಿಳಿಯೋಣ.

ಒಫಿಯೂಕಸ್ ಎಂಬುದು ಗ್ರೀಕ್ ಹೆಸರು. ಉರಗಧರ ಎಂಬುದು ಭಾರತೀಯ ಹೆಸರು. ಗ್ರೀಕ್ ಪುರಾಣದ ಪ್ರಕಾರ ಒಫಿಯೂಕಸ್ ಎಂಬುವನು ವೈದ್ಯ. 'ಯೇನ ಕೇನ ಪ್ರಕಾರೇಣ' ಪ್ರಸಿದ್ಧಿಗೆ ಬರಬೇಕೆಂದು ಹಂಬಲಿಸುತ್ತಿದ್ದ. ಅಕಸ್ಮಾತ್ತಾಗಿ ಹಾವೊಂದನ್ನು ಕೊಂದನಂತೆ. ಆಗ ಪೊದೆಗಳ ನಡುವೆಯಿಂದ ಬಂದ ಇನ್ನೊಂದು ಹಾವು (ಗೆಳತಿ ?) ಒಂದು ಎಲೆಯನ್ನು ತಂದು ಸತ್ತ ಹಾವಿನ ಬಾಯಿಗೆ ಇಟ್ಟಿತಂತೆ. ಆ ಎಲೆಯನ್ನು (ಸಂಜೀವಿನಿ ಎನ್ನೋಣವೇ ?) ಹುಡುಕಿ ಪತ್ತೆ ಮಾಡಿದ ಒಫಿಯೂಕಸ್ ಮಹಾ ವೈದ್ಯನಾದ. ದೇವತೆಗಳು (ಮತ್ತು ಭೂಗತ ನಾಯಕರ) ಗಮನ ಸೆಳೆದು ಆಕಾಶದಲ್ಲೊಂದು ಸ್ಥಾನ ಗಿಟ್ಟಿಸಿಕೊಂಡ. ತನ್ನ ಶ್ರೇಯಸ್ಸಿಗೆ ಕಾರಣವಾದ ಹಾವನ್ನು ಮರೆಯದೆ ಅದಕ್ಕೂ ಆಕಾಶದಲ್ಲಿ ಜಾಗ ದೊರಕಿಸಿ ಕೊಟ್ಟ. ಹಾವನ್ನು ಕೈಯಲ್ಲಿ ಹಿಡಿದಂತೆ ಚಿತ್ರ ಕಲ್ಪಿಸಿಕೊಂಡರೆ ಅದರ ತಲೆ ಮತ್ತು ಬಾಲಗಳು ಅವನ ಎಡ ಮತ್ತು ಬಲಗಳಲ್ಲಿವೆ. ಸರ್ಪೆನ್ಸ್ ಕೌಡ್ ಮತ್ತು ಸರ್ಪೆನ್ಸ್ ಕಪುಟ್ ಎಂದು ನಕ್ಷೆಗಳಲ್ಲಿ ಗುರುತಿಸಿರುತ್ತಾರೆ.

ಜಾರ್ಜ್ ರೀಡ್ ಕಂಡಂತೆ ಒಫಿಯೂಕಸ್

ಸಾಕಷ್ಟು ಪ್ರಕಾಶಮಾನವಾಗಿರುವ ಈ ನಕ್ಷತ್ರಪುಂಜ ವೃಶ್ಚಿಕ ಮತ್ತು ಧನುರಾಶಿಗಳ ನಡುವೆ ಕಾಣುತ್ತದೆ.

ಕ್ರಾಂತಿ ವೃತ್ತ ಎಂಬುದು ಸೂರ್ಯನ ಚಲನೆಯ ಹೆದ್ದಾರಿ. ಗ್ರಹಗಳು ಮತ್ತು ಚಂದ್ರ ಈ ಹೆದ್ದಾರಿಯಲ್ಲೇ ಸಾಗುತ್ತವೆಯಾದರೂ ರಾಶಿಚಕ್ರದ ಪಟ್ಟಿಯಲ್ಲಿ ಅವುಗಳ ಚಲನೆ ಕ್ರಾಂತಿವೃತ್ತದ ಆಚೀಚೆ ಇರುವುದು ಸಾಧ್ಯ. ಅವುಗಳ ಕಕ್ಷೆ ಸ್ವಲ್ಪ ಓರೆಯಾಗಿರುವುದೇ ಇದಕ್ಕೆ ಕಾರಣ. ಚಂದ್ರನ ಕಕ್ಷೆಯೂ ಐದು ಡಿಗ್ರಿಗಳಷ್ಟು ಓರೆಯಾಗಿದೆ. ಆದ್ದರಿಂದ ಅದು ಕ್ರಾಂತಿವೃತ್ತದ ಐದು ಡಿಗ್ರಿಗಳಷ್ಟು ಉತ್ತರ-ದಕ್ಷಿಣಕ್ಕೆ ಹರಡಿಕೊಳ್ಳಬಹುದು. ಕೆಲವು ವರ್ಷಗಳ ಹಿಂದೆ ಗುರುಗ್ರಹವೂ ಒಫಿಯೂಕಸ್ ಅನ್ನು ದಾಟಿ ಧನುರಾಶಿಯನ್ನು ಪ್ರವೇಶಿಸಿತ್ತು.

ಈಗ ಚಂದ್ರನ ಚಲನೆಯಿಂದ ಇತರ ರಾಶಿಗಳ ಪರಿಚಯವನ್ನು ಮಾಡಿಕೊಳ್ಳುವ ಪ್ರಯತ್ನವನ್ನು ಮುಂದುವರಿಸೋಣ.

೧೩ರಂದು ಹುಣ್ಣಿಮೆ. ಅಂದು ಚಂದ್ರನ ಸಮೀಪವಿರುವ ನಕ್ಷತ್ರಗಳು ಅಷ್ಟೇನೂ ಪ್ರಕಾಶಮಾನವಾಗಿಲ್ಲ. ಚಂದ್ರನಿಂದ ಸ್ವಲ್ಪ ಉತ್ತರಕ್ಕೆ ಕಾಣುವ ಎರಡು ನಕ್ಷತ್ರಗಳು ಉತ್ತರಭಾದ್ರ ಮತ್ತು ಪೂರ್ವಭಾದ್ರ. ಆದ್ದರಿಂದ ಈ ತಿಂಗಳ ಹೆಸರು ಭಾದ್ರಪದ. ಈ ಎರಡು ನಕ್ಷತ್ರಗಳನ್ನು ಯಾವುದೇ ರಾತ್ರಿ (ಚಂದ್ರನಿಲ್ಲದಾಗ) ಸುಮಾರು ಒಂಭತ್ತು ಗಂಟೆಯ ಹೊತ್ತಿನಲ್ಲಿ ಪೂರ್ವ ದಿಕ್ಕಿನಲ್ಲಿ ಗುರುತಿಸಬಹುದು. ಚೌಕಾಕಾರದ ವಿನ್ಯಾಸದ ಎರಡು ಮೂಲೆಗಳಿವು. ಪೆಗಸಸ್ (ನಕುಲ) ಎಂಬ ನಕ್ಷತ್ರ ಪುಂಜಕ್ಕೆ ಸೇರಿವೆ.

ಬುಧ ಮತ್ತು ಶುಕ್ರ. ಈ ಎರಡು ಗ್ರಹಗಳು ಸಂಜೆಯ ಆಕಾಶದಲ್ಲಿ ಕಾಣುವುವು. ಸೂರ್ಯಾಸ್ತವಾದ ನಂತರ ಪಶ್ಚಿಮದ ಅಂಚಿನಲ್ಲಿ ಸ್ವಲ್ಪಹೊತ್ತು ಮಾತ್ರ ಕಾಣುವ ಇವನ್ನು ಸಂಧ್ಯಾ ಪ್ರಕಾಶದಲ್ಲಿ ಪತ್ತೆ ಮಾಡುವುದು ಒಂದು ಸಾಹಸವೇ ಸರಿ. ೨೭ರ ಅಮವಾಸ್ಯೆಯ ನಂತರ ೨೯ರಂದು ಬಿದಿಗೆಯ ಚಂದ್ರ ಬುಧಗ್ರಹಕ್ಕೆ ೭ ಡಿಗ್ರಿ ಅಂತರದಲ್ಲಿ ಕಂಡರೆ, ೩೦ರಂದು ಶುಕ್ರಗ್ರಹಕ್ಕೆ ೫ ಡಿಗ್ರಿ ಅಂತರದಲ್ಲಿ ಕಾಣುವುದು.

ಬೆಳಗಿನ ಝಾವ ನೆತ್ತಿಯ ಮೇಲೆ ಗುರು ಮತ್ತು ಶನಿ ಗ್ರಹಗಳು ಮಧ್ಯರಾತ್ರಿ ಉದಯಿಸುತ್ತವೆ. ೧೮, ೧೯ರಂದು ಚಂದ್ರ ಇವುಗಳ ಸಮೀಪ ಹಾದುಹೋಗುವುದರಿಂದ ಗುರುತಿಸಬಹುದು. ಕೆಂಪು ನಕ್ಷತ್ರ ರೋಹಿಣಿಯೂ ಸಮೀಪವೇ ಕಾಣುತ್ತದೆ. ಮಂಕಾದ ಗ್ರಹ ಶನಿ; ಪ್ರಕಾಶಮಾನವಾದದ್ದು ಗುರು.

ಕಳೆದ ಕೆಲವು ತಿಂಗಳಿಂದಲೂ ನಮ್ಮ ದೃಷ್ಟಿಗೆ ನಿಲುಕದೇ ಇದ್ದ ಮಂಗಳ ಗ್ರಹ ಬೆಳಗಿನ ಝಾವ ದಿಗಂತದಂಚಿನಲ್ಲಿ ಕಾಣುತ್ತದೆ. ೨೫ರಂದು ಚಂದ್ರನಿಂದ ಎರಡು ಡಿಗ್ರಿಗಳಷ್ಟು ದಕ್ಷಿಣಕ್ಕಿರುತ್ತದೆ.

ಭೂಮಿ ತನ್ನ ಚಲನೆಯಲ್ಲಿ ಒಂದು ಹಂತವನ್ನು ಸೆಪ್ಟೆಂಬರ್ ೨೨ರಂದು ದಾಟುತ್ತದೆ. ಸೂರ್ಯ ಶರತ್ ವಿಷುವ ಬಿಂದುವನ್ನು ದಾಟುವ ದಿನ ಎಂದು ಇದನ್ನು ಗುರುತಿಸಲಾಗುತ್ತದೆ. ಅಂದು ಹಗಲು - ರಾತ್ರಿಗಳ ಅವಧಿ ಸಮ.

ಡೆಲ್ಟಾ ಆರಿಗಡ್ಸ್ ಎಂಬ ಉಲ್ಕಾವೃಷ್ಟಿ ಸೆಪ್ಟೆಂಬರ್ ೮ರಂದು ಗರಿಷ್ಠವನ್ನು ಮುಟ್ಟುವುದು, ಪ್ರಕಾಶಮಾನ ಉಲ್ಕೆಗಳು ಗಂಟೆಗೆ ೬-೮ ಕಾಣುವುವು. ಗುರುತಿಸುವುದು ಸುಲಭವೇನಲ್ಲ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ಆಗಸ್ಟ್ ತಿಂಗಳ ಪ್ರಶ್ನೆಗೆ ಉತ್ತರ

ನಾಲ್ಕು ವಿವಿಧ ಬಣ್ಣಗಳ ಹರಳುಗಳನ್ನುಪಯೋಗಿಸಿ, ಎರಡು ಹರಳುಗಳ ಹದಿನಾರು ಪದಕಗಳನ್ನು ರಚಿಸಬಹುದು. ಈ ಎಲ್ಲ ಪದಕಗಳೂ ಒಮ್ಮೆ ಮಾತ್ರ ವ್ಯಕ್ತವಾಗುವಂತೆ (ನೋಡಿ : 'ಹೊಸತು'ವಿನ ಜುಲೈ, ಆಗಸ್ಟ್ ತಿಂಗಳ ವಿನೋದ ಗಣಿತ) ಹದಿನಾರು ಹರಳುಗಳ ಒಂದು ಬಳೆಯನ್ನು ರಚಿಸಬೇಕು. ನಾಲ್ಕು ಬಣ್ಣಗಳನ್ನು ಸ,ರಿ,ಗ,ಮ ಎಂದು ಕರೆದರೆ ಯಾವುದಾದರೊಂದು ಸ್ಥಾನದಿಂದ ಆರಂಭಿಸಿ ಬಳೆಯ ಸುತ್ತಲೂ ಅಳವಡಿಸಬೇಕಾದ ಹರಳುಗಳ ಬಣ್ಣಗಳನ್ನು ಸ,ರಿ,ಗ,ಮ ಅಕ್ಷರ ಮಾಲೆಯಿಂದ ಕೆಳಕಂಡಂತೆ ಸೂಚಿಸಬಹುದು.

''ಸ ರಿ ರಿ ಗ ರಿ ಸ ಮ ಮ ರಿ ಮ ಸ ಗ ಗ ಮ ಗ ಸ.''

'ಹೊಸತು'ವಿನ ಕಳೆದ ಮೂರು ಸಂಚಿಕೆಗಳ ವಿನೋದ ಗಣಿತದ ಪ್ರಶ್ನೆಗಳು ಬಹುಮಟ್ಟಿಗೆ ಒಂದೇ 'ವರ್ಗ'ಕ್ಕೆ ಸೇರಿವೆ. ಈ ಪ್ರಶ್ನೆಗಳಿಗೆ 'ಹೊಸತು'ವಿನ ಓದುಗರೇ ಉತ್ತರ ಕೊಟ್ಟಿದ್ದಾರೆ. ಈ ಬಾರಿಯೂ ವಾಮನಪದವುನಿಂದ ಶ್ರೀ ಕೆ. ಶ್ರೀಧರ ಶೆಟ್ಟಿ ಒಂದು ಉತ್ತರ ಕಳಿಸಿದ್ದಾರೆ. ಆದರೆ ಪದಕಗಳ ಉದ್ದ ಹೆಚ್ಚಿದಂತೆ, ಬಣ್ಣಗಳ ಸಂಖ್ಯೆ ಹೆಚ್ಚಿದಂತೆ ಈ ತೆರದ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಹೆಚ್ಚು ಕಠಿಣವಾಗತೊಡಗುತ್ತದೆ : ಉದಾಹರಣೆಗೆ, ಎರಡು ಬಣ್ಣಗಳ ಹರಳುಗಳನ್ನು ಪಯೋಗಿಸಿ ಏಳು ಹರಳುಗಳ ೧೨೮ ವಿಭಿನ್ನ ಪದಕಗಳನ್ನು ಮಾಡಬಹುದು. ಈ ಎಲ್ಲ ಪದಕಗಳೂ ಒಮ್ಮೆ ಮಾತ್ರ ವ್ಯಕ್ತವಾಗುವಂತೆ ೧೨೮ ಹರಳುಗಳ ಬಳೆಯ ವಿನ್ಯಾಸ ಹೇಗಿರಬೇಕು ?

ಹೀಗಿರುವಾಗ ಇಂತಹ ಅನೇಕ 'ವಿನ್ಯಾಸ'ಗಳನ್ನು 'ಗ್ಯಾಲ್ವಾ ಫೀಲ್ಡ್ಸ್ ಸಿದ್ಧಾಂತ' ಎಂಬ ಬೀಜಗಣಿತದ ಒಂದು ಪ್ರೌಢ ಸಿದ್ಧಾಂತದ ಸಹಾಯದಿಂದ ತರ್ಕಬದ್ಧವಾಗಿ ಕಂಡುಹಿಡಿಯಲು ಸಾಧ್ಯವಿದೆ ಎಂದರೆ ಸೋಜಿಗ ವೆನಿಸಬಹುದು. ಆದರೂ ಗಣಿತಶಾಸ್ತ್ರದ ಪ್ರೌಢ ಪ್ರಕಾರಗಳಲ್ಲಿ ಅನೇಕ ಪ್ರಕಾರಗಳ ಉಗಮವು 'ವಿನೋದ ಗಣಿತ'ದಂತಹ 'ಸರಳ' ನೆಲೆಯಿಂದಲೇ ಆಗಿರುವುದು ಗಣಿತಶಾಸ್ತ್ರ ಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ಗಣಿತವೂ ಮೂಲತಃ ಮನೋರಂಜನೀಯವಾಗಿರುವುದರಿಂದಲೇ ಜಗತ್ತಿನಾದ್ಯಂತ ಕೋಟ್ಯಾಂತರ ಜನರು ಗಣಿತಶಾಸ್ತ್ರವನ್ನು ತಮ್ಮ ಬೌದ್ಧಿಕ ವ್ಯವಸಾಯವನ್ನಾಗಿ ಪ್ರೀತಿಯಿಂದ ಪರಿಗ್ರಹಿಸಿದ್ದಾರೆ. ಈ ಸತ್ಯವನ್ನು ಶಾಲಾ ಕಾಲೇಜುಗಳಲ್ಲಿ ಗಣಿತ ಕಲಿಸುವಾಗ ನಮ್ಮ ಅಧ್ಯಾಪಕರು ಮರೆಯಬಾರದು.

### ಈ ತಿಂಗಳ ಪ್ರಶ್ನೆ

ಪಕ್ಕದ 'ಕ' ಮತ್ತು 'ಖ' ಪಟ್ಟಿಗಳಲ್ಲಿರುವ ಹನ್ನೆರಡು ಖಾಲಿ ಮನೆಗಳನ್ನು '೧' ಅಥವಾ ಅದಕ್ಕಿಂತ ಹೆಚ್ಚಿನ ಪೂರ್ಣಾಂಕಗಳಿಂದ ತುಂಬಿ (ಹಾಗೆ ತುಂಬಿದ ಸಂಖ್ಯೆಗಳೆಲ್ಲವೂ ಪರಸ್ಪರ ಬೇರೆಯಾಗಿರಬೇಕೆಂದೇನೂ ಇಲ್ಲ). ಹೀಗೆ ಸಂಖ್ಯೆಗಳನ್ನು ತುಂಬಿದ ನಂತರ, 'ಕ' ಪಟ್ಟಿಯಲ್ಲಿರುವ ಪ್ರತಿಯೊಂದು ಸಂಖ್ಯೆಯನ್ನು 'ಖ' ಪಟ್ಟಿಯಲ್ಲಿರುವ ಪ್ರತಿಯೊಂದು ಸಂಖ್ಯೆಯೊಡನೆ ಕೂಡಿಸಿ ನೊಂದಾಯಿಸಿದಾಗ ಒಟ್ಟು ೩೬ ಸಂಖ್ಯೆಗಳ ಒಂದು ಶ್ರೇಢಿ ದೊರಕುತ್ತದೆ. ಈ ೩೬ ಸಂಖ್ಯೆಗಳಲ್ಲಿ ಕೆಲವು ಸಂಖ್ಯೆಗಳು ಪುನರಾವರ್ತನೆಗೊಂಡಿರಲೂ ಸಾಕು.

**ಪ್ರಶ್ನೆ:** ಮೇಲೆ ದೊರಕಿದ ೩೬ ಸಂಖ್ಯೆಗಳ ಶ್ರೇಢಿಯಲ್ಲಿ–

(ಅ) '೨' ರಿಂದ '೧೨'ರವರೆಗಿನ ಎಲ್ಲ ಸಂಖ್ಯೆಗಳೂ ಒಮ್ಮೆಯಾದರೂ ಇರಬೇಕು.

(ಆ) ಸಂಖ್ಯೆ '೨' ರಿಂದ '೬'ರವರೆಗಿನ ಎಲ್ಲ ಸಂಖ್ಯೆಗಳೂ ಕ್ರಮವಾಗಿ ೧, ೨, ೩, ೪ ಮತ್ತು ೫ ಬಾರಿ ಮಾತ್ರ ಇರಬೇಕು.

(ಇ) ಸಂಖ್ಯೆ '೮' ರಿಂದ '೧೨'ರವರೆಗಿನ ಎಲ್ಲ ಸಂಖ್ಯೆಗಳೂ ಕ್ರಮವಾಗಿ ೫, ೪, ೩, ೨ ಮತ್ತು ೧ ಬಾರಿ ಮಾತ್ರ ಇರಬೇಕು.

(ಈ) ಸಂಖ್ಯೆ '೭' ಮಾತ್ರ ೬ ಬಾರಿ ಇರಬೇಕು.

| | | | | | |
|---|---|---|---|---|---|

ಕ.

| | | | | | |
|---|---|---|---|---|---|

ಖ.

ಮೇಲಿನ ನಿಬಂಧನೆಗಳನ್ನು ಪಾಲಿಸುವಂತೆ 'ಕ' ಮತ್ತು 'ಖ' ಪಟ್ಟಿಗಳಲ್ಲಿ ತುಂಬಬೇಕಾದ ಸಂಖ್ಯೆಗಳು ಯಾವುವು ?

**ಸೂಚನೆ :** ಸರಿಯಾದ ಉತ್ತರ ಸಿಗುವ ಸಂಖ್ಯೆಗಳನ್ನು ಒಮ್ಮೆ 'ಕ' ಮತ್ತು 'ಖ' ಪಟ್ಟಿಗಳಲ್ಲಿ ತುಂಬಿದ ನಂತರ ಪ್ರತಿ ಪಟ್ಟಿಯ ಒಳಗೆ ಇರುವ ಆರು ಸಂಖ್ಯೆಗಳನ್ನು ಆಯಾ ಪಟ್ಟಿಯ ಒಳಗೆ ತುಂಬುವ ಅನುಕ್ರಮದಲ್ಲಿ ಮಾತ್ರ ವ್ಯತ್ಯಾಸ ಮಾಡುವುದರಿಂದ ಉತ್ತರಕ್ಕೆ ಯಾವ ಬಾಧೆಯೂ ಉಂಟಾಗುವುದಿಲ್ಲ. ಹೀಗಾಗಿ ಹೊಸ ಕ್ರಮದಲ್ಲಿ ತುಂಬಿದಾಗ ಬರುವ ಉತ್ತರವನ್ನು ಅದರ ಹಿಂದಿನ ಉತ್ತರಕ್ಕಿಂತ ಭಿನ್ನವೆಂದು ಪರಿಗಣಿಸಲಾಗದು. ಇದನ್ನು ನೆನಪಿನಲ್ಲಿಟ್ಟುಕೊಂಡರೆ ನಮ್ಮ ಪ್ರಶ್ನೆಗೆ ಕೇವಲ 'ಎರಡು' ವಿಭಿನ್ನ ಉತ್ತರಗಳಿವೆ. ಅವುಗಳಲ್ಲಿ ಒಂದನ್ನಂತೂ ಸುಲಭವಾಗಿ ಕಂಡುಹಿಡಿಯಬಹುದು. ಎರಡನೆಯ ಉತ್ತರ ಹೆಚ್ಚು ಸವಾಲನ್ನು ಒಡ್ಡಬಹುದು.

*ಕಿಟ್ಟಿಯ ಹೆಂಡತಿ ಅವಳ ತಂದೆ ತಾಯಿಗಳ ಒಬ್ಬಳೇ ಮಗಳಾಗಿದ್ದಳು. ಆದ್ದರಿಂದ ತಂದೆಯ ಆಸ್ತಿಯೆಲ್ಲಾ ಅವಳಿಗೇ ಬಂದಿತ್ತು ಹಾಗೂ ಅವಳ ಹೆಸರಿನಲ್ಲೇ ಇತ್ತು. ಒಂದು ದಿನ ಅವಳು ಕಿಟ್ಟಿಯೊಡನೆ ''ನೋಡಿ, ನಮಗೂ ಮಕ್ಕಳಿಲ್ಲ. ಆದ್ದರಿಂದ ಆಸ್ತಿಯನ್ನೆಲ್ಲಾ ಯಾರಾದರೂ ಸನ್ಯಾಸಿಗೆ ದಾನ ಮಾಡಿಬಿಡೋಣವೆಂದುಕೊಂಡಿದ್ದೇನೆ,'' ಎಂದಳು. ಇದನ್ನು ಕೇಳಿದವನೆ ಕಿಟ್ಟಿ ಎದ್ದು ಹೊರಗೆ ನಡೆಯತೊಡಗಿದ.*

*''ಅರೇ, ಎಲ್ಲಿಗೆ ಹೋಗ್ತಾ ಇದ್ದೀರಾ?'' ಹೆಂಡತಿ ಕೇಳಿದಳು.*

*''ಸನ್ಯಾಸಿ ಆಗಲು,'' ಕಿಟ್ಟಿ ಹೇಳಿದ.*

ಜಗದೀಶ ಗಂ. ದಲಭಂಜನ
ಗುಳೇದಗುಡ್ಡ



# ಕಲಾಕೀರ್ತಿ ಕೌಶಲ್ಯಕ್ಕಾಗಿ ಶ್ರಮಿಸಿದ ಕಲಾವಿದ ಎಸ್. ಕಾಳಪ್ಪ

**ಪಿ. ಎಂ. ರಾಜನ್**

ಲಲಿತ ಕಲೆಗಳ ಬೀಡಾದ ಮೈಸೂರು ನೆಲದ ಒಡಲ ಗುಣವ ಮೈಗೂಡಿಸಿಕೊಂಡಿರುವ ಸಾಕಷ್ಟು ಕಲಾವಿದರು ಕಲಾಕೀರ್ತಿಗಾಗಿ ಇಡೀ ಬಾಳನ್ನೇ ಅರ್ಪಿಸಿಕೊಂಡು ನಾಡ ವೈಭವವನ್ನು ಮೆರೆಸಿದ್ದಾರೆ. ಆದರೆ ತಮ್ಮ ಸಂಕೋಚ ಸ್ವಭಾವದಿಂದ ಯಾವ ರೀತಿಯ ಪ್ರಶಸ್ತಿಗಳ ಆಮಿಷಕ್ಕೂ ಹಂಬಲಿಸದೆ ದುಡಿದು ಕಣ್ಮರೆಯಾಗಿರುವವರು ಇಲ್ಲದಿಲ್ಲ. ಅಂಥವರಲ್ಲಿ ತೈಲವರ್ಣ-ಜಲವರ್ಣ ಶೈಲಿಯನ್ನು ರೂಢಿಸಿ ಕೊಂಡಿದ್ದ ಖ್ಯಾತ ಕಲಾವಿದ ಎಸ್. ಕಾಳಪ್ಪ ಒಬ್ಬರು. ಇತ್ತೀಚೆಗೆ ಹೃದಯಾಘಾತದಿಂದ ಎಸ್. ಕಾಳಪ್ಪನವರು ತಮ್ಮ ಕನಸಿನ ''ಕಲಾಧಾಮ''ದಲ್ಲಿ ನಿಧನರಾದುದು ತುಂಬಲಾರದ ನಷ್ಟ. ಬೆಳಕಿಗೆ ಬರದಿರುವ ಸುಮಾರು ೪೦ ಹವ್ಯಾಸಿ ಕಲಾವಿದರಿಗಾಗಿ ''ಕಲಾ ಶಿಬಿರ - ೨೦೦೦'' ಶೀರ್ಷಿಕೆಯಲ್ಲಿ ಅವರಿಗೆಲ್ಲ ಉತ್ತೇಜನ ಕೊಡಲು ನೆನಪಿನ ಕಾಣಿಕೆಯ ಫಲಕಗಳನ್ನು ಸಿದ್ಧಪಡಿಸಿ ತಮ್ಮ ಬಹುದಿನದ ಈ ಕನಸನ್ನು ನನಸಾಗಲು ಹಂಬಲಿಸಿದ್ದುದು ಅವರ ಅಪರೂಪದ ಕಲಾಗುಣ.



*ವರ್ಣಶಿಲ್ಪಿ ಕಾಳಪ್ಪ*

ಕಿರಿಯರಿಗೆ ಮುನ್ನುಡಿಯಾಗುಳಿಯುವ ಕಾಳಪ್ಪನವರ ಕಲಾ ಸಾಧನೆಯ ರೀತಿ ಗಮನ ಸೆಳೆಯುತ್ತದೆ. ಸೊಪ್ಪಿನ ತೋಟಗಾರಿಕೆ, ಸಣ್ಣಪುಟ್ಟ ಕೆಲಸಗಳ ನಿರ್ವಹಿಸಿ ಬಡತನದ ಜೀವನಾವಲಂಬಿಯಾಗಿದ್ದ ಶ್ರೀ ಸಿದ್ದಯ್ಯ ಮತ್ತು ಶ್ರೀಮತಿ ಅರಸಮ್ಮ ನವರ ನಾಲ್ಕನೆಯ ಪುತ್ರರಾಗಿ ೪ನೇ ನವಂಬರ್ ೧೯೨೪ ರಂದು ಜನ್ಮತಾಳಿದರು. ಬಾಲ್ಯದಲ್ಲೇ ಗುಡಿ ಗೋಪುರಗಳಿಗಾಗಿ ಕಣ್ ಸೆಳೆವ ಶಿಲ್ಪಕಲಾಕೃತಿಗಳನ್ನು ರಚಿಸಿ ಕೊಡುತ್ತಿದ್ದ ಚಿಕ್ಕಪ್ಪನವರ ಶಿಲ್ಪಕಲಾ ಕಾಯಕ ತುಂಬಾ ಪರಿಣಾಮ ಬೀರಿತು. ವಿದ್ಯಾಭ್ಯಾಸದೆಡೆ ಮನಸ್ಸಿದ್ದರೂ, ಚಿಕ್ಕಪ್ಪನಂತೆ ಕಲಾವಿದನಾಗಬೇಕೆಂಬ ಆಸೆಯಂತೆ ೧೯೩೫ರಲ್ಲಿ ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆ ಸೇರು ವಂತಾಯಿತು. ಇಲ್ಲಿದ್ದ ಎಸ್. ಜಿ. ಟಂಕಸಾಲೆ, ವೈ. ಸುಬ್ರಹ್ಮಣ್ಯರಾಜು, ಎನ್. ಜಿ. ಪಾವಂಜೆ, ವೇಣು ಗೋಪಾಲ ನಾಯ್ಡು, ಕೆ. ಕೇಶವಯ್ಯ ಮತ್ತು ಕೃಷ್ಣಯ್ಯನಂತಹ ಕಲಾಗುರುಗಳ ಮಾರ್ಗದರ್ಶನ ದೊರೆಯಿತು. ಆಗಿಂದಾಗ್ಗೆ ಶಾಲಾದಿನಗಳಲ್ಲಿ ಗೈರು ಹಾಜರಿಯಾಗಿ ತಂದೆಯ ವಿಕೋಪಕ್ಕೆ ಗುರಿಯಾದರೂ ತಾಯಿಯ ಮಮತಾ ನುಡಿಗಳಿಂದ ಅಕ್ಕರೆ ಮೂಡಿತು. ಅರಮನೆಯ ಕಲಾವಿದರೂ ಆಗಿದ್ದ ಕೆ. ಕೇಶವಯ್ಯ ಅವರ ಬಳಿ ಬಿಡುವಿನ ವೇಳೆಯಲ್ಲಿ ಹೋಗಿ ರೂಪ ಚಿತ್ರ ಮತ್ತಿತರ ಚಿತ್ರರಚನಾ ತಂತ್ರಗಳನ್ನು ಕಲಿತರು. ಯೋಗ್ಯತಾ ವಿದ್ಯಾರ್ಥಿ ವೇತನ ಪಡೆದು ಜಿ.ಡಿ. ಆರ್ಟ್‌ನಲ್ಲಿ ತೇರ್ಗಡೆಯಾದರು.

ವ್ಯಾಸಂಗದ ನಂತರ ತಾತ್ಕಾಲಿಕವಾಗಿ ಪುರಭವನದಲ್ಲಿ ಜರುಗುವ ನಾಟಕ ಮತ್ತಿತರ ಸಮಾರಂಭಗಳಿಗೆ ಕಣ್‌ತಣಿ ಸುವ ರಂಗ ಸಜ್ಜಿಕೆಯ ಕಾರ್ಯ ನಿರ್ವಹಿಸಿದರು. ಇದಕ್ಕೆ ಕಾಕತಾಳೀಯವಾಗಿ ಅದೇ ತಾನೆ ಪ್ರಾರಂಭವಾಗಿದ್ದ ನವಜ್ಯೋತಿ ಸ್ಟುಡಿಯೋದಲ್ಲಿ ಕಲಾ ನಿರ್ದೇಶಕರಾಗಿ ಸೇರಿದರು. ಹಿರಿಯ ಕಲಾವಿದರಾಗಿದ್ದ ಎಂಬಾರಯ್ಯ ನವರೊಡನೆ ಸಹಾಯಕರಾಗಿರುವ ಭಾಗ್ಯ ಲಭಿಸಿತು. ಕ್ರಮೇಣ ಕಲಾ ನಿರ್ದೇಶಕರಾಗಿ ಸ್ತ್ರೀರತ್ನ, ಅಪೂರ್ವ ಚಿಂತಾಮಣಿ, ಶ್ರೀ ಕೃಷ್ಣಲೀಲಾ, ಸತೀ ತುಳಸೀ, ರಾಮದಾಸ್, ಮಹಾನಂದ ಹಾಗೂ ಡಿ. ಶಂಕರ್‌ಸಿಂಗ್ ಅವರ ಚಿತ್ರಗಳಿಗೂ, ತಮಿಳು, ಮಲೆಯಾಳಂ ಚಿತ್ರಗಳಿಗೂ ಕಾರ್ಯ ನಿರ್ವಹಿಸಿ ಖ್ಯಾತರಾದರು. ಈ ಸಮಯದಲ್ಲೇ ಎಂ. ಜಿ. ಆರ್., ನಾಗಿರೆಡ್ಡಿ, ಚಕ್ರಪಾಣಿಯವರು ಇವರಿಗೆ ಕರೆಯಿತ್ತರೂ ಮೈಸೂರಿನ ಮೋಹ ಕಟ್ಟಿಹಾಕಿದ್ದು ಅದನ್ನು ನಿರಾಕರಿಸಿದರು. ತನ್ನದೇ ಆದ ಶೈಲಿಯನ್ನು ರೂಢಿಸಿ ಕೊಂಡಿದ್ದ ಕಾಳಪ್ಪನವರು ಕಲಾ ವಿದ್ಯಾರ್ಥಿಯಾಗಿದ್ದಾಗಲೇ ಶಾರದಾವಿಲಾಸ ಹೈಸ್ಕೂಲಿನ ಹಿಂದಿ ಪಂಡಿತ್ ಗಣಪತಿ ಭಟ್ ಅವರ ಭಾವಚಿತ್ರ ರಚಿಸಿ ಅಖಿಲ ಭಾರತ ದಸರಾ ವಸ್ತು ಪ್ರದರ್ಶನದ ಕಲಾ ವಿಭಾಗದಲ್ಲಿ ಪ್ರಥಮ ಬಹುಮಾನ ಪಡೆದು ಗಮನ ಸೆಳೆದರು. ೧೯೩೮ರಲ್ಲಿ ಜಲವರ್ಣ ಸಂಯೋಜನೆ ಕಲೆಗೂ, ೧೯೫೭ರಲ್ಲಿ ಭಾವಚಿತ್ರಕ್ಕೂ ಪ್ರಥಮ ಬಹುಮಾನ ಲಭಿಸಿತ್ತು. ಸಾಕಷ್ಟು ಚಿತ್ರಕಲಾ ಸ್ಪರ್ಧೆಗಳಲ್ಲಿ ಭಾಗಿಯಾಗಿ ಬಹುಮಾನಗಳನ್ನು ಪಡೆದಿದ್ದರು.

ಹವ್ಯಾಸಿ ಕಲಾವಿದರಿಗೆ ನೆರವಾಗುವ ದೃಷ್ಟಿಯಿಂದ ೧೯೫೪ರಲ್ಲಿ ರಾಜ್ಯಸರ್ಕಾರ ಮತ್ತು ಲಲಿತ ಕಲಾ ಅಕಾಡೆಮಿ ಮನ್ನಣೆ ಪಡೆದ ಪ್ರಥಮ ಖಾಸಗಿ ಶಾಲೆಯಾಗಿ ''ಶ್ರೀ ಕಲಾನಿಕೇತನ ಸ್ಕೂಲ್ ಆಫ್ ಆರ್ಟ್ಸ್'' ಸಂಸ್ಥೆಯನ್ನು ಮೈಸೂರಿನಲ್ಲಿ ಪ್ರಾರಂಭಿಸಿದರು. ಅಲ್ಲದೆ ಡಿ.ಟಿ.ಸಿ.ಗೂ ಮೊದಲ ಅನುಮತಿ ಪಡೆದುದು ವಿಶೇಷ. ಸಂಸ್ಥಾಪಕ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸಿ ೧೯೮೦ರಲ್ಲಿ ರಜತ ಮಹೋತ್ಸವವನ್ನು ಆಚರಿಸಿದ ಕೀರ್ತಿ ಇವರದು. ಖ್ಯಾತ ಕಲಾವಿದ ದಿ|| ಎಚ್. ಎಸ್. ಪಾಠಕ್ ಒಬ್ಬರೇ ವಿದ್ಯಾರ್ಥಿಯಾಗಿದ್ದು ಪ್ರಾರಂಭವಾದ ಶಾಲೆಯಲ್ಲಿ ರಾಮಕೃಷ್ಣ ಆಶ್ರಮದ ಕಲಾವಿದ ಬಿ.ಎ.ಪಿ. ಭಟ್, ಬಿ.ಕೆ. ಮುತ್ತಪ್ಪ, ಎಂ.ಕೆ. ಮುತ್ತಪ್ಪ, ಖ್ಯಾತ ಕಲಾವಿದ ಹುಬ್ಳೀಕರ ಧರ್ಮಪತ್ನಿ ಶ್ರೀಮತಿ ಪದ್ಮ, ಕೆ. ಕಮಲಮ್ಮ, ಕೆ. ನಾಗೇಶ, ಪ್ಯಾರಿಸ್‌ನಲ್ಲಿರುವ ಚಾಂದಿನಿ ಪವಾರ ಈ ಶಾಲಾ ವಿದ್ಯಾರ್ಥಿಗಳಾಗಿದ್ದುದು ಹೆಮ್ಮೆಯ ವಿಷಯ. ಕಲಾ ವಿನ್ಯಾಸ, ಭಾವಚಿತ್ರ, ಚಾರಿತ್ರಿಕ ಹಾಗೂ ನಿಸರ್ಗ ಚಿತ್ರಗಳಲ್ಲಿನ ತೈಲವರ್ಣ, ಜಲವರ್ಣಗಳೆರಡರಲ್ಲೂ ನಿಪುಣರಾಗಿದ್ದ ಕಾಳಪ್ಪನವರಿಗೆ ಜಲವರ್ಣ ತುಂಬಾ ಮೆಚ್ಚಿಗೆಯ ಮಾಧ್ಯಮ ವಾಗಿತ್ತು. ಇದರಿಂದಾಗಿ ಉನ್ನತ ಕಲಾಕಾರ್ಯಗಳನ್ನು ನಿರ್ವಹಿಸುವಲ್ಲಿ ಯಶಸ್ಸು ತಂದಿತು. ಸ್ವತಂತ್ರವಾಗಿ ''ಸಿನಿ ಆರ್ಟ್ಸ್ ಅಂಡ್ ಪಬ್ಲಿಸಿಟಿ'' ಸಂಸ್ಥೆಯನ್ನು ೧೯೪೩ರಲ್ಲಿ ಬೆಂಗಳೂರು ಮತ್ತು ಮೈಸೂರಲ್ಲಿ ಸ್ಥಾಪಿಸಿ ಅದರ ಮುಖಂಡತ್ವ ವಹಿಸಿ ನಡೆಸಿದ್ದರು.



*ಕಾಳಪ್ಪನವರು ರಚಿಸಿರುವ ಒಂದು ಚಿತ್ರ*

ನವದೆಹಲಿಯಲ್ಲಿ ೧೯೫೦ರಲ್ಲಿ ಜರುಗಿದ ಪ್ರಥಮ ಗಣರಾಜ್ಯ ದಿನಾಚರಣೆಯಲ್ಲಿ ''ಮಹಿಷಾಸುರ ಮರ್ದಿನಿ'' ಸ್ತಬ್ಧ ಚಿತ್ರಕ್ಕಾಗಿ ಕಾರ್ಯ ನಿರ್ವಹಿಸಿದ್ದರು. ಎರಡು ಅಂಕದ ಫಲಕಗಳ ಭಾವಚಿತ್ರ, ಸಂಯೋಜನೆ ಸೇರಿದಂತೆ ೧೯೫೭ರ ಗುಬ್ಬಿ ಕಂಪೆನಿ ವಜ್ರ ಮಹೋತ್ಸವದಲ್ಲಿ ಜರುಗಿದ ರಷ್ಯ ಬ್ಯಾಲೆ, ಚಕ್ ಮೇಟ್ ಡ್ಯಾನ್ಸ್, ಜಾವ ಮತ್ತು ಜಪಾನ್ ಡ್ಯಾನ್ಸ್‌ಗಳ ನಾಲ್ಕು ವೇದಿಕೆಗಳಿಗೆ ವರ್ಣರಂಜಿತ ವಿನ್ಯಾಸ ಮಾಡಿ ಮೆಚ್ಚಿಗೆ ಪಡೆದಿದ್ದರು. ಕರ್ನಾಟಕ ಲಲಿತ ಕಲಾ ಅಕಾಡೆಮಿ ಚಿತ್ರಕಲಾ ಪ್ರದರ್ಶನ (೧೯೭೧), ಮತ್ತು ದಸರಾ ಚಿತ್ರ ಕಲಾ ಪ್ರದರ್ಶನದ (೧೯೭೫) ತೀರ್ಪುಗಾರ

*(೬೭ನೇ ಪುಟ ನೋಡಿ)*

# ಸಂವೇದನಾಶೀಲ ಚಿತ್ರ - ಬಂದ್ ಝುರೋಕೆ

ಮ. ಶ್ರೀ. ಮುರಳಿ ಕೃಷ್ಣ

ನಮ್ಮ ಬಹುತೇಕ ಚಲನಚಿತ್ರಗಳಲ್ಲಿ ಹೆಣ್ಣನ್ನು ಪ್ರದರ್ಶನದ ಗೊಂಬೆಯಂತೆಯೇ ತೋರಿಸುವುದು ಸರ್ವೇ ಸಾಮಾನ್ಯ. ಹೆಣ್ಣಿನ ಪಾತ್ರವೆಂದರೆ, ಅದು ತಾಯಿ, ಮಡದಿ ಅಥವಾ ತಂಗಿಯಾಗಿರಬಹುದು. ಅದು ಹೀಗೆಯೇ ಇರ ಬೇಕೆಂದು ಒಂದು ಸಿದ್ಧ ಸೂತ್ರವಿದೆಯೇನೋ ಎನ್ನುವಷ್ಟರ ಮಟ್ಟಿಗೆ ಚಿತ್ರಿಸಲ್ಪಡುತ್ತದೆ. ವೈವಿಧ್ಯತೆಯ ಕೊರತೆಯಿರುವುದೇ ಹೆಚ್ಚು. ಸ್ತ್ರೀ ಪಾತ್ರದ ಬೆಳವಣಿಗೆಗೂ ಅವಕಾಶ ವಿರುವುದಿಲ್ಲ. ಒಬ್ಬ ಸಾಮಾನ್ಯ ಮಹಿಳೆ ತನ್ನ ಬಾಳಿನಲ್ಲಿ ಎದುರಿಸುವ ಬವಣೆಗಳನ್ನು, ಸವಾಲುಗಳನ್ನು ವಾಸ್ತವವಾಗಿ ಬಿಂಬಿಸಿರುವ ಚಿತ್ರಗಳು ಬಹಳ ವಿರಳ. ಎಪ್ಪತ್ತು ಹಾಗೂ ಎಂಬತ್ತರ ದಶಕಗಳಲ್ಲಿ ಕೆಲವು ವಿಭಿನ್ನ, ವಿಚಾರ ಪ್ರಚೋದಕ ಚಿತ್ರಗಳು ತೆರೆಕಂಡವು. ಅವುಗಳನ್ನು ಕೆಲವರು ಹೊಸ ಅಲೆಯ ಚಿತ್ರಗಳೆಂದು ವ್ಯಾಖ್ಯಾನಿಸಿದರು. ಇನ್ನೂ ಕೆಲವರು ಕಲಾತ್ಮಕ ಚಿತ್ರಗಳೆಂದು ಹೆಸರಿಟ್ಟರು. ಮತ್ತೆ ಕೆಲವರು ಈ ರೀತಿಯ ವರ್ಗೀಕರಣ ಸರಿಯಲ್ಲ ; ಚಿತ್ರಗಳಲ್ಲಿರುವುದು ಎರಡೇ ಪರಿ, ಒಂದು ಕೆಟ್ಟದ್ದು; ಇನ್ನೊಂದು ಒಳ್ಳೆಯದು ಎಂದು ಅಭಿಪ್ರಾಯಪಟ್ಟರು. ವಾದ ವಿವಾದ ಏನೇ ಇರಲಿ, ಅವು ಕೆಲವು ಮೂಲಭೂತ ವಿಷಯಗಳನ್ನು ಎತ್ತುವುದರಲ್ಲಿ ಸಫಲವಾದವು. ಅಂತಹ ಕೆಲವು ಚಿತ್ರಗಳಲ್ಲಿ ಸ್ತ್ರೀ ಪಾತ್ರಗಳನ್ನು ವಿಭಿನ್ನ ಬಗೆಯಲ್ಲಿ ಚಿತ್ರೀಕರಿಸಲಾಗಿತ್ತು. ಕಳೆದ ವರ್ಷ ತೆರೆಕಂಡ ಕನ್ನಡ ಚಿತ್ರ ''ವಿಮೋಚನೆ'' ತಕ್ಷಣಕ್ಕೆ ನೆನಪಿಗೆ ಬರುವ ಒಂದು ಉದಾಹರಣೆ.

ಪ್ರೇಮಾ ಕಾರಂತ್ ಒಬ್ಬ ಚಲನಚಿತ್ರ ನಿರ್ದೇಶಕಿ. ನಾಟಕ ರಂಗದಲ್ಲೂ ಅಪಾರ ಅನುಭವವಿದೆ. ಇವರು ವಿಧವೆಯೊಬ್ಬಳ ಸಂಕಷ್ಟಗಳನ್ನು ಮಾರ್ಮಿಕವಾಗಿ ''ಫಣಿಯಮ್ಮ'' ಚಿತ್ರದಲ್ಲಿ ಚಿತ್ರೀಕರಿಸಿದ್ದರು. ರಾಷ್ಟ್ರ ಪ್ರಶಸ್ತಿಯನ್ನೂ ಪಡೆಯಿತು ಈ ಚಿತ್ರ. ದೀರ್ಘಾವಧಿಯ ನಂತರ, ಈಕೆ ನಿರ್ದೇಶಿಸಿರುವ ''ಬಂದ್ ಝುರೋಕೆ'' ಹಿಂದಿ ಚಲನಚಿತ್ರ ಇತ್ತೀಚೆಗೆ ಬೆಂಗಳೂರಿನಲ್ಲಿ ಬಿಡುಗಡೆ ಯಾಯಿತು. ಶಶಿ ದೇಶಪಾಂಡೆಯವರ ಆಂಗ್ಲ ಕಾದಂಬರಿ ''ದಿ ಡಾರ್ಕ್ ಹೋಲ್ಡ್ಸ್ ನೋ ಟೆರರ್ಸ್'' ಆಧಾರಿತ ಈ ಚಿತ್ರದ ನಿರ್ಮಾಪಕರು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮ ಹಾಗೂ ದೂರದರ್ಶನ. ಚಿತ್ರ ಪ್ರದರ್ಶನಗೊಳ್ಳಲು ಮೂರು ವರ್ಷಗಳು ಬೇಕಾಯಿತು.

ಸರಿತಾ (ಸೋನಾಲಿ ಕುಲಕರ್ಣಿ) ಒಬ್ಬ ಮಕ್ಕಳ ವೈದ್ಯೆ. ಕಷ್ಟಪಟ್ಟು ಆಕೆ ತನ್ನ ವೃತ್ತಿಯಲ್ಲಿ ಯಶಸ್ಸನ್ನು ಕಾಣುತ್ತಾಳೆ. ಈಕೆಯ ಪತಿ ಮನೋಹರ್ (ತುಷಾರ ದಲ್ವಿ). ಈತ ಕಾಲೇಜಿನಲ್ಲಿ ಅಧ್ಯಾಪಕ ಹಾಗೂ ಕವಿ. ಇವರದು ಪ್ರೇಮ ವಿವಾಹ. ಮನೋಹರ ಬೇರೆ ಜಾತಿಯವನಾಗಿರುವುದರಿಂದ ಈ ಮದುವೆಗೆ ಸರಿತಾಳ ತಾಯಿಯ ವಿರೋಧ. ಚಿಕ್ಕಂದಿನಿಂದಲೂ ಆಕೆಯಿಂದ ಉಪೇಕ್ಷಿಸಲ್ಪಟ್ಟಿದ್ದ ಸರಿತಾ ತನ್ನ ನಿಲುವನ್ನು ಬದಲಾಯಿಸುವುದಿಲ್ಲ. ಮುಂಬೈನಲ್ಲಿ ನೆಲೆ ನಿಲ್ಲುತ್ತಾರೆ. ಬಹುತೇಕ ಮಧ್ಯಮ ವರ್ಗದ ದಂಪತಿಗಳಿಗಿರುವಂತೆ ಇವರಿಗೂ ಕನಸುಗಳಿರುತ್ತವೆ. ಬಹಳ ಪರಿಶ್ರಮದಿಂದ ಸರಿತಾ ಸ್ವಂತ ಕ್ಲಿನಿಕ್ಕನ್ನು ಶುರುಮಾಡುತ್ತಾಳೆ. ನಂತರ ಮುದ್ದಾದ ಎರಡು ಮಕ್ಕಳಾಗುತ್ತವೆ. ಒಂದು ಮಧ್ಯಮ ವರ್ಗದ ಸುಖೀ ಸಂಸಾರ ಏನೇನು ಬಯಸುತ್ತದೆಯೋ, ಅವೆಲ್ಲಾ ಇವರಿಗೆ ಲಭಿಸಿರುತ್ತವೆ. ಆದರೆ ಮನೋಹರನಿಗೆ ತನ್ನ ಮಡದಿ ತನಗಿಂತ ಹೆಚ್ಚಾಗಿ ಗಳಿಸುವುದು ನುಂಗಲಾರದ ತುತ್ತಾಗುತ್ತದೆ. ಆತನಲ್ಲಿ ಪುರುಷ ಪ್ರಧಾನ ಮನೋಭಾವ ಜಾಗ್ರತವಾಗಿ ನಿತ್ಯ ರಾತ್ರಿ ಆಕೆಯ ಮೇಲೆ ಅತ್ಯಾಚಾರ ಮಾಡುತ್ತಾನೆ. ಆದರೆ ಬೆಳಿಗ್ಗೆ ತನ್ನಿಂದಾದ ಗಾಯಗಳಿಗೆ ಮುಲಾಮನ್ನು ತಡವಿ, ಅವು ಹೇಗಾದವೆಂದು ವಿಚಾರಿಸಿ ಕೊಳ್ಳುತ್ತಾನೆ. ಸರಿತಾ ಗಂಡನ ಈ ದ್ವಂದ್ವ ವರ್ತನೆಯಿಂದ ಜರ್ಝರಿತಳಾಗುತ್ತಾಳೆ. ಮೌನವಾಗಿ ರೋದಿಸುತ್ತಾಳೆ. ಹಿಂಸೆಯನ್ನು ತಾಳದೆ ಕೆಲಸ ಬಿಡುವುದಾಗಿ ತಿಳಿಸುತ್ತಾಳೆ. ಆದರೆ ಮನೋಹರ ತಮ್ಮ ಮುಂಬೈ ಜೀವನದ ಮೊದಲ ದಿನಗಳ ಕಠಿಣ ಜೀವನವನ್ನು ಹಾಗೂ ಈಗಿರುವ ಪರಿಸ್ಥಿತಿಯನ್ನು ವಿವರಿಸಿ, ಆಕೆಯ ಸಲಹೆಯನ್ನು ತಳ್ಳಿಹಾಕುತ್ತಾನೆ. ಕಡಿಮೆ ವರಮಾನದಲ್ಲೇ ತಾವು ನೆಮ್ಮದಿಯಿಂದ ಇದ್ದ ವಿಷಯವನ್ನು ಆಕೆ ಜ್ಞಾಪಿಸುತ್ತಾಳೆ. ಮನೋಹರ ಜಗ್ಗುವುದಿಲ್ಲ.

ಬಾಲ್ಯದಲ್ಲಿ ಸರಿತಾ ತನ್ನ ತಾಯಿಯಿಂದ ತಿರಸ್ಕರಿಸಲ್ಪಟ್ಟಿರುತ್ತಾಳೆ, ಹೆಜ್ಜೆ ಹೆಜ್ಜೆಗೂ ಆಕೆಯ ಮೂದಲಿಕೆಗೆ ಗುರಿಯಾಗಿರುತ್ತಾಳೆ. ಸರಿತಾಳ ತಮ್ಮ ಧ್ರುವ ಮಾತ್ರ ಮಾತೃವಾತ್ಸಲ್ಯಕ್ಕೆ ಪಾತ್ರವಾಗಿರುತ್ತಾನೆ. ಧ್ರುವ ''ಸರೂ ತಾಯಿ'' ಎಂದು ಕರೆದಾಗಲೆಲ್ಲಾ ಸರಿತಾ ಸಿಡಿಮಿಡಿಗೊಳ್ಳುತ್ತಾಳೆ. ಒಂದು ದಿನ ಸರಿತಾ ಹೊರಗೆ ಹೋಗುತ್ತಾಳೆ. ಧ್ರುವನೂ ಹೆಜ್ಜೆ ಹಾಕುತ್ತಾನೆ. ತಾಯಿಯ ಬೈಗುಳಗಳನ್ನು ನೆನೆದು ಆಕೆ ಅವನು ವಾಪಸಾಗುವಂತೆ ತಾಕೀತು ಮಾಡುತ್ತಾಳೆ. ಹುಡುಗ ಒಗೊಡುವುದಿಲ್ಲ. ಇಬ್ಬರೂ ನೀರಿನ ಹೊಂಡವೊಂದರ ಬಳಿ ಸಾಗುತ್ತಾರೆ. ಸ್ವಲ್ಪ ಸಮಯದ ನಂತರ ಮಳೆ ಬರುವ ಸಂಭವ ವಿರುವಾಗ ಸರಿತಾ ಮನೆಯ ಕಡೆ ಪಾದ ಬೆಳೆಸುತ್ತಾಳೆ. ಧ್ರುವ ಹಿಂದೆ ಉಳಿಯುತ್ತಾನೆ. ಅಕ್ಕ ಎಷ್ಟು ಕರೆದರೂ ಅವನು ಸೊಪ್ಪು ಹಾಕುವುದಿಲ್ಲ. ನೀರಿನಲ್ಲಿ ಇಳಿದು ಆಟವಾಡುತ್ತಾ ಕಣ್ಮರೆಯಾಗುತ್ತಾನೆ. ಸರಿತಾ ಅವನಿಗಾಗಿ ಹುಡುಕುತ್ತಾಳೆ. ಧ್ರುವ ಸಿಗುವುದಿಲ್ಲ. ಭಯದಿಂದ ಮನೆಗೆ ವಾಪಸ್ಸಾಗುತ್ತಾಳೆ. ನಡೆದ ವಿಷಯವನ್ನು ಹೇಳಲು ಹೆದರಿ ಸುಮ್ಮನಾಗುತ್ತಾಳೆ. ನಂತರ, ತಾಯಿ ಮಗನ ದುರ್ಮರಣಕ್ಕಾಗಿ ಸರಿತಾಳನ್ನು ದೂಷಿಸುತ್ತಾಳೆ.



ವಯಸ್ಕಳಾದ ಮೇಲೂ ಸರಿತಾಳನ್ನು ಕಾಡುತ್ತಿರುತ್ತದೆ ಧ್ರುವನ ಸಾವು. ಮದುವೆಯಾದ ನಂತರ ತೌರಿನ ಸಂಬಂಧ ಇರುವುದಿಲ್ಲ. ಒಂದು ದಿನ ಪರಿಚಿತರೊಬ್ಬರಿಂದ ತನ್ನ ತಾಯಿ ಅಸುನೀಗಿದ ಸಮಾಚಾರ ತಿಳಿಯುತ್ತದೆ. ಗಂಡನಿಗೆ ಸುದ್ದಿ ಮುಟ್ಟಿಸುತ್ತಾಳೆ. ನಂತರ ಧಾರವಾಡದ ತನ್ನ ತೌರಿನ ಮನೆಗೆ ಹೋಗುವ ತುಡಿತವನ್ನು ವ್ಯಕ್ತಪಡಿಸುತ್ತಾಳೆ. ಮನೋಹರ ನಕಾರಾತ್ಮಕವಾಗಿ ಪ್ರತಿಕ್ರಿಯಿಸುತ್ತಾನೆ. ಆದರೂ ಆಕೆ ತನ್ನ ನಿರ್ಧಾರವನ್ನು ಬದಲಿಸುವುದಿಲ್ಲ. ಧಾರವಾಡಕ್ಕೆ ಹೋದಾಗ ತನ್ನ ತಂದೆ ಸಿ. ಎ. ಓದುತ್ತಿರುವ ಮಾಧವನ ಜೊತೆಯಲ್ಲಿ ಜೀವನ ಸಾಗಿಸುತ್ತಿರುತ್ತಾನೆ. ಸುಮಾರು ೧೫ ವರ್ಷಗಳ ತರುವಾಯ ತೌರಿಗೆ ಬಂದ ಸರಿತಾ ಗತ ಸಂಗತಿಗಳನ್ನು ಮೆಲುಕು ಹಾಕುತ್ತಾಳೆ. ಮನಸ್ಸಿಗೆ ಹಾಯೆನ್ನಿಸುತ್ತದೆ.

ಒಂದು ದಿನ ರಾತ್ರಿ ಜೋರಾಗಿ ಮಳೆ ಸುರಿಯುತ್ತಿರುತ್ತದೆ. ಆ ನೀರವತೆಯಲ್ಲಿ, ತಂದೆಯೊಡನೆ ಮಾತನಾಡುತ್ತಾ ಸರಿತಾ ತನ್ನನ್ನು ದಹಿಸುತ್ತಿದ್ದ ಧ್ರುವನ ಸಾವು ಹಾಗೂ ತನ್ನ ವೈವಾಹಿಕ ಜೀವನದ ಗಂಭೀರ ಸ್ಥಿತಿಯನ್ನು ಬಹಿರಂಗಗೊಳಿಸುತ್ತಾಳೆ. ಪತಿಯ ಇಬ್ಬಗೆಯ ನಡವಳಿಕೆಯನ್ನು ಆತನಿಗೆ ಮನದಟ್ಟು ಮಾಡಲಾಗದ ತನ್ನ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾಳೆ. ಎಲ್ಲಾ ತಂದೆ ಯರಂತೆಯೇ ಸರಿತಾಳ ತಂದೆ ಪ್ರತಿಕ್ರಿಯಿಸುತ್ತಾನೆ. ವೈದ್ಯನಲ್ಲಿಗೆ ಕರೆದೊಯ್ಯುವಂತೆ ಸಲಹೆ ನೀಡುತ್ತಾನೆ. ಮನೋಹರನಿಗೆ ಒಂದು ಅವಕಾಶವನ್ನು ನೀಡುವಂತೆ ಸೂಚಿಸುತ್ತಾನೆ. ಸಾಂತ್ವನವನ್ನೂ ನೀಡುತ್ತಾನೆ. ಆಕೆ ಆತನಿಂದ ನೆರವನ್ನು ನಿರೀಕ್ಷಿಸುತ್ತಾಳೆ. ಆದರೆ ಆತ ಬಾಳಿನ ಸಂದಿಗ್ಧ ಪರಿಸ್ಥಿತಿಗಳನ್ನು ಆಕೆಯೇ ಎದುರಿಸಬೇಕೆಂದು ಅಭಿಪ್ರಾಯ ಪಡುತ್ತಾನೆ. ಸರಿತಾ ದೃಢಮನಸ್ಕಳಾಗಿ ''ಕಟ್ಟ ಕಡೆಗೆ ಹೇಗೂ ಅದು ತನ್ನ

ಜೀವನವಷ್ಟೆ'' ಎಂದು ಉಚ್ಚರಿಸುತ್ತಾಳೆ. ತನ್ನ ಪತಿ ಧಾರವಾಡಕ್ಕೆ ಬರುವ ವರ್ತಮಾನ ತಿಳಿದು ಆಕೆ ಮನೆ ಬಿಡಲು ನಿಶ್ಚಯಿಸಿರುತ್ತಾಳೆ. ಈಗ ಆ ನಿರ್ಧಾರವನ್ನು ಕೈ ಬಿಡುತ್ತಾಳೆ. ಮನೋಹರನನ್ನು ಎದುರಿಸಿ ಅವನ ಜೊತೆ ಮಾತನಾಡಲು ನಿರ್ಣಯಿಸುತ್ತಾಳೆ. ತಾನೇ ಮುಚ್ಚಿದ ಕಿಟಕಿಗಳನ್ನು ಒಂದೊಂದಾಗಿ ತೆಗೆಯುತ್ತಾಳೆ. ತೂರಿ ಬರುತ್ತದೆ ಬೆಳಕು. ವಾಸ್ತವದಿಂದ ಓಡಿ ಹೋಗಲಾಗುವುದಿಲ್ಲ ಎಂಬ ಹೊಸ ಪ್ರಜ್ಞೆಯೊಡನೆ, ಆಕೆ ರೋಗಿಯೊಬ್ಬನಿಗೆ ವೈದ್ಯಕೀಯ ನೆರವು ನೀಡಲು ಆತ್ಮವಿಶ್ವಾಸದಿಂದ ಮುನ್ನಡೆಯುವುದರೊಂದಿಗೆ ಚಿತ್ರ ಮುಗಿಯುತ್ತದೆ.

ಈ ಚಿತ್ರವನ್ನು ನನ್ನ ಮಿತ್ರನ ಸಂಗಡ ವೀಕ್ಷಿಸಿದೆ. ಇದರ ಬಗ್ಗೆ ಚರ್ಚಿಸುತ್ತಿದ್ದಾಗ ಅವನು ಚಿಕ್ಕಂದಿನಲ್ಲಿ ತಾಯಿಯಿಂದ ಸರಿತಾಳಿಗಾದ ಪಕ್ಷಪಾತದ ಧೋರಣೆಯನ್ನು ಪ್ರಸ್ತಾಪಿಸುತ್ತಾ, ''ಹೆಣ್ಣಿಗೆ ಹೆಣ್ಣೇ ಶತ್ರು'' ಎಂಬ ಅನಿಸಿಕೆಯನ್ನು ಮಂಡಿಸಿದ. ಇದು ಕೇವಲ ಹಳಸಿ ನಾರಿದ ಒಂದು ಪ್ರತಿಕ್ರಿಯೆ. ಏಕೆಂದರೆ, ಪಿತೃ ಪ್ರಧಾನ ವ್ಯವಸ್ಥೆಯಲ್ಲಿರುವ ಸರಿತಾಳ ತಾಯಿ, ಮಗಳು ತನ್ನಂತೆಯೇ ಬೆಳೆಯಬೇಕೆಂದು ನಿರೀಕ್ಷಿಸುವುದು ತೀರಾ ಸಹಜ. ಆಕೆಯ ನಡೆವಳಿಕೆಗೂ ಹಾಗೂ ಮನೋಹರ ಅತ್ಯಾಚಾರವೆಸಗುವ ಕೃತ್ಯಕ್ಕೂ ಅಜಗಜಾಂತರ ವ್ಯತ್ಯಾಸಗಳಿವೆ. ಮನೋಹರನ ವರ್ತನೆಯ ಬಗ್ಗೆ ಸರಿತಾಳ ತಂದೆಯ ನಿಲುವು ಸಹ ಎಲ್ಲಾ ತಂದೆಯರಂತೆಯೇ ಇದ್ದು, ಅದೂ ಸಹ ಪುರುಷ ಪ್ರಧಾನ ಧೋರಣೆಯಿಂದ ಪ್ರೇರೇಪಿತವಾದದ್ದು. ಚಿತ್ರದ ಕೊನೆಯಲ್ಲಿ ಸರಿತಾ ಮನೋಹರನ ಬಗ್ಗೆ ಯಾವ ರೀತಿಯ ಅಂತಿಮ ತೀರ್ಮಾನ ತೆಗೆದುಕೊಳ್ಳುವಳು ಎಂಬುದು ಅಸ್ಪಷ್ಟ. ಈ ಚಿತ್ರದಲ್ಲಿ ದಾಂಪತ್ಯವೊಂದರ ಅತ್ಯಾಚಾರದ ಬಗ್ಗೆ ಒತ್ತು ಕೊಟ್ಟಿದ್ದರೂ, ಹೆಣ್ಣು ಮಗುವಿನ ತಿರಸ್ಕರಿಸುವಿಕೆ, ಪತಿ ಪತ್ನಿಯರ ಸಂಕೀರ್ಣ ಸಂಬಂಧ, ಮದುವೆಯೆಂಬ ವ್ಯವಸ್ಥೆಯ ಮೇಲಿನ ಅವಲಂಬನೆ, ದುಡಿಯುವ ಮಹಿಳೆಯ ಆತಂಕಗಳು, ಶೋಷಣೆ ಮುಂತಾದ ಗಂಭೀರ ವಿಷಯಗಳ ಬಗ್ಗೆ ಕ್ಷ - ಕಿರಣ ಬೀರಲಾಗಿದೆ. ಪ್ರಸ್ತುತ ಹಾಗೂ ಗತ ಸಂಗತಿಗಳನ್ನು ಅಕ್ಕ - ಪಕ್ಕ ಜೋಡಿಸಿ ನಿರೂಪಿಸುವುದಕ್ಕೆ ಫ್ಲ್ಯಾಷ್‌ಬ್ಯಾಕ್ ತಂತ್ರವನ್ನು ಬಳಸಲಾಗಿದೆ. ಚಿತ್ರದ ಗಹನತೆಗೆ ತಕ್ಕಂತಿದೆ ಬಿ. ವಿ. ಕಾರಂತರ ಸಂಗೀತ. ಮನೋಜ್ಞವಾಗಿ ನಟಿಸಿದ್ದಾರೆ ಸೋನಾಲಿ ಕುಲಕರ್ಣಿ. ಅಣ್ಣು ಕಪೂರ್ ತನ್ನ ಅಭಿನಯ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ.

ವೀಕ್ಷಕರನ್ನು ತಟ್ಟಿ, ಯೋಚಿಸುವಂತೆ ಮಾಡುವ ಇಂತಹ ಸಂವೇದನಾಶೀಲ ಚಿತ್ರಗಳು ಸ್ವಾಗತಾರ್ಹ. ಆದರೆ ಈ ಚಿತ್ರ ಓಡಿದ್ದು ಕೇವಲ ಒಂದೇ ವಾರ. ಇದು ನಿಜಕ್ಕೂ ದುರಂತದ ವಿಷಯ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್ ಗವಿಪುರಂ ಬಡಾವಣೆ, ಬೆಂಗಳೂರು -೧೯

---

*ಎಸ್. ಕಾಳಪ್ಪ............*

ರಾಗಿದ್ದರು. ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡೆಮಿ ಯವರಿಗಾಗಿ ಶ್ರವಣಬೆಳಗೊಳದ ಜೈನ ಬಸದಿಗಳ ಭಿತ್ತಿ ಚಿತ್ರಗಳನ್ನು ಹಾಗೂ ಶ್ರೀರಂಗಪಟ್ಟಣ, ಮಡಿಕೇರಿ ಭಿತ್ತಿ ಚಿತ್ರಗಳನ್ನೂ ನಕಲು ಮಾಡಿಕೊಟ್ಟಿದ್ದಾರೆ.

**ಪ್ರಶಸ್ತಿಗಳು** : ರಾಜ್ಯ ಮತ್ತು ರಾಷ್ಟ್ರದ ವಿವಿಧೆಡೆಗಳಲ್ಲಿ ಹಲವಾರು ಪ್ರದರ್ಶನಗಳನ್ನು ನಡೆಸಿರುವ ಕೀರ್ತಿ ಇರುವ ಶ್ರೀ ಕಾಳಪ್ಪನವರು, ಸರ್ಕಾರದಿಂದ ಬರಬೇಕಾಗಿದ್ದ ರಾಜ್ಯ ಪ್ರಶಸ್ತಿ ಮೊದಲಾದುವುಗಳಿಂದ ವಂಚಿತರಾದರೂ ಮೈಸೂರು ರಾಜ್ಯ ಚಿತ್ರಕಲಾ ಉಪನ್ಯಾಸಕರ ಸಂಘ, ನವದೆಹಲಿಯ ಆಲ್ ಇಂಡಿಯಾ ಫೈನ್ ಆರ್ಟ್ಸ್ ಅಂಡ್ ಕ್ರಾಫ್ಟ್ಸ್ ಸೊಸೈಟಿ, ಮೈಸೂರಿನ ಪಶ್ಚಿಮ ಲಯನ್ಸ್ ಕ್ಲಬ್ ಮತ್ತು ವಾಣಿ ವಿದ್ಯಾಮಂದಿರದವರು ಇವರ ಅಪೂರ್ವ ಚಿತ್ರಕಲೆಯ ಸೇವೆಯನ್ನು ಗುರ್ತಿಸಿ ಗೌರವಿಸಿದ್ದಾರೆ.

೧೯೮೫ರ ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಶಸ್ತಿಯಲ್ಲದೆ ಕಲಾಕ್ಷೇತ್ರದಲ್ಲಿನ ಉತ್ಕೃಷ್ಟವಾದ ಕಲಾ ಸೇವೆಯನ್ನು ಗಮನಿಸಿ ಲಲಿತ ಕಲಾ ಅಕಾಡೆಮಿ ಇತ್ತ ವಿಶೇಷ ಪ್ರಶಸ್ತಿ (೧೯೮೭)ಗಳನ್ನು ಪಡೆದಿದ್ದಾರೆ.

(**ಸೂಚನೆ** : ಇವರ ಕೃತಿಗಳಿಗಾಗಿ ಹೊದಿಕೆಯ ಪುಟ ೩ರಲ್ಲಿ ನೋಡಿ).

**ಪಿ. ಎಂ. ರಾಜನ್**
೨೫೦, ತ್ಯಾಗಮಾರ್ಗ, ಸಿದ್ಧಾರ್ಥ ನಗರ ೧ನೇ ಹಂತ
ಮೈಸೂರು - ೫೭೦ ೦೧೧

---

# ಕತ್ತಿ ಯಾವುದಾದರೇನು?

**ಡಾ|| ರಹಮತ್ ತರೀಕೆರೆ**

ಅಂಡಮಾನ್ ನಿಕೋಬಾರ್ ದ್ವೀಪಗಳನ್ನೇನೋ ಬ್ರಿಟಿಷರು ವಶಪಡಿಸಿಕೊಂಡರು. ಆದರೆ ಅವರಿಗೆ ಸುಖನಿದ್ದೆ ಇರಲಿಲ್ಲ. ಅದರಲ್ಲೂ ಯಾವಾಗ ಇಲ್ಲಿ ಭಾರಿ ಜೈಲನ್ನು ಕಟ್ಟಿ (೧೯೦೬) ಬ್ರಿಟಿಷ್ ಸಾಮ್ರಾಜ್ಯಕ್ಕೆ ಕಂಟಕಪ್ರಾಯವಾಗಿದ್ದವರನ್ನೆಲ್ಲ ತಂದು ಈ ದ್ವೀಪಗಳಿಗೆ ಸುರಿಯಲಾಯಿತೋ, ಅಂದಿನಿಂದ ಅವರಿಗೆ ತುಂಬ ನಿರಾಳವಾಗಿ ಎಲ್ಲಿ ಬೇಕೆಂದರಲ್ಲಿ ವಾಸಿಸುವುದು ಕಠಿಣವಾಯಿತು. ಯಾವ ಗಳಿಗೆಯಲ್ಲಿ ಕೈದಿಗಳು ದಂಗೆಯೆದ್ದು ಅಲ್ಪ ಸಂಖ್ಯಾತರಾದ ತಮ್ಮ ಕತೆಯನ್ನು ಮುಗಿಸಿಬಿಡುವರೋ ಗೊತ್ತಿಲ್ಲ. ಸೂರ್ಯ ಮುಳುಗದ ಸಾಮ್ರಾಜ್ಯ ಆಳುವವರಿಗೂ ಸೂರ್ಯ ಮುಳುಗಿದ ಮೇಲೆ ಬ್ಲೇರ್ ಪಟ್ಟಣದಲ್ಲಿ ಇರಲು ಭಯವಾಗಿ ಸುರಕ್ಷಿತ ತಾಣವನ್ನು ಹುಡುಕಿಕೊಳ್ಳಬೇಕಾಯಿತು. ಆಗ ಅವರಿಗೆ ಕಂಡಿದ್ದು ರಾಸ್ ದ್ವೀಪ. ಸಂಜೆಯಾದೊಡನೆ ಬ್ಲೇರಿನಲ್ಲಿದ್ದ ಎಲ್ಲ ಬ್ರಿಟಿಷರು ರಾಸ್‌ನಲ್ಲಿದ್ದ ತಂತಮ್ಮ ವಸತಿಯನ್ನು ಸೇರಿಕೊಳ್ಳುತ್ತಿದ್ದರು. ಪೋರ್ಟ್ ಬ್ಲೇರ್ ಪಟ್ಟಣದ ಯಾವ ದಿಬ್ಬದ ಮೇಲೆ ನಿಂತರೂ ಕಾಣುವ ಈ ದ್ವೀಪ ೨ ಕಿ.ಮೀ. ದೂರದಲ್ಲಿದೆ. ಇದೇ ಬ್ರಿಟಿಷರ ಕಾಲದಲ್ಲಿ ಅಂಡಮಾನಿನ ರಾಜಧಾನಿ. ರಾಸ್ ಎಂಬುದು ಬ್ರಿಟಿಷ್ ಅಧಿಕಾರಿಯೊಬ್ಬನ ಹೆಸರು.

ರಾಸ್ ದ್ವೀಪವಾಸಕ್ಕೆ ಜೀವರಕ್ಷಣೆ ಮೊದಲ ಕಾರಣವಾದರೆ, ಎರಡನೆಯ ಕಾರಣ ಬಹುಶಃ ಸಾಂಸ್ಕೃತಿಕವಾದುದಿರಬೇಕು. ತಮ್ಮ ತಾಯಿನಾಡಿನಿಂದ ಬಹುದೂರ ಬಂದವರಿಗೆ ತಾವಿರುವ ಕಡೆಯಲ್ಲೇ ಇಂಗ್ಲೆಂಡನ್ನು ಕಟ್ಟಿಕೊಳ್ಳುವುದು ಅಗತ್ಯವಾಯಿತು. ಸಾಮಾನ್ಯವಾಗಿ ಕಂಟೋನ್ಮೆಂಟುಗಳು ಈ ಬಗೆಯ ತಾಣಗಳಾಗಿದ್ದವು. (ಮಾಸ್ತಿಯವರ ಒಂದು ಕತೆಯಲ್ಲಿ ಬರುವ ಇಸಬೆಲ್ಲ ಎಂಬ ಇಂಗ್ಲೆಂಡಿನ ಯುವತಿಯು, ತನ್ನ ಪ್ರಿಯಕರ ಇರುವ ಕಾಫಿ ಎಸ್ಟೇಟನ್ನು ಬಿಟ್ಟು ಕೆಲವು ದಿನ ಬೆಂಗಳೂರಿನ ಕಂಟೋನ್ಮೆಂಟಿಗೆ ಹೋಗಿ ಇಂಗ್ಲೆಂಡನ್ನು ಅನುಭವಿಸಿ ಬರುತ್ತಾಳೆ). ರಾಸ್‌ದ್ವೀಪ ಕೂಡ ಭಾರತದಲ್ಲಿದ್ದ ಕಂಟೋನ್ಮೆಂಟುಗಳಂತೆ ಇಂಗ್ಲೆಂಡಿನ ತುಣುಕು. ಇಂಗ್ಲೆಂಡಿನ ಈ ಪ್ರತಿಕೃತಿಯ ಚೆಲುವನ್ನು ಅನೇಕ ಅಧಿಕಾರಿಗಳು ತಮ್ಮ ಮಡದಿಯರಿಗೆ ತಾಯಿಗೆ ಮಕ್ಕಳಿಗೆ ಮನದುಂಬಿ ವರ್ಣಿಸಿರುವ ಪತ್ರಗಳಿವೆ. ಇವನ್ನು ಓದಿದರೆ ಅವರು ಈ ವಸತಿಯನ್ನು ಬಹಳ ಮುತುವರ್ಜಿಯಿಂದ ನಿರ್ಮಿಸಿಕೊಂಡಿದ್ದರು ಎಂದು ಊಹಿಸಬಹುದು. ಈಗಲೂ ರಾಸ್‌ಗೆ ಹೋದರೆ ಥೇಟ್ ಇಂಗ್ಲೆಂಡಿನ ಯಾವುದೋ ಬೇಚಿರಾಗ್ ಹಳ್ಳಿಗೆ ಹೋದಂತಾಗುತ್ತದೆ. ಚರ್ಚು, ಸ್ಮಶಾನ, ಟೆನ್ನಿಸ್ ಕೋರ್ಟು, ಕ್ಲಬ್ಬುಗಳು, ಕಡಲ ನೀರು ಕಾಯಿಸಿ ಕುಡಿನೀರು ಮಾಡುವ ದೊಡ್ಡ ದೊಡ್ಡ ಕಡಾಯಿ ಯಂತ್ರಗಳು, ಉಗ್ರಾಣಗಳು, ಪ್ರಿಂಟಿಂಗ್ ಪ್ರೆಸ್ ಎಲ್ಲ ಅವಶೇಷಗಳಾಗಿವೆ. ಆದರೆ ಈ ಅಭಿನವ ಇಂಗ್ಲೆಂಡನ್ನು ಸಂಭಾಳಿಸಲು ಅಪಾರವಾದ ಭಾರತೀಯ ಕೂಲಿಗಳು ಮೈಮುರಿಯ



*ಕಡಲ ನೀರನ್ನು ಕುದಿಸುವ ಭಟ್ಟಿಯಂತ್ರಗಳು*

ಬೇಕಾಗುತ್ತಿತ್ತು. ಅವರ ಕೂಸುಗಳನ್ನು ಕೈಗಾಡಿಗಳಲ್ಲಿ ತಳ್ಳಿಕೊಂಡು ತಿರುಗಾಡಿಸುತ್ತಿರುವ ದಾದಿಯರು, ಅವರ ಹುಲ್ಲು ಹಾಸನ್ನು ನೀಟಾಗಿ ಕತ್ತರಿಸಿ ಇಡುವ ಮಾಲಿಗಳು, ಅವರ ಹಾರಿಹೋದ ಟೆನ್ನಿಸ್ ಚೆಂಡನ್ನು ಆರಿಸಿಕೊಂಡು ಬರುವವರು, ನೀರು ಕಾಯಿಸಿ ಅದರ ಹಬೆಯನ್ನು ತಂಪುಗೈದು ಕುಡಿನೀರು ಸಿದ್ಧಪಡಿಸುವವರು - ಎಲ್ಲರೂ ಕರಿಯರಾದ ಭಾರತೀಯರು. ಜನವಸತಿಯಿದ್ದಾಗ ತೆಗೆದ ಫೋಟೋಗಳಲ್ಲಿದು ನಿಚ್ಚಳವಾಗಿ ತೋರುತ್ತಿತ್ತು. ಸಾಮಾನ್ಯವಾಗಿ ಈ ಕೆಲಸವನ್ನು ಸಜ್ಜನಿಕೆ ತೋರಿ ಜೈಲಿನ ಹೊರಗೆ ಓಡಾಡಲು ಅವಕಾಶ ಪಡೆದ ಕೈದಿಗಳಿಂದ ಮಾಡಿಸಲಾಗುತ್ತಿತ್ತು.

ರಾಸ್ ಪಾಳಿನಲ್ಲಿ ಎದ್ದುಕಂಡ ಸಂಗತಿ ಎಂದರೆ, ಬೇರೆ ಬೇರೆ ರ‍್ಯಾಂಕಿನ ಅಧಿಕಾರಿಗಳಿಗೆ ಬೇರೆಬೇರೆ ಮನೆಗಳಿರುವುದು ಇರಲಿ, ಬೇರೆಬೇರೆ ಆಟದ ಮೈದಾನಗಳೂ ಇರುವುದು. ಇದು ಸೈನಿಕ ವ್ಯವಸ್ಥೆಯ ಭಾಗವೋ ಬ್ರಿಟಿಷರ ಸಂಸ್ಕೃತಿಯ ಭಾಗವೋ ತಿಳಿಯಲಿಲ್ಲ. ಸದ್ಯಕ್ಕೆ ಚರ್ಚು ಮಾತ್ರ ಒಂದೇ ಇತ್ತು. ಸುತ್ತಲಿನ ಮರಗಳ ಬೇರುಗಳ ನುಗ್ಗಿಗೆ ಅದರ ಗೋಡೆಗಳೆಲ್ಲ ಬಿರುಕುಬಿಟ್ಟಿವೆ. ಮಳೆ ಸುರಿದುಸುರಿದು ಪಾಚಿ ಬೆಳೆದು ಅದರ ಮರದ ತೊಲೆಗಳೆಲ್ಲ ಕರಗಿ ಎಲುವಿನ ಗೂಡಾಗಿವೆ. ಮೂಲತಃ ಕ್ರೈಸ್ತಧರ್ಮ ಪಾಪಪ್ರಜ್ಞೆ ಉದ್ದೀಪಿಸುವಂತಹುದು. ಒಂದು ದೊಡ್ಡ ದೇಶವನ್ನು ಅದರ ಇಷ್ಟಕ್ಕೆ ವಿರುದ್ಧವಾಗಿ ಆಕ್ರಮಿಸಿಕೊಂಡು ಕ್ರೂರವಾದ ದಮನದಿಂದ ಆಳುತ್ತಿದ್ದ ಬ್ರಿಟಿಷರು ಈ ಚರ್ಚಿನಲ್ಲಿ ಪಾಪಪ್ರಜ್ಞೆಯಿಲ್ಲದೆ ಹೇಗಾದರೂ ಪ್ರಾರ್ಥನೆ ಸಲ್ಲಿಸುತ್ತಿದ್ದರು ? ಅದೂ ಪಕ್ಕದಲ್ಲೇ ಇರುವ ಸೆಲ್ಯುಲಾರ್ ಜೈಲಿನಲ್ಲಿ, ತಮ್ಮ ನಾಡಿನ ಬಿಡುಗಡೆಗಾಗಿ ಪ್ರತಿಭಟಿಸಿದ್ದೇ ಅಪರಾಧವಾಗಿರುವ ಸಾವಿರಾರು ಜನರನ್ನು ಕೂಡಿಹಾಕಿಕೊಂಡು, ಪರಲೋಕದಲ್ಲಿರುವ ತಮ್ಮ ತಂದೆಯನ್ನು ನಮ್ಮ ಪಾಪಗಳನ್ನು ಕ್ಷಮಿಸು ಎಂದು ಹೇಗೆ ಬೇಡುತ್ತಿದ್ದರು ? ಊಹಿಸುವುದಕ್ಕೆ ಕಷ್ಟವಾಯಿತು. ಬ್ರಿಟಿಷರು ತಾವು ಮಾಡಿದ ಆರ್ಥಿಕ ಸಾಮಾಜಿಕ ದಮನಗಳಿಗೆ ಧರ್ಮಪ್ರಸಾರದ ಹೆಸರನ್ನು ಕೊಟ್ಟು ಸಮರ್ಥಿಸಿರುವ ಸಾಧ್ಯತೆಗಳೂ ಇವೆ. ಮಿಶನರಿ ಕೆಲಸವನ್ನು ಧಿಕ್ಕರಿಸಿ ಬುಡಕಟ್ಟು ಜನರ ಭಾಗವಾಗಿಹೋದ ಪಾದ್ರಿ ವೆರಿಯರ್ ಎಲ್ವಿನ್‌ನಂತಹವರು ಎಷ್ಟಿದ್ದಾರೆ ? ಅನ್ಯದೇಶಗಳ ಲೂಟಿಗೆಂದು ಸೈನ್ಯ ಸಮೇತ ಬರುವವರಿಗೆ ಧರ್ಮಗಳು ವಿವೇಕ ಹುಟ್ಟಿಸುವುದಾಗಿದ್ದರೆ, ಬ್ರಿಟಿಷರು ಏಷಿಯಾ ಆಫ್ರಿಕಾಗಳನ್ನು ಕಾಲನಿಗಳಾಗಿ ಮಾಡಿಕೊಂಡು ಆಳಲು ಬರುವುದು ಸಾಧ್ಯವೇ ಇರಲಿಲ್ಲ. ವ್ಯಾಪಾರಿಗಳ ಸಂಘವಾದ ಈಸ್ಟ್ ಇಂಡಿಯಾ ಕಂಪೆನಿ, ತನ್ನ ಕಾಲನಿಗಳನ್ನು ಲಾಭಕೋರ ಕಣ್ಣಿನಿಂದ ನೋಡಿದ್ದನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಸರಿತಪ್ಪುಗಳನ್ನು ಚರ್ಚೆ ಮಾಡುವ ಪಾರ್ಲಿಮೆಂಟ್ ಇದ್ದ ಪ್ರಜಾಪ್ರಭುತ್ವದ ದೇಶವೊಂದು, ಅದರಲ್ಲೂ ಕಾರ್ಮಿಕರ ಹೆಸರಿನಲ್ಲಿ ಪಾರ್ಟಿಯೂ ಇದ್ದ ದೇಶವೊಂದು, ತನ್ನ ಕಾಲನಿಗಳ ಸುಲಿಗೆಯನ್ನು, ಅದರ ಜನರ ದಮನವನ್ನು ಮುಂದುವರೆಸಿತು ಎಂಬುದನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು ? ಈಗಿನ ಪ್ರಜಾಪ್ರಭುತ್ವದ ದೇಶವಾದ ಅಮೆರಿಕ ಮಾಡುತ್ತಿರುವುದನ್ನು ನೋಡಿದರೆ ಉತ್ತರ ಸಿಗುತ್ತದೆಯಷ್ಟೆ. ಅಷ್ಟೇಕೆ, ಪರಕೀಯರು ಹೋದ ಮೇಲೆ ಜನರೇ ಆರಿಸಿ ಕಳಿಸಿದ ನಮ್ಮವರು ಜನರ ಪ್ರತಿರೋಧ ಭಿನ್ನಾಭಿಪ್ರಾಯಗಳನ್ನು ಹೇಗೆಲ್ಲಾ ಹೊಸಕಿ ಹಾಕುತ್ತಿದ್ದಾರೆ ಎಂಬುದನ್ನು ಕಣ್ಣಾರೆ ಕಾಣುತ್ತಿರುವವರಿಗೆ, ಕೇವಲ ಚರಿತ್ರೆಯ ಮೇಲೆ ರೇಗುವುದು ಎಂತಹ ಭಯಾನಕ ತಪ್ಪು ಅನಿಸುತ್ತದೆ.

ಕುತೂಹಲ ಹುಟ್ಟಿಸುವುದು ರಾಸಿನ ಚರಿತ್ರೆಯಲ್ಲ, ಅದರ ವರ್ತಮಾನ. ಬ್ರಿಟಿಷರು ಬಿಟ್ಟುಹೋದ ೫೦ ವರುಷಗಳಲ್ಲಿ ರಾಸ್ ಏನಾಗಿದೆ ಎಂಬುದನ್ನು ನೋಡುವುದಕ್ಕಾದರೂ ಅಲ್ಲಿಗೆ ಹೋಗಬೇಕು. ಅದರ ಭಾರಿಭಾರಿ ಕಟ್ಟಡಗಳನ್ನು ಅರಳಿಯೋ, ಆಲದ್ದೋ ಜಾತಿಗೆ ಸೇರಿದ ಮರಗಳು, ಅಕ್ಟೊಪಸ್ ಬಾಹುಗಳಂತಹ ತಮ್ಮ ಬಿಳಲುಗಳಿಂದ ಆಲಿಂಗಿಸಿಕೊಂಡು ಹಿಸುಕಿಹಾಕಿವೆ. ದೈತ್ಯಾಕಾರದ ಕಲ್ಲಿನ ಕಟ್ಟಡಗಳು ಮರದ ಬಾಹುಗಳಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿರುವುದು ಚರಿತ್ರೆಗೆ ನಿಸರ್ಗ ಕೊಟ್ಟ ಉತ್ತರದಂತೆ ಭಾಸವಾಗುತ್ತದೆ. ಕೆಲವು ಕಡೆಯಂತೂ ಇಡೀ ಕಟ್ಟಡ ಕುಸಿದು ನೆಲಕ್ಕೆ ಬಿದ್ದಿದ್ದು, ಮರದ ಕೊಂಬೆಗಳಲ್ಲಿ ಗಾಳಿಪಟ

ಸಿಕ್ಕಿಬಿದ್ದಿರುವಂತೆ ಭಾರಿ ಸೈಜುಗಲ್ಲುಗಳು ಕಬ್ಬಿಣದ ಪಕಾಸುಗಳು ''ಅಲ್ಲಿಯವರೆಗೆ ಕಟ್ಟಡ ಇತ್ತು'' ಎಂಬ ಸಾಕ್ಷಿಯಾಗಿ ಅತಂತ್ರವಾಗಿ ಸಿಲುಕಿಕೊಂಡಿವೆ. ಮರವು ಗಲಗಲ ಎಲೆ ಅಲ್ಲಾಡಿಸಿಕೊಂಡು ನಗುತ್ತ ನಿಂತಿದೆ. ಒಂದು ಕಡೆ ರಾಕ್ಷಸಾಕಾರದ ಕೀಟವೊಂದು ಸತ್ತು ಬಿದ್ದಂತೆ ನೀರು ಕಾಯಿಸುವ ಹಬೆಯಂತ್ರಗಳು ಕಡಲ ಉಪ್ಪುಗಾಳಿಗೆ ಜಂಗು ಹಿಡಿದು ಕರಗುತ್ತಾ ಬಿದ್ದಿವೆ. ಆದರೂ 'ಇಂತಹ ಜನಭರಿತ ದ್ವೀಪವೊಂದು ಹಾಳುಹಂಪೆ ಯಾಯಿತಲ್ಲಾ' ಎಂಬ ಮರುಕ ಬರಲಿಲ್ಲ. ಬದಲಿಗೆ ವಿಚಿತ್ರವಾದ ಖುಶಿಯಾಗುತ್ತಿತ್ತು.

ಆದರೆ ರಾಸ್ ಸುತ್ತಾಟದಲ್ಲಿ ಕಂಡ ಒಂದು ಜಾಗ ಮಾತ್ರ ಇವತ್ತಿಗೂ ಕಾಡುವಂತೆ ಮನಸ್ಸಿನಲ್ಲಿ ಉಳಿದಿದೆ. ಅದೆಂದರೆ ಬ್ರಿಟಿಷರ ಗೋರಿಗಳು. ಬ್ರಿಟಿಷರು ಜಗತ್ತಿನ ಪ್ರಭುಗಳಾಗಿದ್ದರು ನಿಜ. ಆದರೆ ಅವರ ಬಂಧನದಲ್ಲಿದ್ದ ಕೈದಿಗಳನ್ನೂ ಅವರನ್ನೂ ಸಾವು ಭೇದಭಾವವಿಲ್ಲದೆ ತನ್ನ ತಣ್ಣನೆಯ ಕೈಯಿಂದ ಏಕಪ್ರಕಾರವಾಗಿ, ಕಾರ್ಬೈನ್ಸ್ ಕೊಲ್ಲಿಯಲ್ಲಿ ಏಡಿಗಳು ತಯಾರಿಸುತ್ತಿದ್ದ ಮರಳ ಉಂಡೆಗಳನ್ನು ಅಲೆಗಳು ಬಂದು ಸವರಿಹಾಕುತ್ತಿದ್ದಂತೆ, ಸವರಿದೆ ಎಂಬಂತೆ ಆ ಗೋರಿಗಳಿದ್ದವು. ಎಲ್ಲೋ ಹುಟ್ಟಿ ರಾಜ್ಯವಾಳುವ ದುರಾಸೆಗಾಗಿ ಯಾವ ಯಾವುದೋ ದೇಶಗಳಿಗೆ ದ್ವೀಪಗಳಿಗೆ ಬಂದು, ಪಡಬಾರದ ಪಾಡುಪಟ್ಟು ಅಲ್ಲಿನ ಸ್ಥಳೀಕ ಜನರ ನಿಟ್ಟುಸಿರು ಶಾಪ ಹೊತ್ತುಕೊಂಡು, ತಮ್ಮ ಕುಟುಂಬದವರಿಂದ ಅಗಲಿ ಸಾಯುವುದು ಕನಿಕರ ಹುಟ್ಟಿಸುತ್ತದೆ. ಅದರಲ್ಲೂ ಪ್ರಾಯಕ್ಕೆ ಬಂದ ತಮ್ಮ ಮಗಳನ್ನು ಕಳೆದುಕೊಂಡ ತಾಯಿತಂದೆಯರು ಬರೆಸಿ ನೆಟ್ಟಿರುವ ಸಮಾಧಿಶಾಸನದ ಮಾತುಗಳು, ಮನದನ್ನೆಯನ್ನು ಕಳೆದುಕೊಂಡ ಪುರುಷನ ವೇದನೆಯ ನುಡಿಗಳು ಮನಸ್ಸನ್ನು ಕಲಕುವಂತಿವೆ. ನಿಸಾರ್ ಅಹಮದ್ ಅವರು ಇಂತಹ ಆಂಗ್ಲರ ಗೋರಿಗಳನ್ನು ಕುರಿತು ಬರೆದ 'ಅನಾಮಿಕ ಆಂಗ್ಲರು' ಕವಿತೆ ಕೂಡ ಇಂತಹ ವಿಸ್ಮಯ ವಿಷಾದಗಳನ್ನೆ ಉಕ್ಕಿಸುತ್ತದೆ. ಸುಂಯನೆ ಬೀಸುವ ಕಡಲಗಾಳಿಯಲ್ಲಿ, ಕತ್ತಲು ಕವಿಯುವಂತೆ ದಟ್ಟನೆರಳನ್ನು ಚೆಲ್ಲಿ ನಿಗೂಢ ಪರಿಸರವನ್ನು ರಚಿಸಿರುವ ಬೃಹತ್ತಾದ ಮರಗಳ ಅಡಿಯಲ್ಲಿ, ತಣ್ಣಗೆ ಕೊರೆಯುವ ನೆಲದೊಳಗೆ ಮಲಗಿರುವ ಈ ಆಂಗ್ಲರು ಕೂಡ, ಕೇವಲ ಮನುಷ್ಯರು - ಸಾವು ಬಂದಾಗ, ಆದರೆ ಹೀಗೆ ಏನೇ ತಾತ್ವೀಕರಣ ಮಾಡುವಾಗಲೂ ಈ ಮನುಷ್ಯರು ಅಧಿಕಾರಸ್ಥರಾಗಿದ್ದರು ಮತ್ತು ಬೇಕೆಂದೇ ಗುನ್ಹೆಗಳನ್ನು ಮಾಡಿದವರು, ಇದನ್ನು ಮರೆಯುವಂತಿಲ್ಲ. ಅದರಲ್ಲೂ ಅಂಡಮಾನ್ ಜೈಲಿನಲ್ಲಿ ಸಾವಿರಾರು ಜನರನ್ನು ನೇಣುಹಾಕಿದ ಗಲ್ಲಿನ ಮನೆಯನ್ನೂ ಅದರ ಕೆಳಗೆ ದೇಹಗಳು ನೇತಾಡುತ್ತ ತಣ್ಣಗಾಗುವ ಕತ್ತಲ ಭಾಗವನ್ನೂ ನೋಡುವಾಗ, ಅವರ ಕೊನೆ ಉಸಿರು ಸಣ್ಣ ಚೀತ್ಕಾರದಲ್ಲಿ ಹೊರಟ ಸದ್ದು ಈಗ ಕೇಳುತ್ತಿದೆ ಅನಿಸಿ ಬ್ರಿಟಿಷರ ಕ್ರೌರ್ಯ ಮೈ ನಡುಕ ಹುಟ್ಟಿಸುತ್ತದೆ.

ಇದ್ದದ್ದು ಕೆಲವೇ ದಿನಗಳಾದರೂ ಅಂಡಮಾನಿಗೆ ಗಾಯವುಂಟುಮಾಡಿದ ದೇಶಗಳಲ್ಲಿ ಜಪಾನ್ ಕೂಡ ಒಂದು. ಅವರು ಈ ದ್ವೀಪಗಳನ್ನು ಎರಡನೇ ಮಹಾಯುದ್ಧದ ಕಾಲದಲ್ಲಿ ಆಕ್ರಮಿಸಿಕೊಂಡರು. ಹಾಗೂ ಬ್ರಿಟಿಷರಿಗೆ ಸಹಾಯ ಮಾಡುತ್ತಾರೆ ಎಂಬ ಶಂಕೆಯಿಂದ ಅನೇಕ ಜನರನ್ನು, ಅದರಲ್ಲೂ ಇಂಗ್ಲಿಷ್ ಓದು ಬರೆಹ ಬಲ್ಲವರನ್ನು, ಚಿತ್ರಹಿಂಸೆಕೊಟ್ಟು ಕೊಂದುಹಾಕಿದರು. ಈ ಕುರಿತು ವಿವರಗಳನ್ನು ಕಂಡರೆ ಈ ದ್ವೀಪಗಳಲ್ಲಿ ಸುರಿದಿರುವ ರಕ್ತ



*ಮರದ ಬಾಹುಬಂಧನದಲ್ಲಿ ಬ್ರಿಟಿಷರ ಕಛೇರಿ*

ಕಣ್ಣೀರುಗಳು ಸಮುದ್ರದಷ್ಟು, ಇಲ್ಲಿ ದೇಹಗಳಿಂದ ಹಾರಿಹೋದ ಉಸಿರುಗಳು ದೊಡ್ಡ ಚಂಡಮಾರುತವಾಗುವಷ್ಟು ಎಂದು ಅನಿಸುತ್ತದೆ; ಪೋರ್ಟ್ ಬ್ಲೇರ್ ನಗರದ ಸಮುದ್ರದಡದುದ್ದಕ್ಕೂ ಖಾಲಿಬಿದ್ದ ಹಗೇವುಗಳಂತೆ ಜಪಾನಿಯರು ನಿರ್ಮಿಸಿದ ಬಂಕರುಗಳು ಇವೆ.

ಈಗ ಭಾರತದ ಆಧಿಪತ್ಯದಡಿ ಇರುವ ಈ ದ್ವೀಪಗಳಿಗೆ ಬ್ರಿಟಿಷರ, ಜಪಾನಿಯರ ಕಾಲಕ್ಕೆ ಹೋಲಿಸಿದರೆ ನಿಜವಾಗಿಯೂ ಬಂದಿರುವ ಸ್ವಾತಂತ್ರ್ಯ ಎಂತಹುದು ಎಂಬ ಪ್ರಶ್ನೆ ಎದ್ದಿದೆ. ಭಾರತದ ಮೇನ್‌ಲ್ಯಾಂಡಿನಿಂದ ದೂರ ಇರುವುದು ಈ ದ್ವೀಪಗಳ ಭಾಗ್ಯವೋ ಶಾಪವೋ ತಿಳಿಯದಂತಿದೆ. ಇವು ಭಾರತದ ಸಾವಿರಾರು ಜನರಿಗೆ ನೆಲೆಕೊಟ್ಟಿವೆ. ನಾನ್‌ಕೌರಿಯಲ್ಲಿ ನಮ್ಮ ಜತೆ ಬಂದ ಜನರೆ ಇದಕ್ಕೆ ಸಾಕ್ಷಿ. ಅಂಡಮಾನಿಗೆ ಬಂಕರ್ ಕ್ಲಾಸಿನಲ್ಲಿ ಜನರನ್ನು ಒಯ್ಯುವ ಹಡಗುಗಳು ಗೋವಾ ಹಾಗೂ ಧರ್ಮಸ್ಥಳಗಳಿಗೆ ಹೋಗುವ ಕೆ.ಎಸ್.ಆರ್.ಟಿ.ಸಿ. ಬಸ್ಸುಗಳ ಕೆಲಸವನ್ನೇ ಮಾಡುತ್ತಿವೆ ಎನಿಸುತ್ತದೆ. ಮೊದಮೊದಲು ನಾನು ಈ ಎರಡು ಜಾಗಗಳಿಗೆ ಹೋಗುವ ಬಸ್ಸುಗಳು ಭಕ್ತಮಹಾಶಯರನ್ನೂ ಮಸ್ತಿ ಮಾಡಲು ಹೋಗುವ ಪ್ರವಾಸಿಗಳನ್ನೂ ಕರೆದುಕೊಂಡು ಹೋಗುತ್ತವೆ ಎಂದು ತಿಳಿದಿದ್ದೆ. ಆದರಲ್ಲೂ ರೋಣ, ದೇವದುರ್ಗ, ಸುರಪುರ, ಸಿಂದಗಿ, ಯಲಬುರ್ಗ, ಬದಾಮಿ, ಹಡಗಲಿ ಮುಂತಾದ ನೀರಾವರಿ ಇಲ್ಲದ ತಾಲ್ಲೂಕುಗಳಿಂದ ಸಾವಿರಾರು ಜನ ಮಂಗಳೂರು, ಮಡಗಾಂವ್, ವಾಸ್ಕೊ, ಪೂನ ಮುಂತಾದ ಊರುಗಳಿಗೆ ಗುಳೆ ಹೊರಡುತ್ತಾರೆ. ರೋಡಿನ ಕೆಲಸ, ಮನೆ ಕಟ್ಟುವ ಕೆಲಸ ಮಾಡುವುದಕ್ಕೆ, ಅಡಿಕೆ ಕಾಫಿ ತೋಟಗಳಲ್ಲಿ ದುಡಿಯುವುದಕ್ಕೆ ಹೋಗುತ್ತಾರೆ. ನಾನು ತಿಳಿದಂತೆ ಈ ಕೆಲಸಗಳಿಗೆ ವಲಸೆ ಹೋಗುವವರು ಕೂಲಿ ಕೆಲಸ ಮಾಡುವ, ಜಮೀನು ಇಲ್ಲದ, ಕೂಲಿಗಳು ಮಾತ್ರವಲ್ಲ, ಎರಡು ಮೂರು ಎಕರೆ ಜಮೀನು ಇರುವವರೂ ಇದ್ದಾರೆ. ಮಂಗಳೂರಿನ ಹಂಪನಕಟ್ಟೆಯಲ್ಲಿ ಭಾನುವಾರ ಬೆಳಗಿನ ಹೊತ್ತು ಸೇರುವ ಹಳೇಬಟ್ಟೆ ಬಜಾರಿನಲ್ಲಿ ಬಿಜಾಪುರದ ಕಡೆಯ ನೂರಾರು ಜನ ನೋಡಿ ದಂಗಾಗಿ ಹೋದೆ. ಯಾವಾಗಲೂ ಜನ ಬೇರೆ ಊರುಗಳಿಗೆ ಹೋಗುವುದೇ ಮದುವೆಗೆ, ವ್ಯಾಪಾರಕ್ಕೆ, ಜಾತ್ರೆಗೆ; ಆದರೆ ಇಲ್ಲಿ ಕೂಲಿಗಾಗಿ ಹೋಗುತ್ತಿರುವರು. ನಮ್ಮ ಹಳ್ಳಿಗಳ-ಪಟ್ಟಣಗಳ ಆರ್ಥಿಕ ವ್ಯವಸ್ಥೆಯ ಬಗೆಗೆ ಈ ಹಡಗುಗಳು ಹಾಗೂ ಅಂಡಮಾನ್ ದ್ವೀಪಗಳು ಕನ್ನಡಿ ಹಿಡಿದು ಪ್ರತಿಬಿಂಬವನ್ನು ತೋರಿಸುತ್ತ ಇವೆ ಅನಿಸಿತು.

೧೯೪೭ರ ನಂತರ, ಅದರಲ್ಲೂ ೧೯೭೦ರಿಂದ, ಮೇನ್‌ಲ್ಯಾಂಡಿನಿಂದ ವಲಸೆ ನಿರಂತರವಾಗಿ ನಡೆಯುತ್ತಿದೆ. ತಮಿಳರು, ಮಲೆಯಾಳಿಗಳು, ತೆಲುಗರು, ಬಂಗಾಳಿಗಳು, ಬಿಹಾರಿಗಳು, ಒರಿಯಾದವರು, ಬರ್ಮೀಯರು, ಬಾಂಗ್ಲಾದವರು, ಸಿಖ್ಖರು, ಬಲೂಚಿಗಳು - ಏಶಿಯಾದ ಎಷ್ಟೊಂದು ದೇಶದ ಭಾಷೆಯ ಜನಾಂಗಗಳ ಜನ ಇಲ್ಲಿಗೆ ಬಂದಿದ್ದಾರೆ ! ನಾವು ರಂಗತ್‌ನಲ್ಲಿ ಕಂಡ ಊಟದ ಹೋಟೆಲಿನ ಕನ್ನಡಿಗ ''ಬಾಂಬೆ ಬೆಂಗಳೂರು ಅಂತ ಎಲ್ಲೆಲ್ಲೊ ಬಿದ್ದಿದ್ದೆ ಸಾರ್. ಕೊನೆಗೆ ನನಗೆ ಬಾಳು ಕೊಟ್ಟಿದ್ದು ಅಂಡಮಾನ್'' ಎಂದು ಹೇಳಿದ. ಕಾಳಿಘಾಟಿನಲ್ಲಿ ಒಬ್ಬ ತಮಿಳು ಹೆಂಗಸು ಇಡ್ಲಿ ಹೋಟೆಲು ಇಟ್ಟುಕೊಂಡಿದ್ದಳು. ಅವಳು, ಅವಳ ಕುಟುಂಬ ಯಾವಾಗಲೋ ಇಲ್ಲಿಗೆ ಬಂದವರು. ಈಗ ಆ ಕೊಲ್ಲಿಯ ತುದಿಯಲ್ಲಿ ತಮಿಳುನಾಡಿನ ಇಡ್ಲಿಗಳನ್ನು ಬಂಗಾಳಿಗಳಿಗೆ ತಿನ್ನಿಸುತ್ತ ತಾನು ಬಂಗಾಳಿಯಲ್ಲಿ ಮಾತಾಡುತ್ತ ಬದುಕುತ್ತಿದೆ. ನನಗೆ ಸೋಜಿಗವಾಗಿದ್ದು ತಮಿಳರು ಮಾತಾಡುವ ಹಿಂದಿಯನ್ನು ಕೇಳಿ. ತಮಿಳರೆಂದರೆ ಎಲ್ಲಿ ಹೋದರೂ ತಮ್ಮ ಭಾಷೆಯನ್ನು ಬಿಟ್ಟುಕೊಡುವುದಿಲ್ಲ; ಮಾತ್ರವಲ್ಲ, ತಾವು ವಾಸಿಸುವ ಪ್ರದೇಶದ ಭಾಷೆಯನ್ನು ಕಲಿಯುವುದಿಲ್ಲ ಎಂಬ ಪೂರ್ವಗ್ರಹಗಳು ಹೇಗೋ ಕನ್ನಡದಲ್ಲಿ ಆಳವಾಗಿ ಬೇರೂರಿವೆ. ಇದಕ್ಕೆ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಬಿ.ಜಿ.ಎಲ್. ಸ್ವಾಮಿಯವರು ಬರೆದ ತಮಾಷೆಯ ಬರೆಹಗಳ ಪಾಲೂ ಇರಬೇಕು (ಅವರ ತಮಾಷೆ ಜನಾಂಗದ್ವೇಷಿ ವಾಸನೆಯನ್ನುಳ್ಳದ್ದು ಎಂದು ನನಗೆ ಅನಿಸಿದೆ). ಅಂಡಮಾನಿನಲ್ಲಿ ಇಡ್ಲಿ ಚಟ್ನಿಯನ್ನು ಬುಟ್ಟಿಯಲ್ಲಿ ಹೊತ್ತು ಜನರಿದ್ದಲ್ಲೇ ಹೋಗಿ ಮಾರುವ ಎಷ್ಟೋ ತಮಿಳು ಹೆಂಗಸರನ್ನು ಕಾಣಬಹುದು. ಅಂಡಮಾನಿನ ಸಾಕುಶಕ್ತಿಯ ಬಗೆಗೆ ಅಭಿಮಾನ ಮೂಡುತ್ತದೆ.

ಅಂಡಮಾನಿನಲ್ಲಿ ಇರುವ ಈ ಜನರ ಪೂರ್ವಜರು ಒಂದೋ ೧೯೪೭ಕ್ಕೆ ಹಿಂದೆ ಕೈದಿಗಳಾಗಿ, ಕೈದಿಗಳನ್ನು ಕಾಯುವ ಸೈನಿಕರಾಗಿ, ಬಂದವರು. ಕೈದಿಗಳಾಗಿ ಬಂದ ಎಷ್ಟೋ ಜನ ಬಿಡುಗಡೆಯಾದ ಮೇಲೆ ಮರಳಿ ಮನೆಗೆ ಹೋಗಲೇ ಇಲ್ಲ. ಇಲ್ಲೇ ಯಾವುದೋ ಹೆಣ್ಣನ್ನು ಮದುವೆಯಾಗಿ ವ್ಯಾಪಾರ ಸಾಪಾರ ಮಾಡಿಕೊಂಡು ಕಾಡು ಕಡಿದು ಜಮೀನು

ಮಾಡಿಕೊಂಡು ಉಳಿದುಬಿಟ್ಟರು. ಅನಂತರ ಬಂದವರು ಹೆಚ್ಚಾಗಿ ಹೊಸಬಾಳಿನ ಅವಕಾಶ ಹುಡುಕಿಕೊಂಡು ಬಂದವರು. ಸಣ್ಣಪುಟ್ಟ ವ್ಯಾಪಾರಿಗಳು ಕೂಲಿಗಳು ಬೆಸ್ತರು ನೌಕರಿದಾರರು. ಎಲ್ಲರೂ ಸೇರಿ ಅಖಿಲ ಭಾರತೀಯ ಭಾಷಿಕ ಧಾರ್ಮಿಕ ತಳಿ ಇಲ್ಲಿ ನಿರ್ಮಾಣವಾಗಿದೆ. ಬಹುಶಃ ತಮ್ಮ ಅಜ್ಜ ಅಜ್ಜಿಯರೋ ತಾಯಿತಂದೆಯರೋ ಮೂಲದಲ್ಲಿ ಬೇರೆಬೇರೆ ದೇಶದವರು, ರಾಜ್ಯದವರು, ಧರ್ಮದವರು, ಭಾಷೆಯವರು ಎಂದು ಅವರ ಮಕ್ಕಳು ಮೊಮ್ಮಕ್ಕಳು ಹೆಮ್ಮೆಯಿಂದ ಹೇಳಿಕೊಳ್ಳುವ ಸನ್ನಿವೇಶ ಏನಾದರೂ ಇದ್ದರೆ ಅದು ಅಂಡಮಾನಿನಲ್ಲಿ ಇದೆ.

ಅಂಡಮಾನಿಗೆ ಬಂದವರು ಕೇವಲ ಸೈನಿಕರು, ಕೈದಿಗಳು, ನಿರಾಶ್ರಿತರು, ನಿರುದ್ಯೋಗಿಗಳು ಅಲ್ಲ. ನೌಕರಿಗಾಗಿಯೋ ಶಿಕ್ಷೆಯೆಂದೋ ಬಾಳನ್ನು ಅರಸಿಯೋ ಬಂದ ಇವರದು ಒಂದು ಮಾದರಿಯಾದರೆ, ಇನ್ನೊಂದು ಗುಂಪು ಅಧಿಕಾರವನ್ನು , ಬಂಡವಾಳವನ್ನು ಸಾಹಸವನ್ನು ತೆಗೆದುಕೊಂಡು ಬಂದವರದ್ದು. ಇವರು, ಹೇಳಬೇಕೆಂದರೆ, ಬ್ರಿಟಿಷರು ಭಾರತಕ್ಕೆ ಯಾವ ಇರಾದೆಯಿಂದ ಬಂದರೋ ಅಂತಹ ಇರಾದೆಯಿಂದ ಬಂದವರು. ಈ ನವವಸಾಹತುಶಾಹಿಗಳ ಕಣ್ಣಿಗೆ ಸೆಳೆದಿದ್ದು ಅಂಡಮಾನಿನ ಸಮೃದ್ಧ ಕಾಡುಗಳು. ದ್ವೀಪದ ತುಂಬ ಎಷ್ಟೋ ಮರಗಳ್ಳರೂ ಹವಳಗಳ್ಳರೂ ಭಾರತದ ಮಾರುಕಟ್ಟೆಗೆ ಇಲ್ಲಿನ ಅಮೂಲ್ಯ ವಸ್ತುಗಳನ್ನು ರವಾನಿಸಲೆಂದೇ ತುಂಬಿಕೊಂಡಂತೆ ಕಾಣುತ್ತಿತ್ತು. ಇದಕ್ಕೆ ಇಲ್ಲಿನ ಅಧಿಕಾರಿಗಳಲ್ಲಿ ಬಹಳಷ್ಟು ಜನ ಈ ಜಾಲದಲ್ಲಿ ಪಾಲುದಾರರು ಎಂದು ಜನ ಆಡಿಕೊಳ್ಳುವುದನ್ನು ಕೇಳಿದೆವು. ಭಾರತಕ್ಕೆ ಅಂಡಮಾನ್ ಮುದ್ದಿನ ದ್ವೀಪಗಳಾಗಲು ಇದುವೇ ಮುಖ್ಯ ಕಾರಣವಿರಬೇಕು.

ತಮ್ಮ ನಿಸರ್ಗ ಸಂಪತ್ತೇ ತಮಗೆ ಮೃತ್ಯುವಾಗುವ ಈ ಪರಿ ವಿಚಿತ್ರ. ಮರದ ಕಾರ್ಖಾನೆಗಳವರು ಮುಗಿಲಮುತ್ತುವ ಮರಗಳಿರುವ ಹಾಗೂ ಶರಣಾಗತರಾದ ಓಂಗೀ ಜನರಿರುವ ಲಿಟಲ್ ಅಂಡಮಾನಿಗೆ ಹೋಗಿ ಮುಗಿಬೀಳುತ್ತಾರೆ; ಅಗ್ನಿ ಪರ್ವತಗಳಿರುವ ಬ್ಯಾರನ್ ಐಲ್ಯಾಂಡ್‌ಗೆ ಸುಳಿಯುವುದಿಲ್ಲ (ಲಾವಾರಸ ಚಿಮ್ಮಿಸುವ ಕಡಲು ಕೊಪ್ಪರಿಗೆಯಲ್ಲಿ ಬೆಲ್ಲದ ಪಾಕ ಕುದಿಯುವಂತೆ ಕಡಲನ್ನು ತನ್ನ ಕಾವಿನಿಂದ ಕುದಿಸುವ ಈ ದ್ವೀಪಕ್ಕೆ ಹೋಗಲು ಯಾರಿಗೂ ಅನುಮತಿ ಇಲ್ಲ). ಬಹುಶಃ ಬ್ಯಾರನ್ ರೌದ್ರತನದಿಂದಾಗಿಯೇ ಕಾಡುಕಬಳಿಸುವ ಕಂಟ್ರಾಕ್ಟುದಾರರಿಂದ ತನ್ನನ್ನು ಉಳಿಸಿಕೊಂಡಂತಿದೆ. ಒಮ್ಮೆ ಕ್ಯಾದಗೆ ಎಂಬಲ್ಲಿ (ಸಿದ್ದಾಪುರ ತಾಲ್ಲೂಕು) ಕಾಡಲ್ಲಿ ತಿರುಗುವಾಗ ಮರಕ್ಕೆ ಸುತ್ತಿಕೊಂಡ ಒಂದು ಮೆಣಸಿನ ಬಳ್ಳಿ ಕಣ್ಣಿಗೆ ಬಿತ್ತು. ಸಿದ್ದಾಪುರದ ಕಾಡುಗಳು ಎಂದರೆ ಮೆಣಸಿನ ರಾಣಿ ಎಂದು ಹೆಸರಾದ ಗೇರುಸೊಪ್ಪೆಯ ಚೆನ್ನ ಭೈರಾದೇವಿಯ ರಾಜ್ಯಕ್ಕೆ ಸೇರಿದ ಪ್ರದೇಶ. ಕೇರಳವನ್ನೂ ಒಳಗೊಂಡಂತೆ ಇಡೀ ಈ ಪಶ್ಚಿಮ ಘಟ್ಟಗಳ ಮೇಲೆ ಯೂರೋಪು ದೇಶದ ವ್ಯಾಪಾರಿಗಳಿಗೆ ಮಹಾಸೆಳೆತವಿದ್ದುದಕ್ಕೆ ಕಾರಣ, ಇಲ್ಲಿನ ಕಾಡುಗಳಲ್ಲಿ ಬೆಳೆಯುತ್ತಿದ್ದ ಘಮಘಮಿಸುವ ಘಾಟಿನ ಇದೇ ದಾಲ್ಚಿನ್ನಿ, ಮೆಣಸು, ಏಲಕ್ಕಿ, ಲವಂಗಗಳು; ಈ ಸಂಬಾರದ ಪದಾರ್ಥಗಳಿಗಾಗಿ ಯೂರೋಪಿನ ವ್ಯಾಪಾರಿಗಳು ಸಾವಿರಾರು ಮೈಲಿ ಸಮುದ್ರವನ್ನು ದಾಟಿ ಹೊಸಹೊಸ ದಾರಿ ಹುಡುಕಿದರು. ಎರಡು ಕಡಲುಗಳ ನಡುವಿನ ನೆಲವನ್ನು ಕಡಿದು ಹೊಸ ಜಲಮಾರ್ಗವನ್ನು ನಿರ್ಮಿಸಲಾಯಿತು. ವ್ಯಾಪಾರಕ್ಕೆಂದು ಬಂದವರು ತಮ್ಮ ಕೋಠಿಗಳ ರಕ್ಷಣೆಗಾಗಿ ಕೋಟೆಕಟ್ಟಿ ಸೈನ್ಯವಿಟ್ಟುಕೊಂಡು ನಿಧನಿಧಾನವಾಗಿ ಒಂದೊಂದೇ ರಾಜ್ಯವನ್ನು ಹಿಡಿದುಕೊಂಡು, ಕಡೆಗೆ ಇಡೀ ದೇಶವನ್ನು ೨೦೦ ವರ್ಷ ದಾಸ್ಯಕ್ಕೆ ಇಳಿಸಿ ಆಳಿದರು. ಅವರು ಹೋದ ಬಳಿಕವೂ ಇಂಗ್ಲಿಷ್‌ನಲ್ಲಿ ಫೇಲಾಗುವ ಒಬ್ಬ ವಿದ್ಯಾರ್ಥಿಯ ಅಪಮಾನದ ಹಿಂದೆ ಈ ಎಲ್ಲ ಚರಿತ್ರೆಯ ಭಾರ ನಿಂತಿದೆ. ಈ ಚರಿತ್ರೆಗೆ ತಾನೂ ಒಂದು ಕಾರಣವಾದ ಮೆಣಸಿನಬಳ್ಳಿ ಇದೇ ಏನು? - ಹೀಗೆ ಚರಿತ್ರೆಯ ಎಲ್ಲ ಹೊರೆಯನ್ನು ಅಮಾಯಕವಾದ ಒಂದು ಬಳ್ಳಿಯ ಮೇಲೆ ಹಾಕಿ ನಾನು ಕಲ್ಪನಾ ಲಹರಿಯಲ್ಲಿ ಮುಳುಗಿ ನಿಂತಿದ್ದೆ. ಅಂಡಮಾನಿನ ಮೇಲೆ ಬಲವುಳ್ಳವರು ಹಾಕುತ್ತ ಬಂದಿರುವ ಒತ್ತಡಗಳಿಗೆ ಕಾರಣವನ್ನು ಅದರ ಕಾಡಿನ ಮೇಲೆ ಹಾಕಬೇಕಾಗಿಲ್ಲ.

ಕಾಡು ಯಾರಿಗೂ ಉಪಯೋಗವಾಗದೆ ಅದು ಇದ್ದಂತೆ ಇರಬೇಕು ಎಂದು ಕೆಲವು ಪರಿಸರವಾದಿಗಳು ಭಾವಿಸುತ್ತಾರೆ. ಕಾಡಾಗಲಿ ನೆಲವಾಗಲಿ ಜನವಾಗಲಿ ಎಲ್ಲ ಜೀವಜಂತುಗಳಿಗೆ (ಅದರಲ್ಲಿ ಮಾನವರೂ ಇದ್ದಾರೆ) ಉಪಯೋಗವಾಗಬೇಕು. ಆದರೆ ಅದು ಕೇವಲ ಮಾನವರಿಗೆ ಮಾತ್ರ ಬಳಕೆಯಾಗುವಂತಹುದು ಎಂಬ ಮಾನವ ಕೇಂದ್ರಿತ ನಿಲುವಿನಿಂದ ಇತರೆ ಜೀವಿಗಳ ಹಕ್ಕು ಕಿತ್ತುಹಾಕಲಾಗಿದೆ ಎಂಬುದು ಪರಿಸರವಾದಿಗಳ ತಕರಾರು. ಇವರು ಸಾಮಾನ್ಯವಾಗಿ ಕೈಬಿಡುವ ಇನ್ನೊಂದು ಪ್ರಶ್ನೆಯೆಂದರೆ ಅದು ಯಾವ ಮಾನವರಿಗೆ ಮತ್ತು ಹೇಗೆ ಎಷ್ಟು ಉಪಯೋಗವಾಗಬೇಕು ಎನ್ನುವುದು. ಯಾಕೆಂದರೆ



*ರಾಸ್ ದ್ವೀಪದ ಒಂದು ಕಟ್ಟಡ*

ಯಾರೋ ನಾಲ್ಕು ಜನ ಬಲವುಳ್ಳವರು ಇಡೀ ಸಮುದಾಯಕ್ಕೆ ಸೇರಿದ ನಿಸರ್ಗ ಸಂಪತ್ತಿಗೆ ಖಬ್ಜಾ ಮಾಡಿದಾಗ ''ಮಾನವನ ನಿಸರ್ಗದ ಮೇಲೆ ಮಾಡುವ ಅತ್ಯಾಚಾರ'' ಎಂದು ಇಡೀ ಅಪರಾಧವನ್ನು ಸಮಸ್ತ ಮಾನವನು ಕುಲಕ್ಕೆ ಹಂಚುವಂತೆ ಚಿಂತನೆ ಮಾಡುವ ರೂಢಿ ತುಂಬ ಜನಪ್ರಿಯವಾಗಿದೆ. ವಾಚಕರ ವಾಣಿ ಪತ್ರ ಬರೆಯುವ ಕೆಲವರು ಭಾವುಕವಾಗಿ ಸರಳೀಕರಿಸಿ ಬರೆಯುವ ಧಾಟಿಯಲ್ಲೇ ಹೆಚ್ಚಿನ ಪರಿಸರವಾದಿಗಳು ಆಲೋಚಿಸುತ್ತಾರೆ. ಪ್ರಕೃತಿ ಮೇಲೆ ಅಮೆರಿಕ ಮಾಡುವ ಅತ್ಯಾಚಾರವನ್ನು ಬಾಂಗ್ಲಾ ಸಿಲೋನ್ ದೇಶಗಳಾದರೂ ಯಾಕೆ ಹೊರಬೇಕು? ಕೆಲವು ಕಂಪೆನಿಗಳು ಜಂಬುನಾಥ ಬೆಟ್ಟವನ್ನು ಅಗೆದು ಊರಿಗೆಲ್ಲ ಧೂಳನ್ನು ಹಂಚಿ ಅದಿರನ್ನು ವಿದೇಶಗಳಿಗೆ ಕಳಿಸುವ ಊರಲ್ಲಿರುವ ನನಗೆ, ನಮ್ಮೂರಲ್ಲಿ ನದಿಯಿದೆ ಬೆಟ್ಟವಿದೆ ಎಂದು ಯಾಕಾದರೂ ಹೇಳಿಕೊಳ್ಳಬೇಕು? ಹಂಪೆಯ ವಿರೂಪಾಕ್ಷ ಸಮುದಾಯಕ್ಕೆಲ್ಲ ದೈವವಾಗಿರುವಂತೆ ಜಂಬುನಾಥ ಬೆಟ್ಟದ ಕಬ್ಬಿಣದ ಅದಿರು ಬಳಕೆಯಾಗುತ್ತಿದೆಯೇ? ಸಮುದಾಯಕ್ಕೆ ಹಂಚುವಂತೆ ಬಳಕೆಯಾಗುವುದು ಹಾಗೂ ಕೆಲವೇ ಜನ ವಶಪಡಿಸಿಕೊಳ್ಳುವುದು ಬೇರೆ. ಬ್ರಿಟಿಷರಿಗೆ ಬೈಯುತ್ತ ಇರುವುದರಲ್ಲಿ ಅರ್ಥವಿಲ್ಲ. ಕತ್ತಿ ಯಾರದಾದರೇನು?

ಅಂಡಮಾನಿನ ಕಾಡುಗಳು ಹಾಗೂ ಅಲ್ಲಿನ ಬುಡಕಟ್ಟುಗಳ ಅವಸ್ಥೆ ಕಂಡರೆ ತಟ್ಟನೆ ನೆನಪಿಗೆ ಬರುವುದು ನಮ್ಮ ಉತ್ತರ ಕನ್ನಡ ಜಿಲ್ಲೆಯ ಕಾಡು ನದಿಗಳು ಹಾಗೂ ಗೊಂಡರು, ಸಿದ್ದಿಗಳು, ಹಾಲಕ್ಕಿಯವರು; ಯಲ್ಲಾಪುರದ ಕಾಡುಗಳಲ್ಲಿರುವ ಸಿದ್ದಿಗಳು ಕಂಡಾಗಲಂತೂ ಅರಬ್ಬರೂ ಯೂರೋಪಿಯನ್ನರೂ ಒಂದು ಸಮುದಾಯವನ್ನೇ ಅದರ ತಾಯ್ನೆಲದಿಂದ ಮೂಲೋತ್ಪಾಟನೆ ಮಾಡಿದ ಚರಿತ್ರೆ ಕಣ್ಣೆದುರಿಗೆ ಸುಳಿಯುತ್ತದೆ. ಯಾರಿಗೆ ಗೊತ್ತು ಅಂಡಮಾನಿನ ಜರವಾಗಳೂ ಸೆಂಟನಲೀನರೂ ಈ ಸಿದ್ದಿಗಳ ಪೂರ್ವಜರೂ ಒಂದೇ ಊರಿನವರು ಇರಬಹುದು. ಪ್ರಶ್ನೆಯೆಂದರೆ ಸಿದ್ದಿಗಳು ಯೂರೋಪಿಯನ್ನರಿಲ್ಲದ ಈ ಹೊತ್ತಲ್ಲಿ ಸುಖವಾಗಿ ಇದ್ದಾರೆಯೇ ಇಲ್ಲವೇ ಎಂಬುದು. ಯಲ್ಲಾಪುರದ ಸುತ್ತ ಮುತ್ತ ಕಾಣುವ ಸಿದ್ದಿಗಳನ್ನು ಕಂಡರೆ ಸುಖವಾಗಿದ್ದಾರೆ ಎಂದು ಅನಿಸುವುದಿಲ್ಲ. ಹಾಗಾದರೆ ಚರಿತ್ರೆಯನ್ನು ದೂಷಿಸುವ ನೈತಿಕ ಹಕ್ಕು ಎಲ್ಲಿದೆ ?

ಇಲ್ಲಿಂದ ಮೊದಮೊದಲು ಮರವು ಕಚ್ಚಾ ವಸ್ತುವಾಗಿ ಹೋಗುತ್ತಿತ್ತು. ಈಗ ಸಿದ್ಧವಾಗಿಯೇ ಹೋಗುತ್ತದೆ. ಈ ವಸ್ತುಗಳಿಗೆ ಸಾವಿರಾರು ಮೈಲಿ ದೂರದ ಭಾರತದಲ್ಲಿ ಬಳಕೆದಾರರು ಕಾದಿರುತ್ತಾರೆ. ಇಲ್ಲಿನ ಕಾರ್ಗೊ ಹಡಗುಗಳಿಗೆ ಮುಖ್ಯ ಸರಕು ಇದೇ ಎಂದು ತೋರುತ್ತದೆ. ಪೊಡಾಕ್ ಮರವು ಇಲ್ಲಿನ ಹಸಿರು ಚಿನ್ನ; ಅಂಡಮಾನಿನಲ್ಲಿ ಇರುವ ಏಕೈಕ ಕೈಗಾರಿಕೆ ಎಂದರೆ ಫಾರೆಸ್ಟ್ ಇಂಡಸ್ಟ್ರಿ. ಇಲ್ಲಿನ ಪಾಲಿವುಡ್ ಕಾರ್ಖಾನೆಗಳು ಚತ್ತಾಂನಲ್ಲಿ ಸರ್ಕಾರವೇ ಸ್ಥಾಪಿಸಿರುವ ಮರದ ಕಾರಖಾನೆ ಇದ್ದರೆ ಲಿಟಲ್ ಅಂಡಮಾನಿನಲ್ಲಿ ಖಾಸಗಿ ಮರದ ಉದ್ಯಮಗಳಿವೆ. ಹಡಗಿನಲ್ಲಿ ನಾವು ಭೇಟಿಯಾದ ಧಾರವಾಡದ ಮಿತ್ರರು ಕೆಲಸ ಮಾಡುತ್ತಿದ್ದ ಕಾರಖಾನೆ ಅದು. ಅಲ್ಲಿಗೆ ಕಡೆಗೂ ಹೋಗಲು ನಮಗಾಗಲಿಲ್ಲ. ಅಂಡಮಾನ್ ದ್ವೀಪಗಳಲ್ಲಿ ಬಳಸಿ ಮರದ ದಿಮ್ಮಿಗಳನ್ನು ಹತ್ತಿರದ ಕಡಲಿಗೆ ತಂದು ಉರುಳಿಸುವ ಕೆಲಸಕ್ಕಾಗಿ ಆನೆಗಳನ್ನು ಬಳಸುವ ಬಗೆಗೆ ಒಂದು ಡಾಕ್ಯುಮೆಂಟರಿಯನ್ನು ನೋಡಿದೆ. ನ್ಯಾಶನಲ್ ಜಿಯೋಗ್ರಾಫಿಕ್ ಸಂಸ್ಥೆ ತಯಾರಿಸಿದ 'ಈಜುವ ಆನೆಗಳು' ಎಂಬ ಹೆಸರಿನ ಈ ಚಿತ್ರದಲ್ಲಿ

ಮರಕಡಿದು ಸಾಗಿಸುವ ಉದ್ಯಮದವರು ದ್ವೀಪದಿಂದ ದ್ವೀಪಕ್ಕೆ ಆನೆಗಳನ್ನು ಈಜಿಸಿ ಕರೆದೊಯ್ಯುವ ದೃಶ್ಯಗಳಿದ್ದವು. ಆನೆಗಳಿಗೆ ನೀರೆಂದರೆ ಆನಂದವಾಗುತ್ತದೆ ನಿಜ. ಆದರೆ ಇಲ್ಲಿ ಆನೆಗಳನ್ನು ಬಹಳ ಬಲಾತ್ಕಾರಪಡಿಸಿ ಈಜಿಸಲಾಗುತ್ತದೆ ಎಂದು ಅನಿಸಿತು. ಅದರಲ್ಲೂ ತಾಯಿಯನ್ನು ಹಿಂಬಾಲಿಸಲಾಗದ ಒಂದು ಪುಟಾಣಿ ಆನೆ ಮ್ಯಾಂಗ್ರೋವ್ ಹಳುವಿನಲ್ಲಿ ಸಿಕ್ಕು ಹೊರಬರಲಾರದೆ ಮಾಡಿದ ಒದ್ದಾಟ ದೂರದಲ್ಲಿದ್ದ ತಾಯಿ ಮಾಡಿದ ಆಕ್ರಂದನ ಭೀಷಣವಾಗಿತ್ತು.

ಅಂಡಮಾನ್ ನಿಕೋಬಾರ್ ಜನ ಬಹಳ ವಿಷಯಗಳಿಗೆ ಭಾರತ ಮೇನ್‌ಲ್ಯಾಂಡಿನ ಹಂಗಿನ ಒಳಗೇ ಬದುಕಬೇಕಿದೆ. ಟೊಮ್ಯಾಟೊ ಹಣ್ಣು ಕೊತ್ತಂಬರಿ ಸೊಪ್ಪಿಗಾಗಿ ಕೂಡ ಅವರು ಮದರಾಸು ಕಲ್ಕತ್ತ ಕಡೆಯಿಂದ ಬರುವ ಹಡಗುಗಳ ದಾರಿಯನ್ನು ಕಾಯುತ್ತಾರೆ. ಸೋರೆಕಾಯಿ, ಪಡುವಲಕಾಯಿ ಬೆಳೆದಿದ್ದ ಹಿತ್ತಲುಗಳು ಇದ್ದವು. ಅಡಿಕೆ, ತೆಂಗು, ಬಾಳೆಗಳೂ ಇದ್ದವು. ಕೋಣಗಳಿಗೆ ನೇಗಿಲು ಕಟ್ಟಿ ಉಳುವ ಏಕೈಕ ದೃಶ್ಯವನ್ನು ಬಾರಾಟಾಂಗಿನಲ್ಲಿ ಕಂಡಿದ್ದು ಬಿಟ್ಟರೆ ಅಲ್ಲಿ ಬೇಸಾಯ ಮಾಡುವುದು ಕಡಿಮೆ ನೋಡಿದೆವು. ಆಲೂಗೆಡ್ಡೆ - ಮರಳುಗಾಡಿನ ಒಂಟೆಯಂತೆ - ಅಂಡಮಾನಿನಲ್ಲಿ ಸಿಗುವ ಏಕೈಕ ಅನಿವಾರ್ಯ ತರಕಾರಿ. ಸಾರು, ಪಲ್ಯ, ಸ್ನ್ಯಾಕ್ಸು ಎಲ್ಲ ಪದಾರ್ಥಗಳಲ್ಲಿ ಅದರ ಅಸ್ತಿತ್ವವಿತ್ತು. ಬಲವುಳ್ಳವರು ಬದುಕುತ್ತಾರೆ ಎಂಬ ತತ್ವಕ್ಕೆ ಹೇಳಿ ಮಾಡಿಸಿದ ಉದಾಹರಣೆಯಂತೆ. ಹಡಗಿನ ಪ್ರಯಾಣದಲ್ಲಿ, ಹಮಾಲಿಗಳ ಕ್ರೇನುಗಳ ಎತ್ತಾಟದಲ್ಲಿ ಏನೂ ಆಗದೆ ಸಾವಿರಾರು ಮೈಲಿ ಪಯಣಿಸುವ ಭಂಡತನವೇ ಅದರ ಸಾರ್ವಭೌಮತೆಗೆ ಕಾರಣ. ಹಾಗೇ ಟೊಮ್ಯಾಟೊ ಈ ಬಗೆಯ ಟ್ರೀಟ್‌ಮೆಂಟಿನಲ್ಲಿ ಹೋಗಲಾರದು. ಹೀಗಾಗಿ ಅದಕ್ಕೆ ಚಿನ್ನದ ಬೆಲೆ. ಕೊತ್ತಂಬರಿ ಸೊಪ್ಪು ಕೂಡ ಇಲ್ಲಿ ಸಿರಿವಂತರ ಭೋಗವಿಲಾಸದ ವಸ್ತು. ಇಲ್ಲಿ ಹೊರಗಿನಿಂದ ಬಾರದ ವಸ್ತು ಎಂದರೆ ಬಾಳೆಹಣ್ಣು. ಅದು ಕಾಸಿಗೆ ಕೊಸರಿಗೆ ಸಿಗುತ್ತಿತ್ತು. ಒಂದು ಸಲ ನಮ್ಮ ಬಸ್ಸು ಬಾರಾಟಾಂಗಿನ ಕೊಲ್ಲಿಯಲ್ಲಿ ತನ್ನನ್ನು ಹೊತ್ತು ದಾಟಿಸುವ ಹಡಗಿಗಾಗಿ, ಬಾರ್ಜಿಗಾಗಿ, ಕಾಯುತ್ತಿರುವಾಗ ನಾನು ಇಳಿದು ಬಾಳೆಹಣ್ಣು ಮಾರುತ್ತಿರುವವನ ಬಳಿಗೆ ಹೋಗಿ ಎರಡು ರೂಪಾಯಿಯ ಹಣ್ಣು ಕೊಡು ಎಂದೆ; ಅವನು ಚೀನಿ ಕೇಲಾ ಎಂದು ಕರೆಯಲಾಗುವ ರಸಭರಿತ ಬಾಳೆಹಣ್ಣನ್ನು ಎರಡು ಚಿಪ್ಪು ತೆಗೆದುಕೊಟ್ಟನು. ಅವನ್ನು ಖಾಲಿ ಮಾಡಬೇಕಾದರೆ ನಾವು ಬಸ್ಸಿನಲ್ಲೆಲ್ಲ ಹಂಚಬೇಕಾಯಿತು. (ಇಲ್ಲಿ ನಾವು ತಿನ್ನಲು ಹೆದರಿದ ಒಂದು ಜಾತಿಯೆಂದರೆ ರಾಜಾ ಕೇಲಾ ಎಂಬ ಹೆಸರಿನ ಬಾಳೆಹಣ್ಣು. ಇದನ್ನು ತಿಂದವರು ಐದಾರು ದಿನ ಊಟ ಮಾಡಬೇಕಾಗಿಲ್ಲ ಅನಿಸುತ್ತದೆ. ಬಯಲಾಟಗಳಲ್ಲಿ ರಾಕ್ಷಸಿಯ ಪಾತ್ರಗಳು ಕಟ್ಟಿಕೊಳ್ಳುವ ಮೊಲೆಗಳಂತೆ ಇದ್ದ ಅವನ್ನು ತಿನ್ನುವ ಸಾಹಸ ನಾವು ಮಾಡಲಿಲ್ಲ). ನಾವು ಹೋದ ಕಾಲದಲ್ಲಿ ಬಿರುಗಾಳಿ ಬೀಸಿ ಬಾಳೆಗಿಡವೆಲ್ಲ ಮುರಿದಿದ್ದರಿಂದ ಬಲಿತ ಎಳತ ಗೊನೆಗಳೆಲ್ಲ ದ್ವೀಪಗಳಿಂದ ಪೋರ್ಟ್ ಬ್ಲೇರ್ ಪೇಟೆಗೆ ಬಂದಿದ್ದವು. ಅವನ್ನು ಕೇಳುವವರೇ ಇರಲಿಲ್ಲ. ತಾವು ಬೆಳೆದ ಬೆಳೆಗೆ, ಹಿಡಿದ ಮೀನಿಗೆ, ಸರಿಯಾದ ಮಾರುಕಟ್ಟೆಯಿಲ್ಲದಿರುವುದು, ತಮ್ಮ ಕಾಡುಗಳನ್ನು ಕಡಿದು ಸಾಗಿಸುತ್ತಿರುವುದು, ತಮ್ಮನ್ನು ಆಳಲು ಅಧಿಕಾರಸ್ಥರು ಮೇನ್‌ಲ್ಯಾಂಡಿನಿಂದ ಬರುವುದು - ಇದರ ಬಗ್ಗೆ ಅಂಡಮಾನಿನ ಜನರಲ್ಲಿ ಯಾವ ಬಗೆಯ ನಿರ್ಲಿಪ್ತತೆ ಕೋಪ ಅಸಹಾಯಕತೆಗಳಿವೆಯೋ ತಿಳಿಯುವ ಅವಕಾಶ ಸಿಗಲಿಲ್ಲ. ಆದರೆ ಅದು ಕೇಂದ್ರಾಡಳಿತ ಪ್ರದೇಶವಾಗಿರುವುದರಿಂದ ಅನೇಕ ವಸ್ತುಗಳಿಗೆ ಸಬ್ಸಿಡಿಯಿದೆ. ಡೀಸೆಲ್, ಫೋನು ಇತ್ಯಾದಿ ಕೊಂಚ ಅಗ್ಗ. ಇಷ್ಟು ಬಿಟ್ಟರೆ ತಮ್ಮ ಪಾರ್ಲಿಮೆಂಟ್ ಸದಸ್ಯನ ಬಗ್ಗೆ ಮಾತ್ರ ತುಂಬ ಅಸಮಾಧಾನವಿತ್ತು (೧೯೪೭ರಿಂದಲೂ ಕಾಂಗ್ರೆಸ್ಸಿಗೆ ಹೋಗುತ್ತಿದ್ದ ಈ ಸೀಟನ್ನು ಈ ಸಲ ಬಿಜೆಪಿ ಗೆದ್ದಿದೆ). ಅಂಡಮಾನಿನ ಜನರ ವಿಭಿನ್ನ ಮೂಲಗಳು, ಹೊಸಹೊಸ ವಲಸೆಗಳು, ಕಡಿದುಬಿದ್ದ ಮಾಲೆಯಂತಿರುವ ಹಲವು ದ್ವೀಪಗಳಲ್ಲಿ ಜನ ಚೆಲ್ಲಿಹೋಗಿರುವುದು, ರಾಜಕೀಯ ಪ್ರಜ್ಞೆ ಬೆಳೆಸುವ ಸಂಘಟನೆಗಳಿಲ್ಲದಿರುವುದು - ಮೇನ್‌ಲ್ಯಾಂಡಿನವರ ದೋಚುವಿಕೆಯನ್ನು ನಿರಾತಂಕ ಮಾಡಿದಂತಿದೆ. ಮೇನ್‌ಲ್ಯಾಂಡಾದರೂ ಈ ದ್ವೀಪಗಳನ್ನು ಹೇಗೆ ಸುತ್ತಿಕೊಂಡಿದೆಯೆಂದರೆ, ಬಹುಶಃ ಜನ ದಂಗೆಯೇಳುವ ಪ್ರಮೇಯವೇ ಇಲ್ಲ. ಆದರೆ ಎಂದಾದರೂ ಒಂದು ದಿನ ಅಂಡಮಾನಿನ ಜನ ಎಚ್ಚೆತ್ತು ತಮ್ಮ ಲೆಕ್ಕಾಚಾರವನ್ನು ಚುಕ್ತಮಾಡಿ ಎಂದು ಕೇಳಬಹುದು, ಗೊತ್ತಿಲ್ಲ.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಜಾತಿ ಮತ್ತು ಜನಗಣತಿ

ಪ್ರೊ|| ಎನ್. ಜಯರಾಮ್

*ಇದೇ ಜುಲೈ ಕಡೆಯ ವಾರದಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ "೨೦೦೧ರ ಜನಗಣತಿಯಲ್ಲಿ ಜಾತಿವಾರು ಗಣನೆ" ಎಂಬ ವಿಷಯವನ್ನು ಕುರಿತಂತೆ ರಾಷ್ಟ್ರೀಯ ವಿಚಾರ ಸಂಕಿರಣ ನಡೆಯಿತು. ಆಯೋಜಿಸಿದವರು ಮದ್ರಾಸಿನ ಅಭಿವೃದ್ಧಿ ಅಧ್ಯಯನ ಕೇಂದ್ರ ಮುಂತಾದ ಸಂಸ್ಥೆಗಳು. ಪ್ರಸ್ತುತ ಈ ವಿಷಯವು ವಿಶೇಷವಾಗಿ ಚರ್ಚೆಗೆ ಬರುತ್ತಿದೆ. ಸಂಕಿರಣದಲ್ಲಿ ಡಾ|| ಜಯರಾಂ ಅವರು ಮಂಡಿಸಿದ ಪ್ರಬಂಧ ಇದು. "ಕ್ಯಾಸ್ಟ್" ಎಂಬುದನ್ನು "ಜಾತಿ" ಎಂದು ಭಾಷಾಂತರಿಸಿದಾಗ ಅದರ ಸಂಪೂರ್ಣ ಆಯಾಮವು ವೇದ್ಯವಾಗುವುದಿಲ್ಲವೆಂದು ಭಾವಿಸುವ ಲೇಖಕರು 'ಜಾತಿ' ಎಂಬೆಡೆಗಳಲ್ಲೆಲ್ಲಾ ಅದನ್ನು "ಕ್ಯಾಸ್ಟ್" ಎಂದೇ ಪರಿಭಾವಿಸಬೇಕಾಗಿ ಸೂಚಿಸಿದ್ದಾರೆ.*

ಭಾರತ ಜನಗಣತಿಯನ್ನು ಬರುವ ವರ್ಷದ ಮಾರ್ಚ್ ೧ರಂದು ಸಂಗ್ರಹಿಸಲಾಗುತ್ತದೆ. ಮೊಟ್ಟ ಮೊದಲು ಜನಗಣತಿ ಜರುಗಿದ್ದು ೧೮೭೨ರಲ್ಲಿ. ಹದಿನಾಲ್ಕನೆಯ ಬಾರಿಗೆ ಜರುಗಲಿರುವ ಈ ಪ್ರಕ್ರಿಯೆ ರಾಷ್ಟ್ರದ ಮಾಜಿ ರಿಜಿಸ್ಟ್ರಾರ್ ಜನರಲ್ ಮತ್ತು ಜನಗಣತಿ ಕಮಿಷನರ್ (ಕಚೇರಿ ದೆಹಲಿಯಲ್ಲಿ) ಆದ ಶ್ರೀ ವಿಜಯ ಉಣ್ಣಿ ಅವರು ಹೇಳಿರುವಂತೆ ಈ ಸಹಸ್ರಮಾನದ ಜನಗಣತಿ ಆಗಲಿದೆ. ಇದರಿಂದ ದೊರಕಲಿರುವ ಅಂಕಿ ಅಂಶಗಳು ರಾಷ್ಟ್ರದ ಆರ್ಥಿಕ ಪರಿಸ್ಥಿತಿ ಮತ್ತು ಜನಸಂಖ್ಯೆಯನ್ನು ಕುರಿತ ವಿವರಗಳನ್ನು ಒದಗಿಸುವುದಲ್ಲದೆ ಇಂದಿನ ಸಮಕಾಲೀನ ಸಮುದಾಯವು ಯಾವ ದಿಕ್ಕಿನತ್ತ ಸಾಗುತ್ತಿದೆ ಎಂಬುದರ ಬಗ್ಗೆ ಬೆಳಕು ಚೆಲ್ಲಬಹುದೆಂದು ನಿರೀಕ್ಷಿಸಬಹುದಾಗಿದೆ. ಅಲ್ಲದೆ, ಭಾರತದಲ್ಲಿ ಅನಾದಿಕಾಲದಿಂದಲೂ ಉಳಿದುಕೊಂಡೇ ಬಂದಿರುವ ಮತ್ತು ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಹೆಣೆದುಕೊಂಡಿರುವ ಜಾತಿ ಪದ್ಧತಿಯನ್ನು ಈ ಪ್ರಕ್ರಿಯೆ ಯಾವ ರೀತಿ ಬಿಂಬಿಸುತ್ತದೆ ಎಂಬುದನ್ನು ಕಾದುನೋಡಬೇಕಾಗಿದೆ.

೧೯೬೧ರಿಂದ ಜರುಗಿದ ಎಲ್ಲಾ ಜನಗಣತಿಗಳೂ ಜಾತಿಯ ಅಂಶವನ್ನು ಗಣನೆಗೆ ತೆಗೆದುಕೊಳ್ಳದೆ ಇರುವುದು ಗಮನಿಸಬೇಕಾದ ವಿಷಯ. ೨೦೦೧ರ ಜನಗಣತಿಯ ಸಂಬಂಧದಲ್ಲಿ ಜಾತಿ ಮತ್ತೊಮ್ಮೆ ಒಂದು ಮುಖ್ಯವಾದ ಅಂಶವಾಗಬೇಕೆ, ಬೇಡವೇ ಎನ್ನುವುದರ ಬಗ್ಗೆ ಸಮಾಜ ಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು ಅಷ್ಟು ಗಂಭೀರವಾಗಿ ಪರಿಗಣಿಸಿದಂತೆ ಕಾಣುವುದಿಲ್ಲ. ಇತ್ತೀಚೆಗೆ, ಸರಕಾರಿ ವಕ್ತಾರರೊಬ್ಬರು, ಜಾತಿ ಈ ಸಂದರ್ಭದಲ್ಲಿ ತನ್ನ ಪ್ರಾಮುಖ್ಯತೆಯನ್ನು ಮತ್ತೊಮ್ಮೆ ಪಡೆಯಬೇಕಾಗಿದೆ ಎನ್ನುವ ವಾದ ಮುಂದಿಟ್ಟಿದ್ದಾರೆ. ಜನಗಣತಿ ಕಮಿಷನರ್ ಅವರೂ ಇದಕ್ಕೆ ದನಿಗೂಡಿಸಿರುವುದು ಅನೇಕ ಪ್ರಶ್ನೆಗಳ ಸುರಿಮಳೆಗೆ ಎಡೆಮಾಡಿಕೊಟ್ಟಿದೆ.

ಆದರೆ, ಕೇಂದ್ರ ಸರಕಾರ ಈ ಸಲಹೆಗೆ ಯಾವ ರೀತಿಯ ಬೆಂಬಲವನ್ನೂ ಸೂಚಿಸಿಲ್ಲ. ಪರಿಣಾಮವಾಗಿ ಯಾವ ರೀತಿಯ ವಾದವಿವಾದಗಳಿಗೂ ಆಸ್ಪದವಿಲ್ಲವಾಗಿದೆ. ಅದೇನೇ ಇರಲಿ, ಜಾತಿಯ ಅಂಶವನ್ನು ಅಷ್ಟು ಸುಲಭವಾಗಿ ತಳ್ಳಿಹಾಕಲು ಸಾಧ್ಯವೇ ಎನ್ನುವುದು ನನ್ನ ಪ್ರಶ್ನೆ. ಎಷ್ಟೇ ವಿವಾದಾತ್ಮಕವಾದರೂ ಈ ಬಗ್ಗೆ ಆಳವಾದ ಅಧ್ಯಯನ ಮತ್ತು ಚರ್ಚೆಗಳ ಅಗತ್ಯವಿದೆ.

**ಜನಗಣತಿಯಲ್ಲಿ ಜಾತಿಯ ಪ್ರಶ್ನೆ - ಒಂದು ಸಂಕ್ಷಿಪ್ತ ಅವಲೋಕನ**

ಈ ಜಾತಿ ಪದ್ಧತಿ ಅಂದಿನ ಬ್ರಿಟಿಷ್ ವಸಾಹತುಶಾಹಿ ಅಧಿಕಾರಿಗಳಿಗೆ, ಪಂಡಿತರುಗಳಿಗೆ ಬಹಳ ಅತಿಶಯವೆನಿಸಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಭಾರತೀಯ ಸಮಾಜ ವ್ಯವಸ್ಥೆ ಮತ್ತು ಸಂಸ್ಕೃತಿಯನ್ನು ಅರ್ಥೈಸುವುದಕ್ಕೆ ಇದು ಸಹಾಯಕವಾಗುತ್ತದೆಂಬುದು ಅವರ ನೆಚ್ಚಿನ ನಂಬಿಕೆಯಾಗಿತ್ತು. ಅಂದಿನ ಜನಗಣತಿ ಕಮಿಷನರುಗಳಾಗಿದ್ದ ಹರ್ಬರ್ಟ್ ರಿಸ್ಲಿ, ಓಮ್ಯಾಲೆ, ಹಟನ್ ಇವರುಗಳು ಜಾತಿ ಪದ್ಧತಿಯನ್ನು ಆಳವಾಗಿ ಅಧ್ಯಯನ ಮಾಡಿ ಅದರ ಬಗ್ಗೆ ವಿಪುಲವಾಗಿ ಬರೆದಿದ್ದಾರೆ. ಈವರೆಗೆ ಜರುಗಿರುವ ಜನಗಣತಿಗಳೇ ಅಲ್ಲದೆ ಸಮಕಾಲೀನ ಚಿಂತನೆಗಳ ಮೇಲೂ ಅವರ ಬರಹಗಳು, ಅಭಿಪ್ರಾಯಗಳು ತಮ್ಮ ಪ್ರಭಾವವನ್ನು ಬೀರಿವೆಯೆಂದರೆ ಅತಿಶಯೋಕ್ತಿಯೇನಲ್ಲ.

೧೮೭೨ರಿಂದ ೧೯೩೧ರವರೆಗೆ ಸಂಗ್ರಹಿಸಿದ ಎಲ್ಲ ಜನಗಣತಿಗಳಲ್ಲೂ ಜಾತಿ ಒಂದು ಅವಿಭಾಜ್ಯ ಅಂಶವಾಗಿತ್ತು. ೧೯೫೧ರಲ್ಲಿ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳ ಮತ್ತು ಹಿಂದುಳಿದ ಜಾತಿಗಳ ಕುರಿತ ಅಂಕಿಅಂಶಗಳನ್ನು ಸಂಗ್ರಹಿಸಲಾಯಿತು. ಬಹಿರಂಗವಾಗಿ ಪ್ರಕಟಿಸದೇ ಹೋದರೂ ಮೊಟ್ಟಮೊದಲನೆಯ ಬಾರಿಗೆ ಸ್ಥಾಪಿಸಲ್ಪಟ್ಟ ಅಖಿಲ ಭಾರತ ಹಿಂದುಳಿದ ವರ್ಗಗಳ ಆಯೋಗಕ್ಕೆ ಈ ಎಲ್ಲ ವಿವರಗಳನ್ನು ಒದಗಿಸಲಾಯಿತು. ೧೯೬೧ರಿಂದೀಚೆಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿನವರಿಗೆ ಸಂಬಂಧಪಟ್ಟ ವಿವರಗಳನ್ನು ಮಾತ್ರ ಸಂಗ್ರಹಿಸಲಾಗುತ್ತಿದೆ.

ಈ ಇಡೀ ಪ್ರಕ್ರಿಯೆಯನ್ನು ಬ್ರಿಟಿಷ್ ವಸಾಹತುಶಾಹಿಗಳು ನಮ್ಮ ಸಮಾಜವನ್ನು ವಿಭಜಿಸಿ ಆಳುವ ಒಂದು ಸಾಧನವನ್ನಾಗಿ ಮಾಡಿಕೊಂಡ ಹಿನ್ನೆಲೆಯಲ್ಲಿ ಭಾರತದಂತಹ ಪ್ರಜಾಪ್ರಭುತ್ವವಾದಿ ಮತ್ತು ಗಣತಂತ್ರದ ವ್ಯವಸ್ಥೆಯಲ್ಲಿ ಜಾತಿಗಳಿಗೆ ಯಾವ ರೀತಿಯ ಪ್ರಾಮುಖ್ಯತೆಯನ್ನೂ ಕೊಡಬಾರದೆನ್ನುವ ವಿಚಾರಧಾರೆಯನ್ನು ಕೆಲವರು ಹೊಂದಿದ್ದರೆ ಆಶ್ಚರ್ಯವೇನಿಲ್ಲ. ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟಿನ ಜನಸಮುದಾಯದ ಹೊರತಾಗಿ, ಜಾತಿಯನ್ನು ಗಣನೆಗೆ ತೆಗೆದುಕೊಳ್ಳದೆ ಹೋದರೆ ಅದರ ಅಸ್ತಿತ್ವವನ್ನೇ ಅಲುಗಾಡಿಸಿದಂತಾಗಬಹುದೆಂದು ಅವರ ನಂಬಿಕೆಯೂ ಕೂಡ.

ಒಂದು ರೀತಿಯಲ್ಲಿ ನೋಡಿದರೆ ಅವರ ಈ ಚಿಂತನೆ ತಾರ್ಕಿಕವಾಗಿ ಮತ್ತು ರಾಜಕೀಯವಾಗಿ ಸಮಂಜಸವಾಗಿದೆ ಎನಿಸುತ್ತದೆ. ಸರಕಾರದ ಆದೇಶದಂತೆ ಸಂಬಂಧಪಟ್ಟ ಅಧಿಕಾರಿಗಳು ಕಾರ್ಯಗತಗೊಳಿಸುವ ಪ್ರಕ್ರಿಯೆಗಳಲ್ಲಿ ಜನಗಣತಿಯೂ ಒಂದು. ಹೀಗಾಗಿ ಈ ಪ್ರಕ್ರಿಯೆಯ ಮೂಲಕ ಜಾತಿ ಪದ್ಧತಿ ಮಾನ್ಯತೆ ಪಡೆಯುವುದೇ ಅಲ್ಲದೆ ಸಮಾಜದಲ್ಲಿ ಜಾತಿ ಆಧಾರಿತ ಸಂಘರ್ಷಗಳು ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ.

ಇಲ್ಲಿ ಇನ್ನೊಂದಂಶವನ್ನು ಗಮನಿಸಬಹುದು. ಸಮಾಜ ಶಾಸ್ತ್ರಜ್ಞರು ನಡೆಸುವ ಜಾತಿ ಪದ್ಧತಿಯ ಕುರಿತ ಅಧ್ಯಯನ, ವಿಶ್ಲೇಷಣೆಗಳು ಗುಣಾತ್ಮಕವಾಗಿ ಬೇರೆಯೇ ಆಗಿಬಿಡುತ್ತವೆ. ಅವರಿಗಿರುವ ಇತಿ ಮಿತಿಗಳೇ ಬೇರೆ. ಜಾತಿ ಎಂಬುದನ್ನು ಒಂದು ಹಳ್ಳಿಯ ಮಟ್ಟದ ವ್ಯವಸ್ಥೆಯಾಗಿ ಅಥವಾ ಒಟ್ಟಾರೆ ಒಂದು ಪಂಗಡವನ್ನಾಗಿ ಪರಿಗಣಿಸುವುದರಿಂದ ಅವರ ಅಭಿಪ್ರಾಯಗಳು ಅಮೂರ್ತ ಹಾಗೂ ಹೆಚ್ಚು ತಾತ್ವಿಕ ನೆಲೆಗಟ್ಟಿನಲ್ಲಿಯೇ ಉಳಿದುಬಿಡುತ್ತವೆ. ಜೊತೆಗೆ, ಸಾಮಾನ್ಯೀಕರಣಗೊಳಿಸುವ ಸಂಭವವೂ ಹೆಚ್ಚು. ಅಲ್ಲದೆ ಸರಕಾರದ ಜನಗಣತಿ ವರದಿಗಳಿಗಿರುವ ಅಧಿಕೃತ ಮಾನ್ಯತೆ ಸಮಾಜ ಶಾಸ್ತ್ರಜ್ಞರ ಅಭಿಪ್ರಾಯಗಳಿಗಾಗಲಿ, ವರದಿಗಳಿಗಾಗಲಿ ಇರುವುದಿಲ್ಲವಾದ್ದರಿಂದ ಅವರು ತಮ್ಮ ಕಾರ್ಯಕ್ಷೇತ್ರಗಳನ್ನು ವಿಸ್ತರಿಸಿಕೊಳ್ಳಬೇಕಾಗುತ್ತದೆ. ವಿಶಾಲ ತಳಹದಿಯ ಆಧಾರದ ಮೇಲೆ ಸಂಗ್ರಹಿಸಿರುವ ಅಂಕಿ, ಅಂಶಗಳು ಅವರಿಗೆ ಅಗತ್ಯವಾಗುತ್ತವೆ. ಆದರೆ ಜಾತಿ ಪದ್ಧತಿಯ ಕುರಿತ ಆ ರೀತಿಯ ವಿವರಗಳು ಸಧ್ಯದಲ್ಲಿ ಲಭ್ಯವಿಲ್ಲವಾದ್ದರಿಂದ ಅದರ ಸಾಮಾಜಿಕ ವಾಸ್ತವಿಕತೆಯ ಬಗ್ಗೆ ತಪ್ಪು ಕಲ್ಪನೆಗಳು ಸಹಜವಾಗಿಯೇ ಉದ್ಭವಿಸುತ್ತವೆ. ಎಂದೇ ಸಂವಿಧಾನಾತ್ಮಕ ಮತ್ತು ರಾಜಕೀಯ ಸಂವೇದನೆಗಳ ದೃಷ್ಟಿಯಲ್ಲಿ ಸರಕಾರದ ವತಿಯಿಂದ ದೊರೆಯುವ ಜನಗಣತಿಯ ವಿವರಗಳಿಗೂ, ಇವೇ ಸಮಸ್ಯೆಗಳನ್ನು ಸಮಾಜಶಾಸ್ತ್ರಜ್ಞರು ನೋಡುವ ದೃಷ್ಟಿಗೂ ವ್ಯತ್ಯಾಸಗಳಿವೆ. ಹಾಗೆಂದ ಮಾತ್ರಕ್ಕೆ ಜಾತಿಗಳ ಕುರಿತ ಅಧಿಕಾರಯುಕ್ತ ಹಾಗೂ ವಿಶ್ವಾಸಾರ್ಹ ಅಂಕಿ ಅಂಶಗಳು ಸರಕಾರಕ್ಕೆ ಅಗತ್ಯವಿಲ್ಲವೆಂದೇನಲ್ಲ. ಆದರೆ ಸರಕಾರ ತಾನೇ ನಿಗದಿಪಡಿಸಿಕೊಂಡಿರುವ ಸೈದ್ಧಾಂತಿಕ ಚೌಕಟ್ಟಿನೊಳಗೆಯೇ ಜನಗಣತಿಗೆ ಸಂಬಂಧಪಟ್ಟ ತೀರ್ಮಾನಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಮಂಡಲ್ ಆಯೋಗ ಬೇರೆಬೇರೆ ಮೂಲಗಳಿಂದ ಸಂಗ್ರಹಿಸಿದ ವಿವರಗಳನ್ನು ಗಣನೆಗೆ ತೆಗೆದುಕೊಂಡು ಆಧಾರವಾಗಿಟ್ಟುಕೊಂಡಿದ್ದು ೧೮೯೧ ಮತ್ತು ೧೯೩೧ರ ಜನಗಣತಿಯ ಅಂಕಿ ಅಂಶಗಳನ್ನು.

೧೯೫೩ರಲ್ಲಿ ನೇಮಕಗೊಂಡ ಅಖಿಲ ಭಾರತ ಹಿಂದುಳಿದ ವರ್ಗಗಳ (ಕಾಕಾ ಕಾಳೇಲ್ಕರ್) ಆಯೋಗವು ಜನಗಣತಿಯಲ್ಲಿ ಜಾತಿಯು ಒಂದು ಬಹುಮುಖ್ಯ ಅಂಶವನ್ನಾಗಿ ಸೇರ್ಪಡೆಯಾಗಬೇಕೆಂದು ಒತ್ತಾಯಿಸಿದ್ದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಅನಂತರ ರಾಜ್ಯಮಟ್ಟದ ಆಯೋಗಗಳು ಇದೇ ರೀತಿಯ ಬೇಡಿಕೆಗಳನ್ನು ಮುಂದಿಟ್ಟಿವೆ. ಇದೇ ನಿಟ್ಟಿನಲ್ಲಿ ಕರ್ನಾಟಕದಲ್ಲಿ, ನ್ಯಾಯಮೂರ್ತಿ ವೆಂಕಟಸ್ವಾಮಿ ಆಯೋಗವು ವ್ಯಾಪಕವಾದ ಸಮೀಕ್ಷೆಯನ್ನು ನಡೆಸಿದ್ದನ್ನು ಕೂಡ ಈ ಸಂದರ್ಭದಲ್ಲಿ ಉಲ್ಲೇಖಿಸಬಹುದಾಗಿದೆ.

ಕೆಳಜಾತಿಗಳ ಮತ್ತು ದೀನದಲಿತರ ಜೀವನ ಮಟ್ಟವನ್ನು ಉತ್ತಮಗೊಳಿಸಲು ಸರಕಾರಗಳು ಅನೇಕ ಯೋಜನೆಗಳನ್ನು ರೂಪಿಸುತ್ತಾ ಬಂದಿವೆ ನಿಜ. ಆದರೆ ನಂಬಲರ್ಹವಾದ ವಿವರಗಳಿಲ್ಲದೆ ಅಂತಹ ಯೋಜನೆಗಳು ಆಯಾ ಜನಸಮುದಾಯಗಳನ್ನು ಮುಟ್ಟುತ್ತವೆ ಎಂದು ಕಟ್ಟುನಿಟ್ಟಾಗಿ ಹೇಳಲು ಸಾಧ್ಯವಿಲ್ಲ.

ಸರಕಾರ ತನ್ನ ಎಷ್ಟೋ ನೀತಿ ನಿಯಮಗಳನ್ನು

ರೂಪಿಸುವಾಗ ಜಾತಿಯ ಅಂಶವನ್ನು ಪರಿಗಣಿಸಲೇಬೇಕಾಗಿ ಬರುವ ಸಂದರ್ಭಗಳೇ ಜಾಸ್ತಿ ಎನ್ನಬಹುದು. ಇಂತಹ ವಿದ್ಯಮಾನವನ್ನು ಮಾಹಿತಿ ಪಡೆವ ಹಕ್ಕಿನ ದೃಷ್ಟಿಯಿಂದಲೂ ನೋಡುವವರ ವಾದ ಸಹ ಅಲ್ಲಲ್ಲಿ ಕೇಳಿಬರುತ್ತದೆ.

ಹೆಸರಾಂತ ಸಮಾಜಶಾಸ್ತ್ರಜ್ಞರಾದ ಎಮ್. ಎನ್. ಶ್ರೀನಿವಾಸ್ ಮತ್ತು ಆ್ಯಂಡ್ರೆ ಬೆಟೆಲ್ ಅವರು ೨೦೦೧ರ ಜನಗಣತಿಯಲ್ಲಿ ಜಾತಿಯನ್ನು ಮತ್ತೆ ಸೇರಿಸಬೇಕೆನ್ನುವ ಸಲಹೆಗಳನ್ನು ಕಟುವಾಗಿ ವಿರೋಧಿಸಿ ಅಗತ್ಯವಾದ ಹೊಸ ಚಿಂತನೆಗೆ ಎಡೆಮಾಡಿಕೊಟ್ಟಿದ್ದಾರೆ. ಈ ತಜ್ಞರು ತಮ್ಮ ವಾದವನ್ನು ಪುಷ್ಟೀಕರಿಸಲು ಈ ಮೂರು ಅಂಶಗಳನ್ನು ಮುಂದಿಡುತ್ತಾರೆ.

ಅ) ತಾಂತ್ರಿಕವಾಗಿ ಎಣಿಕೆ ಮತ್ತು ಅದರ ಮಾಪನ ಮಾಡುವ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಗಳು; ಆ) ಪ್ರಾಯೋಗಿಕವಾಗಿ, ಜಾತಿ ನಮೂದಿತ ಜನಗಣತಿಯ ಪ್ರಕ್ರಿಯೆಯಿಂದ ಉಂಟಾಗುವ ಸಾಮಾಜಿಕ ಮತ್ತು ರಾಜಕೀಯ ಪರಿಣಾಮಗಳು; ಮತ್ತು ಇ) ನೈತಿಕವಾಗಿ, ಜಾತಿಪದ್ಧತಿಯ ನಿರಂತರ ಮುಂದುವರಿಕೆ ಮತ್ತು ಸಮರ್ಥನೆ.

೨೦೦೧ರ ಜನಗಣತಿಯಲ್ಲಿ ಜಾತಿ ಒಂದು ಅಂಶವಾಗ ಬೇಕೆ ಎಂಬುದು ಅಲ್ಲಲ್ಲಿ ಚರ್ಚೆಯಾಗುತ್ತಿದೆ. ಈಗ ತಿಳಿದು ಬಂದಿರುವ ಸೂಚನೆಗಳಂತೆ ಅದರಲ್ಲಿನ ಪ್ರಶ್ನಾವಳಿಗಳು ವಿಚಿತ್ರವಾಗಿವೆ ಎನ್ನಿಸುತ್ತದೆ. ಉದಾಹರಣೆಗೆ, ಜನಗಣತಿ ಯಲ್ಲಿ ಜಾತಿ ಇರಬೇಕೆ, ಬೇಡವೇ ಎನ್ನುವ ಪ್ರಶ್ನೆ ಇದೆ. ಉತ್ತರ 'ಬೇಕು' ಎಂದಾದರೆ ನೀವು ಸರಕಾರದ ಬಾಲ ಬಡುಕರು ಇಲ್ಲವೇ ಜಾತ್ಯತೀತತೆಯ ವಿರೋಧಿಗಳು ಎನ್ನುವ ಹಣೆಪಟ್ಟಿ ಕಟ್ಟಿಸಿಕೊಳ್ಳಬೇಕಾಗುತ್ತದೆ. ನೀವು 'ಬೇಡ' ಎಂದರೂ ಇದೇ ಹಣೆಪಟ್ಟಿ ಗಟ್ಟಿ. 'ಇವೆಲ್ಲಾ ನಮಗೆ ಯಾಕೆ ?' ಎನ್ನುವ ಪಂಡಿತ ಸಮುದಾಯಗಳಿಗೇನೂ ಕೊರತೆಯಿಲ್ಲ.

ಬ್ರಿಟಿಷರ ಕಾಲದಲ್ಲಿಯೇ ಜಾತಿಯ ವಾಸ್ತವಿಕತೆಯನ್ನು ಪ್ರಾಸಂಗಿಕವಾಗಿ ಮತ್ತು ಸಾಮಾಜಿಕವಾಗಿ ಪರಿಗಣಿಸಿದ್ದು ನಿಜವೇ. ಅದೇ ನಿಟ್ಟಿನಲ್ಲಿ ಜಾತಿಗಳನ್ನು ಕುರಿತ ಪ್ರಶ್ನಾವಳಿ ಮೂಲಕ ಆ ಇಡೀ ಪದ್ಧತಿಯನ್ನೇ ಮೂರ್ತೀಕರಿಸುವ ಪ್ರಯತ್ನಗಳೂ ನಡೆದಿವೆ. ನಂತರದ ಕಾಲಾವಧಿಯಲ್ಲಿ ಜನಸಾಮಾನ್ಯರಾಗಲಿ, ರಾಜಕೀಯ ಧುರೀಣರಾಗಲಿ, ಸರಕಾರಗಳಾಗಲಿ ಜಾತಿಯನ್ನು ಒಂದು ಸಾಮಾಜಿಕ ಬೆಳವಣಿಗೆಯೆಂದು ಗುರುತಿಸುವುದೂ ಅಲ್ಲದೆ ಅಂತ ರ್ಜಾತೀಯ ಸಂಬಂಧಗಳನ್ನು ಕುರಿತ ಸಮಾಲೋಚನೆಗಳ ಬಗ್ಗೆಯೂ ತೊಡಗಿಸಿಕೊಂಡಿದ್ದಾರೆ. ಜಾತಿ ಎಂಬುದು ಸಮಾಜಶಾಸ್ತ್ರಜ್ಞರ ದೃಷ್ಟಿಯಲ್ಲಿ ಇನ್ನೂ ಒಂದು ಒಗಟಾಗಿಯೇ ಉಳಿದುಬಂದಿದೆ. ಜನಗಣತಿಯ ಸಂದರ್ಭ ದಲ್ಲಿ ಜಾತಿಯನ್ನು ಸರಿಯಾಗಿ ಅರ್ಥೈಸಿ ಸೂಕ್ತವಾದ ನಿರ್ಧಾರಕ್ಕೆ ಬರಬೇಕಾಗಿದ್ದರೆ ಹಲವಾರು ಸಂಕೀರ್ಣವಾದ, ಭಾವನಾತ್ಮಕವಾದ ಹಾಗೂ ಕ್ರಮಬದ್ಧವಾದ ವರ್ಗೀಕರಣ ಮಾಡಲೇಬೇಕಾದಂತಹ ಸನ್ನಿವೇಶಗಳನ್ನು ಎದುರಿಸ ಬೇಕಾಗುತ್ತದೆ.

**ಜಾತಿಯ ಗಣನೆ - ವಿವಿಧ ಆಯಾಮಗಳು**

ಭಾರತೀಯ ಸಂದರ್ಭದಲ್ಲಿ ವರ್ಣ ಮತ್ತು ಜಾತಿ ಬೇರೆಬೇರೆ ಅರ್ಥ ಮತ್ತು ಮೌಲ್ಯಗಳನ್ನು ಹೊಂದಿವೆ. ವರ್ಣ ಎಂಬುದು ದುಡಿಮೆಯ ವರ್ಗೀಕರಣವನ್ನೇ ಅಮೂರ್ತವಾಗಿ ಪರಿಚಯಿಸುವ ಅಭಿವ್ಯಕ್ತಿ ಎನಿಸಿಕೊಂಡರೆ, ಜಾತಿ ಹುಟ್ಟಿಗೆ ಸಂಬಂಧಪಟ್ಟ ಒಂದು ಸಾಮಾಜಿಕ ಪಂಗಡಗಳ ವಿವರಣೆಯಾಗುತ್ತದೆ. ಇವೆರಡೂ ಗಂಭೀರ ವಾದ ಸಾಮಾಜಿಕ ಚರ್ಚೆಗೆ ಗ್ರಾಸವಾಗಿರುವುದೂ ನಿಜವೇ. ಇದುವರೆಗಿನ ಅನುಭವದ ಆಧಾರದ ಮೇಲೆ ಹೇಳಬಹು ದಾದರೆ ಜಾತಿಯ ಸದಸ್ಯತ್ವವಾಗಲಿ ಅಥವಾ ನಾಲ್ಕು ವರ್ಣಗಳ ವರ್ಗೀಕರಣವಾಗಲಿ ಬಹಳ ಕ್ಲಿಷ್ಟಕರವಾದ ಕ್ರಿಯೆ ಎನ್ನುವುದು ವಾಸ್ತವವಾದುದು.

ಜಾತಿ ಎಂಬ ಪದವನ್ನೇ ಬಳಕೆಯಿಂದ ಕೈ ಬಿಟ್ಟರೆ ಪರಿಣಾಮವೇನಾಗಬಹುದು? ಸಮಾಜದ ವಿವಿಧ ಪಂಗಡಗಳನ್ನು ಗುರುತಿಸ ಹೋದಾಗ ಉಂಟಾಗುವ ಸಮಸ್ಯೆಗಳ ಹಿನ್ನೆಲೆಯಲ್ಲಿ ಈ ಸಲಹೆ ಅಸಾಧ್ಯವಾದುದೆಂದೇ ಹೇಳಬೇಕಾಗಿದೆ. ಏಕೆಂದರೆ ಭಾರತೀಯ ಪರಿಭಾಷೆಗಳಲ್ಲಿ ಸಾಮಾಜಿಕ ಸಂಬಂಧಗಳಲ್ಲಿ ಒಬ್ಬರನ್ನೊಬ್ಬರು ಗುರುತಿಸ ಹೊರಟಾಗ ಜಾತಿ ಎಂಬುದು ನಮ್ಮ ನಿತ್ಯ ಜೀವನದ ಎಲ್ಲ ಸ್ತರಗಳಲ್ಲಿಯೂ ಹಾಸುಹೊಕ್ಕಾಗಿದೆಯೆಂದು ವೇದ್ಯ ವಾಗುತ್ತದೆ. ಈ ಉಭಯ ಸಂಕಟದಿಂದಲೇ, ಸಮುದಾಯದ ವಿವಿಧ ಪಂಗಡಗಳನ್ನು ವಿಂಗಡಿಸುವಾಗ ಜಾತಿ ಎನ್ನುವ ಪರಿಭಾಷೆಯನ್ನು ಬಳಸದೇ ಅನ್ಯ ಮಾರ್ಗವೇ ಇಲ್ಲ. ಈ ಪ್ರಕ್ರಿಯೆಯಲ್ಲಿ ಅನೇಕ ವೈರುಧ್ಯಗಳಿವೆಯೆಂಬುದು ಬೇರೆಯ ಮಾತು.

ಜನಗಣತಿಯಲ್ಲಿ ಜಾತಿಯನ್ನು ಪರಿಗಣಿಸ ಹೊರಟಾಗ ಈ ತೊಡಕುಗಳು ಎಷ್ಟು ಗಂಭೀರವಾಗಿರುತ್ತವೆ ಎನ್ನುವುದು ನಮಗೆ ಅನುಭವವಾಗುತ್ತದೆ. ವಾಸಿಸುವ ಪ್ರದೇಶ, ಭಾಷೆ, ಉಪಜಾತಿ, ಕುಲ, ವೃತ್ತಿ ಹೀಗೆ ಅನೇಕ ವಾಸ್ತವಾಂಶಗಳು ಜಾತಿಗಳ ಹೆಸರುಗಳಿಗೆ ಅಂಟಿಕೊಂಡಿರುತ್ತವೆ. ಅನಕ್ಷರತೆ, ಅಜ್ಞಾನವೆಂಬ ಅನೇಕ ರೀತಿಯ ಸಾಮಾಜಿಕ ಪೀಡೆಗಳು ಜನಗಣತಿಯ ಪ್ರಕ್ರಿಯೆಯನ್ನು ತೀವ್ರವಾಗಿ ಸಂಕೀರ್ಣ ಗೊಳಿಸುತ್ತವೆ. ಇದರಿಂದಾಗಿ ಎಷ್ಟೋ ಬಾರಿ ತಪ್ಪು ಮಾಹಿತಿಗಳಿಗೆ ಎಡೆಮಾಡಿಕೊಡುತ್ತವೆ.

ಉದಾಹರಣೆಗೆ, ೧೮೮೧ರ ಜನಗಣತಿಯಲ್ಲಿ ಮದ್ರಾಸು ಪ್ರೆಸಿಡೆನ್ಸಿಯಲ್ಲಿಯೇ ೩,೨೦೮ ಜಾತಿಗಳು ಇದ್ದದ್ದನ್ನು ಅಂದು ದಾಖಲಿಸಿದ ಮಾಹಿತಿಗಳಿಂದ ತಿಳಿದು ಬರುತ್ತದೆ. ಪುನರ್ ಪರಿಶೀಲನೆ ಮಾಡಿದಾಗ ಅದೇ ಸಂಖ್ಯೆ ೩೮೪ಕ್ಕೆ ಇಳಿದದ್ದು ಮೇಲೆ ಹೇಳಿದ ಮಾತುಗಳನ್ನು ಪುಷ್ಟೀಕರಿಸುತ್ತದೆ. ಅವೈಜ್ಞಾನಿಕವಾಗಿ ಅಥವಾ ಇಚ್ಛಾನುಸಾರ ನಡೆಸಿದ ಜನಗಣತಿಗಳು ತಪ್ಪು ಅಂಕಿ ಅಂಶಗಳಿಗೆ ಕಾರಣವಾಗುತ್ತದೆ.

ಈ ಎಲ್ಲ ಕಾರಣಗಳಿಂದಲೇ ಜಾತಿಯನ್ನು ಗಣನೆಗೆ ತೆಗೆದುಕೊಳ್ಳಬಾರದೆಂಬ ವಾದಕ್ಕೆ ಹೆಚ್ಚು ಮಾನ್ಯತೆ ದೊರೆಯುತ್ತದೆ. ಸಾವಿರಾರುಗಟ್ಟಲೆ ಜಾತಿ, ಉಪಜಾತಿಗಳು, ಅವುಗಳನ್ನೊಳಗೊಳ್ಳಬೇಕಾದ ಜನಗಣತಿಯ ಅಸಾಧ್ಯತೆ ಯನ್ನು ಸಾರಿಹೇಳುತ್ತವೆ. ಈ ನಿಟ್ಟಿನಲ್ಲಿ ಅನೇಕ ಸಲಹೆಗಳು ಬಂದಿದ್ದರೂ ಒಟ್ಟು ಸಮಷ್ಟೀಕರಣದ ಸಂದರ್ಭದಲ್ಲಿ ಬಂದೊದಗುವ ಸಮಸ್ಯೆಗಳಿಗೆ ಸರಕಾರದ ಪ್ರತಿನಿಧಿ ಗಳಾಗಲಿ, ಸಮಾಜಶಾಸ್ತ್ರಜ್ಞರಾಗಲಿ, ಸಮಂಜಸವಾದ ಪರಿಹಾರವನ್ನು ಸೂಚಿಸಲು ಸಾಧ್ಯವಾಗುತ್ತಿಲ್ಲ.

ಜಾತಿಗಳು ಭಿನ್ನಭಿನ್ನವಾದ ಪಂಗಡಗಳಾಗಿದ್ದರೂ ಒಂದು ದೃಷ್ಟಿಯಲ್ಲಿ ಪರಸ್ಪರ ಸಂಬಂಧವಿರುವ ಶ್ರೇಣೀಕೃತ ವಾದ ಜನಸಮೂಹದ ಭಾಗಗಳಾಗಿವೆ. ತನ್ನದೇ ಆದ ಸ್ವಂತಿಕೆ, ಪ್ರತ್ಯೇಕತೆ ಯಾವ ಜಾತಿಗೂ ಇಲ್ಲವೆಂದು ವಾದಿಸುವವರೂ ಇದ್ದಾರೆ. ಇದು ಬಹುಮಟ್ಟಿಗೆ ನಿಜ. ಮೇಲು, ಕೀಳು ಜಾತಿಗಳೆಂಬ ಜಂಜಾಟವಿರುವುದು ಎಲ್ಲರಿಗೂ ಗೊತ್ತಿರುವ ವಿಷಯವೇ. ಬ್ರಿಟಿಷರ ಆಳ್ವಿಕೆಯಲ್ಲಿ ಕೆಲವು ಜಾತಿಯ ಜನರು ತಮ್ಮನ್ನು ಮುಂದುವರೆದ ಜಾತಿಯವರೆಂದು ಪರಿಗಣಿಸಬೇಕೆಂದು ಒತ್ತಾಯಿಸುತ್ತಿದ್ದ ವರು ಇಂದು ಹಿಂದುಳಿದವರೆಂದು ದಾಖಲಿಸಿಕೊಳ್ಳಲು ಹೋರಾಡುತ್ತಿರುವುದು ನಿಜವಾಗಿಯೂ ಒಂದು ವಿರೋಧಾಭಾಸವೇ.

ಜಾತಿಗಳ ಆಧಾರದ ಮೇಲೆ ಜನಗಣತಿ ಮಾಡ ಹೊರಟಾಗ ಎದುರಾಗುವ ಇಂತಹ ಸಮಸ್ಯೆಗಳಿಗೆ ಬಲಿಪಶು ಗಳಾಗುವ ಅಂಶಗಳೆಂದರೆ ವಸ್ತುನಿಷ್ಠತೆ ಮತ್ತು ಸತ್ಯಶೀಲತೆ. ೧೯೮೧ರ ಜನಗಣತಿಯ ಸಂದರ್ಭದಲ್ಲಿ ಮೀಸಲಾತಿಯ ಪ್ರಶ್ನೆ ಬಂದಾಗ ಅನೇಕ ಬುಡಕಟ್ಟಿನ (ಉದಾ : ಕರ್ನಾಟಕದಲ್ಲಿ ಕುರುಬರು) ಜನರು ಇತರೆ ಪಂಗಡಗಳ ಹೆಸರುಗಳಿಗೆ ಹೋಲುವಂತೆಯೇ ತಮ್ಮನ್ನು ಗುರುತಿಸಿ ಕೊಂಡು ದಾಖಲಿಸಿಕೊಂಡದ್ದು ಇಲ್ಲಿ ಪ್ರಸ್ತುತವಾಗುತ್ತದೆ. ಇದರಿಂದುಂಟಾಗುವ ರಾಜಕೀಯ ಮತ್ತು ಸಾಮಾಜಿಕ ಗೊಂದಲಗಳು, ದುಷ್ಪರಿಣಾಮಗಳು ಅಪಾರ.

ಇವು ಸಾಲದೆಂಬಂತೆ ತಾವು ಯಾವ ಜಾತಿಗೂ ಸೇರಿದ ವರಲ್ಲವೆನ್ನುವವರಿದ್ದಾರೆ. ಅಂತರ್ಜಾತೀಯ ಹಾಗೂ ಅಂತರ್ಮತೀಯ ವಿವಾಹಗಳ ಪರಿಣಾಮವಾಗಿ ಹುಟ್ಟಿದವರ ಸಮಸ್ಯೆಗೆ ಪರಿಹಾರವೇನು ? ಮೇಲಾಗಿ, ಮತಾಂತರಗಳನ್ನು ಮೀರಿ, ಜಾತಿಪದ್ಧತಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡೇ ಬಂದಿದೆ. ಹಾಗಾಗಿ, ಮುಸ್ಲಿಮರಿಗೂ ಮತ್ತು ಕ್ರೈಸ್ತರಿಗೂ ಕೂಡ ಜಾತಿಯ ಹಣೆಪಟ್ಟಿ ಕಟ್ಟಬೇಕಾಗುತ್ತದೆ.

ಕಡೆಯಲ್ಲಿ ಒಂದು ಮಾತು. ಜಾತ್ಯಾತೀತ, ಜಾತಿ ರಹಿತ ಸಮಾಜ ನಮ್ಮೆಲ್ಲರ ಆಶಯವೇನೋ ಸರಿ. ಆದರೆ, ಇಂದಿನ ಸನ್ನಿವೇಶದಲ್ಲಿ ಜಾತಿಪದ್ಧತಿ ಹೆಮ್ಮರವಾಗಿ ಬೆಳೆದು ನಿಂತಿದೆ. ಇದು ವಾಸ್ತವಿಕತೆ. ನಾವು, ಭಾರತೀಯರು, ಬಹುಶಃ ಇನ್ನೂ ಅನೇಕ ಶತಮಾನಗಳ ಕಾಲ ಇದನ್ನು ವಿಸರ್ಜಿಸಲು ಸಾಧ್ಯವಿಲ್ಲ. ಅಂದಮೇಲೆ ಸರಕಾರದ ಯಾವುದೇ ಸಮಾಜ ಕಲ್ಯಾಣ ಯೋಜನೆಗಳೇ ಆಗಲಿ, ಅವುಗಳಿಗೆ ಜಾತಿ ಆಧಾರಿತ ಅಂಕಿಅಂಶಗಳ ಅಗತ್ಯ ಇರಲೇಬೇಕಾಗುತ್ತದೆ. ಎಂತಲೇ ರಾಷ್ಟ್ರಮಟ್ಟದ ಜನಗಣತಿಗೆ ಅಂಟಿಕೊಂಡಿರುವ ಈ ಸಮಸ್ಯೆಗಳಿಗೆ ಸೂಕ್ತವಾದ ಪರಿಹಾರಗಳನ್ನು ರೂಪಿಸ ಬೇಕಾಗಿದೆ. ಜಾತಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರಮಟ್ಟದ ವ್ಯಾಪಕವಾದ ಅಂಕಿಅಂಶಗಳನ್ನು ಸಂಗ್ರಹಿಸುವುದು ಸರಕಾರಿ ಸಂಸ್ಥೆಗಳಿಂದ ಸಾಧ್ಯವೇ ಎನ್ನುವುದು ನಮ್ಮ ಮುಂದಿರುವ ಪ್ರಶ್ನೆ. ಬದಲಾಗಿ ರಾಜ್ಯಗಳ ಮಟ್ಟಗಳಲ್ಲಿ ವಿಶಾಲ ತಳಹದಿಯ ಮೇಲೆ ಸಂಘ ಸಂಸ್ಥೆಗಳನ್ನು ರಚಿಸಿ ನಿರ್ದಿಷ್ಟ ಗುರಿ ಹೊಂದಿರುವ ಮಾದರಿ ಸಮೀಕ್ಷೆಗಳನ್ನು ಮಾಡುವುದೊಂದೇ ನಮಗಿರುವ ಪರ್ಯಾಯ ಎನ್ನಬಹುದು.

**ಪ್ರೊ॥ ಎಸ್. ಜಯರಾಮ್**
ಸಮಾಜಶಾಸ್ತ್ರ ವಿಭಾಗದ ಮುಖ್ಯಸ್ಥರು, ಗೋವಾ ವಿಶ್ವವಿದ್ಯಾಲಯ,
ಗೋವಾ - ೪೦೩ ೨೦೬

(ಲೇಖಕರ ಆಂಗ್ಲ ಪ್ರಬಂಧವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಶ್ರೀ ಎಸ್. ಸುರೇಂದ್ರ)

# ಯೋಗ ಪ್ರವೇಶ - ೧೪

ಜಿ. ರಾಮಕೃಷ್ಣ

ಹಿಂದೊಮ್ಮೆ ಪ್ರಸ್ತಾಪಿಸಿದಂತೆ ಆಸನವು 'ಸ್ಥಿರ' ಮತ್ತು 'ಸುಖ' ಎಂಬ ಲಕ್ಷಣಗಳನ್ನು ಹೊಂದಿದೆ. ಪತಂಜಲಿಯ ಈ ಮಾತನ್ನು ಅರ್ಥೈಸುವಾಗ ಕೆಲವರು ಹೇಳುವುದುಂಟು: ಯಾವ ಆಸನವು ಈ ಲಕ್ಷಣಗಳನ್ನು ಹೊಂದಿರುತ್ತದೋ ಅದನ್ನು ಅಭ್ಯಾಸ ಮಾಡಬೇಕು, ಎಂದು. ಹಾಗಿದ್ದರೆ ಮಲಗುವುದೇ ಅತ್ಯುತ್ತಮ ಆಸನವಾಗಿಬಿಡುವ ಭಯವಿರುತ್ತದೆ. ಪತಂಜಲಿಯ ಇಂಗಿತ ಅದಲ್ಲ; ಏಕೆಂದರೆ, ಅಂಗಮೇಜಯತ್ವವನ್ನು ತೊಡೆದುಹಾಕಲು ಆಸನವು ಸಾಧನವೆಂದು ಯೋಗಸೂತ್ರದ ಭಾಷ್ಯದಲ್ಲಿ ವ್ಯಾಸರು ಹೇಳಿರುವುದುಂಟು. ಇದು ''ವಿಕ್ಷೇಪ''ದ ಜೊತೆಯಲ್ಲೇ ಉಂಟಾಗುವುದೆಂದೂ ಹೇಳಿದೆ (ಯೋಗಸೂತ್ರ ೧.೩೧). ಶರೀರದಲ್ಲಿ ಮಾಂಸಖಂಡಗಳ ಹಾಗೂ ನರಗಳ ಲಯದಲ್ಲಿ ವ್ಯತ್ಯಯವುಂಟಾದರೆ ಅದು ಅಂಗಮೇಜಯತ್ವ ಎನಿಸಿಕೊಳ್ಳುತ್ತದೆ. ''ಅಂಗಲಾಘವ''ವು ಆಸನದ ಪರಿಣಾಮವೆಂದು ಸ್ವಾತ್ಮಾರಾಮ ಸೂರಿಯೂ ಹೇಳುತ್ತಾನೆ (ಹಠಪ್ರದೀಪಿಕೆ ೧.೧೭). ಆಲಸ್ಯವನ್ನು ಹೊಡೆದು ಹಾಕುವುದು ಆಸನ (ಆಸನೇನ ರಜೋ ಹಂತಿ) ಎಂದೂ ಅವನು ಹೇಳಿದ್ದಾನೆ.

ಆಸನದಲ್ಲಿ ''ಪ್ರಯತ್ನ ಶೈಥಿಲ್ಯ''ವಿದ್ದು ಅದರ ಅಭ್ಯಾಸದಿಂದ ''ಅನಂತ ಸಮಾಪತ್ತಿ''ಯತ್ತ ಕ್ರಮಿಸಬಹುದು (ಯೋ.ಸೂ. ೨.೪೭). ಇಡೀ ವಿಶ್ವದ ಒಂದು ತುಣುಕು ತಾನು ಎಂಬುದರತ್ತ ಗಮನವಿರಿಸಿ ಅದರೊಡನೆ ಸಮೀಕರಿಸಿಕೊಳ್ಳುವುದು ಆಸನದ ಅಭ್ಯಾಸದ ಒಂದು ಭಾಗವೆಂದು ಇದರರ್ಥ. ಆಸನದಲ್ಲಿ ಬಿಗಿತನವಾಗಲಿ ಮೊಂಡುತನವಾಗಲಿ ಇರುವಂತಿಲ್ಲ. ಹಾಗಾದಾಗ ಮಾತ್ರ ಪತಂಜಲಿಯು ಮುಂದಿನ ಸೂತ್ರದಲ್ಲಿ ತಿಳಿಸುವಂತೆ ''ದ್ವಂದ್ವಗಳ ನಡುವೆ ಸಂಘರ್ಷವಿಲ್ಲದಂತಹ ಶಾರೀರಿಕ ಪರಿಸ್ಥಿತಿ ಒದಗಿಬರುತ್ತದೆ'' (ತತೋ ದ್ವಂದ್ವಾನಭಿಘಾತಃ - ಯೋ.ಸೂ. ೨.೪೮). ಇದು ಹೊರಗಣ ದ್ವಂದ್ವಗಳನ್ನು ಕುರಿತಾದದ್ದಲ್ಲ; ಶರೀರದ ಒಳಗಣ ದ್ವಂದ್ವಗಳು. ಆದ್ದರಿಂದ ಆಸನಗಳನ್ನು ಕ್ಷಣಾರ್ಧದಲ್ಲಿ ಮಾಡಿ ಬಿಟ್ಟುಬಿಡುವುದಲ್ಲ. ಅದು ನಿರರ್ಥಕ. ಹೇಗೋ ಮೈ ಬಗ್ಗಿಸಿ ತಕ್ಷಣ ಯಥಾಸ್ಥಿತಿಗೆ ಬಂದರೂ ಒಂದೇ ಬಿಟ್ಟರೂ ಒಂದೇ. ಆಂತರಿಕವಾಗಿ ಶರೀರದ ಮೇಲೆ ಗಾಢ ಪ್ರಭಾವ ಬೀರಬೇಕಾದರೆ ಅದು ಒಂದು ನಿಶ್ಚಿತ ಅವಧಿಗೆ ವಿಸ್ತರಿಸಲ್ಪಡಬೇಕು ಹಾಗೂ ಪ್ರಯತ್ನದಲ್ಲಿ ಮಾರ್ದವತೆ ಇರಬೇಕು.

ನನ್ನ ಮಿತ್ರ ಸ್ವಾಮಿ ರಾಮಾನಂದಜಿ ಒಮ್ಮೆ ಒಬ್ಬ ಹೊಸ ಅಭ್ಯಾಸಿಗೆ ಪಶ್ಚಿಮತಾನಾಸನ ಹೇಳಿಕೊಡಲು ಆತನ ಬೆನ್ನಮೇಲೆ ಕುಳಿತುಬಿಟ್ಟರು; ಅವನು ಚೇತರಿಸಿಕೊಳ್ಳಲು ಒಂದು ವಾರ ಹಿಡಿಯಿತು. ಸ್ವತಃ ರಾಮಾನಂದರು ಆ ಆಸನವನ್ನು ಅತ್ಯಂತ ಸುಲಭವಾಗಿ ಮೂವತ್ತು ನಿಮಿಷಕ್ಕೂ ಹೆಚ್ಚು ಕಾಲ ಬೇಕಾದರೂ ಮಾಡಬಲ್ಲವರಾಗಿದ್ದರು. ಅದರಲ್ಲಿ ಪ್ರಯತ್ನ ಶೈಥಿಲ್ಯವಿತ್ತು, ಶರೀರದಲ್ಲಿ ಆಂತರಿಕವಾಗಿ ದ್ವಂದ್ವಗಳ ಸಂಘರ್ಷವಿಲ್ಲದಿರುತ್ತಿತ್ತು. ಅನಂತ ಸಮಾಪತ್ತಿ ಇತ್ತೋ ಇಲ್ಲವೋ ಹೇಳಬರುವುದಿಲ್ಲ. ಅದು ಅಭ್ಯಾಸ ಮಾಡುವವರ ವೈಯ್ಯಕ್ತಿಕ ಅನುಭವಕ್ಕೆ ಬರಬೇಕಷ್ಟೆ. ಎಲ್ಲ ಆಸನಗಳಲ್ಲೂ ಇದು ಮೂಲಭೂತ ಲಕ್ಷಣವಾದ್ದರಿಂದ ಸ್ವಲ್ಪ ದೀರ್ಘವಾಗಿ ಪುನಃ ಪ್ರಸ್ತಾಪಿಸಬೇಕಾಯಿತು. ಪುನರುಕ್ತಿ ದೋಷಕ್ಕೆ ಕ್ಷಮೆ ಇರಲಿ.

ಆಸನಗಳನ್ನು ಅಭ್ಯಾಸ ಮಾಡುವವರು ಸರ್ವಾಂಗಾಸನದಲ್ಲಿ ವಿಶೇಷ ಆಸ್ಥೆಯನ್ನು ವಹಿಸುವುದು ಒಳ್ಳೆಯದು. ಅದರ ಹೆಸರೇ ಸೂಚಿಸುವಂತೆ ಅದು ಶರೀರದ ಎಲ್ಲ ಅಂಗಗಳ ಮೇಲೂ ಪರಿಣಾಮ ಬೀರಬಲ್ಲಂತಹುದು. ಅದು ಹೇಗೆಂದರೆ ಆ ಆಸನದಿಂದ ಥೈರಾಯಿಡ್ ಗ್ರಂಥಿಗೆ ಅಪೂರ್ವವಾದ ಒತ್ತು ಸಿಗುತ್ತದೆ. ಆ ಗ್ರಂಥಿಯು ಆರೋಗ್ಯವನ್ನು ಕಾಪಾಡುವಲ್ಲಿ ಅತಿ ಪ್ರಮುಖ ಪಾತ್ರ ವಹಿಸುತ್ತದೆಂಬುದು ತಿಳಿದೇ ಇದೆ. ಯೋಗಶಾಸ್ತ್ರ ಗ್ರಂಥಗಳಲ್ಲಿ ಎಲ್ಲೂ ಸರ್ವಾಂಗಾಸನದ ಹೆಸರಿಲ್ಲ; ಅದನ್ನು ''ವಿಪರೀತ ಕರಣಿ'' ಎಂಬ ಹೆಸರಿನಿಂದ ಗುರುತಿಸಲಾಗಿದೆ. ಪುರುಷರು ಮತ್ತು ಮಹಿಳೆಯರಿಬ್ಬರಲ್ಲೂ ಈ ಆಸನದಿಂದ ಜನನಾಂಗ ಗ್ರಂಥಿಗಳಿಗೆ ಒಳ್ಳೆಯ ಪರಿಣಾಮ ದಕ್ಕುತ್ತದೆಂದು ಹೇಳಲಾಗಿದೆ.




ಇಲ್ಲಿನ ಎರಡು ಚಿತ್ರಗಳಲ್ಲಿ ತೋರಿಸಿರುವುದು ಸರ್ವಾಂಗಾಸನದ ಅಂತಿಮ ಘಟ್ಟ. ಪ್ರಾರಂಭಕ್ಕೆ ಅರ್ಧ ನಿಮಿಷದ ಕಾಲ ಈ ಹಂತದಲ್ಲಿ ಉಳಿಯುತ್ತಾ ಕ್ರಮೇಣ ಅದನ್ನು ಆರು ನಿಮಿಷಗಳಿಗೆ ವಿಸ್ತರಿಸಬಹುದು. ಎದೆಯು ಗಲ್ಲಕ್ಕೆ ತಗಲುವಂತಿರುವುದನ್ನು ಗಮನಿಸಿ. ಆ ಹಂತಕ್ಕೆ ಬರಲು ಚಲನೆಯು ನಿಧಾನವಾಗಿ ಸಾಗಬೇಕು, ಚಂಗನೆ ಕಾಲುಗಳನ್ನು ಮೇಲಕ್ಕೆ ಎತ್ತುವುದಲ್ಲ. ಮಾಂಸಖಂಡಗಳನ್ನು ಸಡಿಲಗೊಳಿಸಿ ಬೆನ್ನ ಮೇಲೆ ಮಲಗುವುದು, ಕೈಗಳನ್ನು ಚಾಚಿ ಶರೀರದ ಪಕ್ಕದಲ್ಲಿಟ್ಟುಕೊಳ್ಳುವುದು ಮತ್ತು ಕಾಲುಗಳನ್ನು ಜೋಡಿಸಿ ಕೆಳಕ್ಕೆ ಚಾಚುವುದು ಮೊದಲ ಘಟ್ಟ. ಪೃಷ್ಠಭಾಗವನ್ನು ಮೇಲಕ್ಕೆತ್ತದೆ ಕಾಲುಗಳನ್ನು ನಿಧಾನವಾಗಿ ಮೇಲಕ್ಕೆತ್ತಿ ಸುಮಾರು ಮೂವತ್ತು ಡಿಗ್ರಿಯ ಕೋನದಲ್ಲಿ ನಿಲ್ಲಿಸಿ. ನಾಲ್ಕೈದು ಸೆಕೆಂಡುಗಳ ನಂತರ ಮತ್ತೆ ನಿಧಾನವಾಗಿ ಅದನ್ನು ಅರವತ್ತು ಡಿಗ್ರಿಗೆ ಏರಿಸಿ. ಆಮೇಲೆ ಅದನ್ನು ನೆಲಕ್ಕೆ ಲಂಬವಾಗಿರುವಂತೆ ನಿಲ್ಲಿಸಿ. ಕಾಲುಗಳು ಸ್ವಲ್ಪ ನಡುಗಬಹುದು. ಕ್ರಮೇಣ ಅದು ಇಲ್ಲವಾಗುತ್ತದೆ. ಗಂಟಲಿನ ಮಾಂಸಖಂಡಗಳನ್ನು ಬಿಗಿಯಾಗಿ ಹಿಡಿಯಬಾರದು. ಈಗ ಮೊಣಕೈ ಹಾಗೂ ಬಿಗಿಹಿಡಿದ ಮುಷ್ಠಿಯ ಮೇಲೆ ಸ್ವಲ್ಪ ಒತ್ತಡ ಹಾಕಿ ಕಾಲುಗಳು ಹಾಗೂ



ಪೃಷ್ಠಭಾಗವನ್ನು ಮೇಲಕ್ಕೆತ್ತುತ್ತಾ ಹೋಗಿ. ಮೊದಲಿಗೆ ಅದರಲ್ಲಿ ಸ್ವಲ್ಪ ರಭಸ ಕಾಣಬರಬಹುದು. ಕ್ರಮೇಣ ಅದನ್ನು ನಿಧಾನವಾಗಿ ಮಾಡಬಹುದು. ಬೆನ್ನಿನ ಎರಡು ಕಡೆಯೂ ಅಂಗೈಯಿಂದ ಬೆಂಬಲ ಕೊಡಿ. ವಾಲಾಡುವುದನ್ನು ಕ್ರಮೇಣ ಇಲ್ಲವಾಗಿಸಬಹುದು. ಕಾಲುಗಳು ಹಿಂದಕ್ಕೆ ಬಗ್ಗುವ ಸಾಧ್ಯತೆ ಇರುತ್ತದೆ. ಅದನ್ನು ತಡೆದು ಪಾದದವರೆಗೆ ಶರೀರವು ನೆಟ್ಟಗಿರುವಂತೆ ನೋಡಿಕೊಳ್ಳಿ. ಕುತ್ತಿಗೆಯು ಮಾತ್ರ ನೆಲದ ಮೇಲಿರುತ್ತದೆ. ಥೈರಾಯಿಡ್ ಗ್ರಂಥಿಯ ಮೇಲೆ ಗಮನವನ್ನು ಕೇಂದ್ರೀಕರಿಸಬಹುದು. ಅಜೀರ್ಣ, ಮಲಬದ್ಧತೆ, ಹರ್ನಿಯಾ ಮುಂತಾದವಕ್ಕೆ ನಿವಾರಣಾ ತಂತ್ರವಾಗಿಯೂ ಈ ಆಸನವನ್ನು ಅಭ್ಯಸಿಸಬಹುದು. ರಕ್ತದ ಒತ್ತಡ ಹೆಚ್ಚಿದ್ದರೆ ಈ ಆಸನ ಮಾಡದಿರುವುದು ಕ್ಷೇಮ.

ಸ್ಥೂಲ ಕಾಯದವರಿಗೆ ಈ ಆಸನವು ಸುಲಭ ಗಮ್ಯವಲ್ಲ. ಮೋತಿಲಾಲ್ ನೆಹರು ಅವರು ಈ ಆಸನದ ಪ್ರಯೋಜನ ಪಡೆಯಲು ಒಂದು ಹಲಗೆಯನ್ನು ಇಳಿಜಾರಾಗಿ ತಯಾರಿಸಿ ಅದನ್ನು ವಿವಿಧ ಕೋನಗಳಲ್ಲಿ ನಿಲ್ಲಿಸುವಂತೆ ಮಾಡಿಕೊಂಡಿದ್ದರು. ಶರೀರವು ಹಿಂದಕ್ಕೆ ಜಾರಿ ತಳ್ಳಲ್ಪಡದಂತೆ ಮಾಡಲು ಒಂದು ಬೆಲ್ಟ್ ಸಹ ಅಳವಡಿಸಿಕೊಂಡಿದ್ದರು. (ಚಿತ್ರ ನೋಡಿ)

ಗೋಡೆಗೆ (ಅಥವಾ ಉದ್ಯಾನಗಳಲ್ಲಿ ಮರಕ್ಕೆ) ಆತುಕೊಂಡಂತೆ ಈ ಆಸನವನ್ನು ಮಾಡಲಾಗುವುದಿಲ್ಲ. ಏಕೆಂದರೆ ಆಗ ಸ್ವಸ್ಥವಾಗಿ ಬೆನ್ನಮೇಲೆ ಮಲಗಿ ನಿಧಾನವಾಗಿ ಕಾಲುಗಳನ್ನೆತ್ತುವುದು ಸಾಧ್ಯವಾಗುವುದಿಲ್ಲವಲ್ಲ! ಹಾಗೂ ಥೈರಾಯಿಡ್‌ಗೆ ಒತ್ತು ಕೊಡಲು ಇದನ್ನು ಅಭ್ಯಾಸ ಮಾಡಬೇಕೆನಿಸಿದರೆ ಗೋಡೆಗೆ ಆತುಕೊಂಡಂತೆ ಶರೀರವನ್ನು ನೆಟ್ಟಗೆ ನಿಲ್ಲಿಸಬೇಕು. ಆಗ ಜಾಲಂಧರ ಬಂಧವೆಂಬುದು ಸಿದ್ಧಿಸುತ್ತದೆ (ಅಂದರೆ ಎದೆಗೆ ಆನುವಂತೆ ಗಲ್ಲವನ್ನು ಇರಿಸುವುದು). ಇದು ಸರ್ವಾಂಗಾಸನದಲ್ಲಿ ಇರಲೇಬೇಕಾದ ಒಂದು ಅಂಶ. ಕಂಠಮಾಕುಂಚ್ಯ ಹೃದಯೇ ಸ್ಥಾಪಯೇತ್ ಚಿಬುಕಂ ದೃಢಮ್। ಬಂಧೋ ಜಾಲಂಧರಾಖ್ಯೋऽಯಂ ಜರಾಮೃತ್ಯು ವಿನಾಶಕಃ॥ ಎನ್ನುತ್ತದೆ ಹಠ ಪ್ರದೀಪಿಕೆ (೩.೬೯).

# ಶಿಕ್ಷಣದ ಮಹತ್ವ

ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ''ಸ್ವರಾಜ್ಯ ನಮ್ಮ ಆಜನ್ಮ ಸಿದ್ಧ ಹಕ್ಕು !'' ಎಂಬ ಘೋಷಣೆ ಮೊಳಗಿತು. ಸೀಮಿತಾರ್ಥದಲ್ಲಿ ಸ್ವರಾಜ್ಯವನ್ನು ನಾವು ಗಳಿಸಿದ್ದೂ ಆಯಿತು. ಇಂದು ದೇಶದಲ್ಲಿ ಸಾರ್ವತ್ರಿಕವಾಗಿ ಮೊಳಗಬೇಕಾದ ಘೋಷಣೆಯಿದು : ''ಶಿಕ್ಷಣ ನಮ್ಮ ಆಜನ್ಮ ಸಿದ್ಧ ಹಕ್ಕು !'' ವಾಸ್ತವವಾಗಿ, ಸ್ವಾತಂತ್ರ್ಯ, ಪ್ರಜಾಪ್ರಭುತ್ವಗಳು ಅರ್ಥಪೂರ್ಣವಾಗಬೇಕಾದರೆ, ಯಶಸ್ವಿಯಾಗಬೇಕಾದರೆ ಶಿಕ್ಷಣ ಮೂಲಭೂತ ಆವಶ್ಯಕತೆ. ಆದರೆ ನಮ್ಮಲ್ಲಿ ವಿಪರ್ಯಾಸವೆಂದರೆ, ಜನ ಶಿಕ್ಷಣದ ಹಕ್ಕನ್ನು ಸ್ವತಃ ಪ್ರತಿಪಾದಿಸುತ್ತಿಲ್ಲ; ಸಾಕ್ಷರತೆಗೆ ಹಾಗೂ ಶಿಕ್ಷಣಕ್ಕೆ ಅವರನ್ನು ಒತ್ತಾಯಿಸಬೇಕಿದೆ, ಮನವೊಲಿಸಬೇಕಿದೆ !

ಶಿಕ್ಷಣದಿಂದಲೆ ಸ್ವಾತಂತ್ರ್ಯ ಪ್ರಾಪ್ತಿ ಎಂಬುದನ್ನೂ ನೆನಪಿಡಬೇಕು. ''ಸಾ ವಿದ್ಯಾ ಯಾ ವಿಮುಕ್ತಯೇ'' (ಮುಕ್ತಿ ದೊರಕಿಸತಕ್ಕದ್ದೇ ವಿದ್ಯೆ) ಎಂಬುದು ಆರ್ಷೇಯ ಸೂಕ್ತಿ. ಅದರ ಪಾರಮಾರ್ಥಿಕ ಅಭಿಪ್ರಾಯ ಏನೇ ಇರಲಿ, ಲೌಕಿಕವಾಗಿ ವಿದ್ಯೆ ನಾನಾ ಬಗೆಯ ಬಿಡುಗಡೆಗೆ ಸಾಧನವಾಗುವುದರಲ್ಲಿ ಸಂದೇಹವಿಲ್ಲ (ಮುಕ್ತಿ, ಮೋಕ್ಷ ಎಂದರೆ ಬಿಡುಗಡೆ ಎಂದರ್ಥ).

ಬಾಲ್ಯದಲ್ಲೇ ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸಬೇಕು, ವಿದ್ಯೆ ಕಲಿಸಬೇಕು ಎಂದು ತಿಳಿಸಿ, ''ಓದದ ಬಾಯಿ ಬಿಲದ ಬಾಯಿ !'' ಎಂದು ಟೀಕಿಸುತ್ತದೆ, ಒಂದು ಕನ್ನಡ ಚೆನ್ನುಡಿ. ''ಲಕ್ಷ ಧನವಿದ್ದರೇನು ? ಚಿಕ್ಕಂದಿನಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸದ ತಂದೆ ಅವರನ್ನು ಕೊಂದಂತೆಯೇ ಸರಿ !'' ಎಂದೂ ಅದು ಮಾರ್ಮಿಕವಾಗಿ ಹೇಳುತ್ತದೆ. ''ಚಿಕ್ಕಂದಿನ ವಿದ್ಯೆ ಪೊರೆಗು (= ಕಾಪಾಡುತ್ತದೆ)'' ಎಂಬುದು ಅದರ ನಿರ್ಣಯ.

ಶಿಕ್ಷಣದಿಂದ ಬಹುಮುಖ ಏಳಿಗೆಯಾಗುತ್ತದೆ ; ವ್ಯಷ್ಟಿ, ಸಮಷ್ಟಿ ಎರಡಕ್ಕೂ ಅದರಿಂದ ಶ್ರೇಯಸ್ಸು. ಹಿಂದಿನ ಕಾಲದಲ್ಲಿ ಲಕ್ಷ್ಮಿಗೂ ಸರಸ್ವತಿಗೂ ವೈರವೆಂಬ ಭಾವನೆಯಿತ್ತು; ಅದರಲ್ಲಿ ತಥ್ಯವೂ ಇತ್ತು. ಆದರೆ ಇಂದು ಅಂಥ ವೈರ ಅನಿವಾರ್ಯವಲ್ಲ. ಸರಸ್ವತಿ ಲಕ್ಷ್ಮಿಯನ್ನು ತಂದುಕೊಡಬಲ್ಲಳು ! (ಆದರೆ ಲಕ್ಷ್ಮಿಯ ಮೂಲಕ ಸರಸ್ವತೀ ಲಾಭ ಅಸಂಭವ !)

ಈ ದಿನಗಳಲ್ಲಿ ಸಾಕ್ಷರತೆಯ ಚಳವಳಿ ಎಲ್ಲೆಡೆ ಬಿರುಸಿನಿಂದ ನಡೆಯುತ್ತಿದೆ. ಅದು ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದು ಬೇರೆ ಪ್ರಶ್ನೆ (ಸರ್ಕಾರಿ ಅಂಕಿ, ಅಂಶಗಳು ಯಾವಾಗಲೂ ದಾರಿ ತಪ್ಪಿಸುತ್ತವೆ). ಆದರೆ ಸಾಕ್ಷರತೆ ತನಗೆ ತಾನೆ ಒಂದು ಗುರಿಯಲ್ಲ; ಅದು ಶಿಕ್ಷಣದ - ಪ್ರೌಢ ಹಾಗೂ ಉನ್ನತ ಶಿಕ್ಷಣದ - ಹಂತಕ್ಕೆ ಸಂಕ್ರಮಿಸಬೇಕು. ಶಿಕ್ಷಣ ಸಾಂಕ್ರಾಮಿಕವಾಗಬೇಕು ಎಂಬುದೂ ಮುಖ್ಯ.

''ನಾಸ್ತಿ ವಿದ್ಯಾಸಮಂ ಚಕ್ಷುಃ'' (ವಿದ್ಯೆಯಂತಹ ಕಣ್ಣಿಲ್ಲ), ''ನಾಸ್ತಿ ವಿದ್ಯಾಸಮಂ ಮಿತ್ರಂ'' (ವಿದ್ಯೆಯಂತಹ ಸ್ನೇಹಿತನಿಲ್ಲ) ಎಂದು ಸುಭಾಷಿತಗಳು ಉಸುರುತ್ತವೆ. ಮಾನವ ಪೂರ್ಣ ಮಾನವನಾಗಬೇಕಾದರೆ, ವಿದ್ಯೆ ಅತ್ಯಗತ್ಯ. ಪಂಪ ಕವಿ ಹೇಳುತ್ತಾನೆ : ''ತ್ಯಾಗ, ಭೋಗ, ಅಕ್ಷರ, ಸಂಗೀತ, ಗೋಷ್ಠಿ -ಇವುಗಳಿಗೆ ಆಕರವಾದ ಮನುಷ್ಯರೇ ಮನುಷ್ಯರು !'' ಅಂತಲ್ಲದವರು ಪಶುಗಳೆಂದರೆ ತಪ್ಪಲ್ಲ.

ಸಾಕ್ಷರತೆಯೆ ವಿದ್ಯೆಯಲ್ಲ, ಶಿಕ್ಷಣವಲ್ಲ. ಆದರೆ ನಮ್ಮಲ್ಲಿಂದು ಹಾಗಾಗಿರುವ ದುರಂತವನ್ನು ನೋಡುತ್ತಿದ್ದೇವೆ. ಉನ್ನತ ಶಿಕ್ಷಣ ಎನ್ನುವುದು ಕೇವಲ ಉನ್ನತ ಸಾಕ್ಷರತೆಯಾಗಿದೆ ! ನಿಜವಾದ ಶಿಕ್ಷಣ ಒಂದು ಕಡೆ ವೈಚಾರಿಕ ಜಾಗೃತಿಯನ್ನುಂಟುಮಾಡಬೇಕು ; ಇನ್ನೊಂದು ಕಡೆ ಜೀವನಕ್ಕೆ ಮೌಲ್ಯಗಳನ್ನು ಅಳವಡಿಸಬೇಕು.

ವಿನಯ ವಿದ್ಯೆಯ ಫಲವೆಂಬುದು ಪ್ರಸಿದ್ಧವಾದ ಮಾತು. ಹಾಗೆಯೇ, ವಿವೇಕವೂ ವಿದ್ಯೆಯ ಮಹಾಫಲ; ಅದು ಒಳಗಣ್ಣು, ಬೆಳಕು, ಬಲ.

ooo

# ಸಪ್ತ ಪಾಪಗಳು

ಮಹಾತ್ಮ ಗಾಂಧೀಜಿ ದಶಕಗಳ ಹಿಂದೆಯೆ ಏಳು ಸಾಮಾಜಿಕ ಪಾಪಗಳನ್ನು ಪಟ್ಟಿ ಮಾಡಿ, ಸಾರ್ವಜನಿಕ ಜೀವನ ಅವುಗಳಿಂದ ಬಿಡಿಸಿಕೊಂಡು ಸ್ವಚ್ಛವಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸಿದರು. ಅದು ಈ ಹೊತ್ತಿಗೆ ಮತ್ತಷ್ಟು ಪ್ರಸ್ತುತವಾಗಿದೆ. ಇಂದು ಬದುಕಿನ ಎಲ್ಲ ರಂಗಗಳಲ್ಲೂ ಆ ಪಾಪಗಳು ಪ್ರಗಾಢವಾಗಿ, ವ್ಯಾಪಕವಾಗಿ ವಿಜೃಂಭಿಸುತ್ತಿವೆ ; ಭವಿಷ್ಯದ ಬಗೆಗೆ ಸಂದೇಹ, ಭಯಗಳನ್ನು ಮೂಡಿಸುತ್ತಿವೆ. ಸಾಮಾಜಿಕ ಸ್ತರದಲ್ಲಿ ಹೇಗೋ ಹಾಗೆ ವೈಯಕ್ತಿಕ ಸ್ತರದಲ್ಲೂ ಅವು ಸರ್ವತ್ರ ನೆಲೆಗೊಂಡಿವೆ.

ಆ ಸಪ್ತ ಪಾಪಗಳು ಯಾವುವು ? ಮೊದಲನೆಯದಾಗಿ, 'ತತ್ವರಹಿತ ರಾಜಕೀಯ'. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಎಲ್ಲಿ ನೋಡಿದರೂ ಅದು ಕಣ್ಣು ಕುಕ್ಕುತ್ತಿದೆ. ರಾಜಕೀಯದಲ್ಲಿ ಅಧ್ಯಾತ್ಮವನ್ನು ಕಾಣಬಯಸುವುದು ತಪ್ಪು. ಆದರೆ ಅದರಲ್ಲೂ ಕೆಲವು ತತ್ವಗಳು, ನೀತಿ ಸಂಹಿತೆ ಇರಬೇಕೆಂದು ನಿರೀಕ್ಷಿಸುತ್ತೇನೆ. ಹಿಂದಿನ ರಾಜಕಾರಣಿಗಳಲ್ಲಿ ತಕ್ಕಮಟ್ಟಿಗಾದರೂ ತತ್ವನಿಷ್ಠೆಯಿತ್ತು, ಕೆಲವರ ರಾಜಕೀಯವಾದರೂ ಎಲ್ಲ ಮೌಲ್ಯಗಳನ್ನೂ ಗಾಳಿಗೆ ತೂರಿ, ಭ್ರಷ್ಟರ ಬೀಡಾಗಿ ಪರಿಣಮಿಸಿದೆ ; ''ಧೂರ್ತರ ಕಟ್ಟಕಡೆಯ ಆಶ್ರಯ, ರಾಜಕೀಯ'' ಎಂಬ ಮಾತನ್ನು ಪೂರ್ತಿ ದಿಟಗೊಳಿಸಿದೆ. (ಈಗ ಮೊದಲನೆಯ ಆಶ್ರಯ ಎಂದರೂ ತಪ್ಪಲ್ಲ !) ದೇಶದ ಎಲ್ಲ ಅನಿಷ್ಟಗಳಿಗೆ ವಿಷಬೀಜವಾಗಿ ಪರಿಣಮಿಸಿದೆ.

ಎರಡನೆಯದು, 'ದುಡಿಮೆಯಿಲ್ಲದ ಸಂಪತ್ತು.' ಕಾಯಕಕ್ಕೆ ಈಗ ಬೆಲೆಯಿಲ್ಲ, ಅನ್ಯಾಯದ ದಾರಿ ಹಿಡಿದು, ಶೋಷಣೆಯ ಮೂಲಕ ಶ್ರೀಮಂತರಾಗುವವರೇ ಬಹು ಮಂದಿ. ಈ ಪ್ರವೃತ್ತಿಯೆ ಭ್ರಷ್ಟಾಚಾರದ ಬೇರು; ರಾಷ್ಟ್ರಜೀವನದಲ್ಲೆಲ್ಲ ಅದು ಹರಡಿಕೊಂಡಿದೆ.

ಮೂರನೆಯದು, 'ನೀತಿ ಹೀನ ವಾಣಿಜ್ಯ.' ಅಷ್ಟೋ ಇಷ್ಟೋ ವಂಚನೆ ವಾಣಿಜ್ಯದಲ್ಲಿ ಯಾವಾಗಲೂ ಇದ್ದದ್ದೇ. (''ವ್ಯಾಪಾರಂ ದ್ರೋಹ ಚಿಂತನಂ'' ಎಂಬ ಉಕ್ತಿಯುಂಟಷ್ಟೆ !) ಆದರೆ ಇಂದಿನ ವಾಣಿಜ್ಯದಲ್ಲಿ ನೀತಿಗೆ ಸಂಪೂರ್ಣ ತಿಲಾಂಜಲಿ. ಉದಾಹರಣೆಗೆ, ರಸಗೊಬ್ಬರ ಎಂದು ರಂಗೋಲಿ ಪುಡಿಯನ್ನು ಮಾರುವ ಮೋಸ !

ನಾಲ್ಕನೆಯದು, 'ಶೀಲವಿಲ್ಲದ ಶಿಕ್ಷಣ.' ಇಂದು ಶಿಕ್ಷಣ ರಂಗದಲ್ಲೂ ರಾಜಕೀಯದ ಕಾರುಬಾರು ; ವಾಣಿಜ್ಯ ಪ್ರವೃತ್ತಿಯ ಪ್ರವೇಶ. ಆದ್ದರಿಂದ, ಪವಿತ್ರವಾಗಿರಬೇಕಾದ ಕ್ಷೇತ್ರ ಕಲುಷಿತವಾಗಿದೆ. ಶೀಲ ನಿರ್ಮಾಣವೆ ಶಿಕ್ಷಣದ ಮೂಲೋದ್ದೇಶ. ಅದೀಗ ನಾಸ್ತಿ; ಧನಾರ್ಜನೆಯೇ ಧ್ಯೇಯ.

ಐದನೆಯದು, 'ಆತ್ಮ ಸಾಕ್ಷಿಯಿಲ್ಲದ ಭೋಗ.' ಪಶ್ಚಿಮದ ಪ್ರಭಾವದಿಂದ ನಮ್ಮ ಸಮಾಜದಲ್ಲಿ ಇಂದು ಭೋಗ ಸಂಸ್ಕೃತಿ ಬೆಳೆಯುತ್ತಿದೆ. ಒಂದು ಮಿತಿಯಲ್ಲಿ ಭೋಗ ಬೇಕು ; ಹಾಗೆ ನೋಡಿದರೆ, ಶ್ರೇಯಸ್ಸು ಪ್ರೇಯಸ್ಸುಗಳ ಸಮನ್ವಯದಲ್ಲಿ ಸಾರ್ಥಕ ಜೀವನವಿದೆ. ಆದರೆ ಈ ದಿನಗಳಲ್ಲಿ ಶ್ರೇಯಸ್ಸು ಯಾರಿಗೆ ಬೇಕಾಗಿದೆ ? ಅನೈತಿಕ ಭೋಗವೊಂದೇ ಬಹುಜನರ ಗುರಿ. ಅದು ದುರಂತಕ್ಕೆ ಕರೆದೊಯ್ಯದಿರದು. ಆತ್ಮ, ಆತ್ಮಸಾಕ್ಷಿ ಮುಂತಾದುವು ಈ ಹೊತ್ತಿಗೆ ಅಪರಿಚಿತ ಶಬ್ದಗಳು !

ಆರನೆಯದು,'ಮಾನವತಾ ಶೂನ್ಯ ವಿಜ್ಞಾನ.' ಇದು ವಿಜ್ಞಾನ, ತಂತ್ರಜ್ಞಾನಗಳ ಯುಗ. ವರವೂ ಹೌದು, ಶಾಪವೂ ಹೌದು, ವಿಜ್ಞಾನ. ಇಂದು ಅದು ಶಾಪವಾಗಿ ಪರಿಣಮಿಸುತ್ತಿದೆ. ಮಾನವೀಯವಲ್ಲದ ವಿಜ್ಞಾನ ರಾಕ್ಷಸೀಯವಾಗಿ ವಿನಾಶಕರವಾಗುತ್ತದೆ ; ಅನ್ಯಹತ್ಯೆ, ಆತ್ಮಹತ್ಯೆಗಳಿಗೆ ಹೇತುವಾಗುತ್ತದೆ. ಪರಮಾಣು ಬಾಂಬುಗಳು ಯಾವ ಪುರುಷಾರ್ಥಕ್ಕೆ ?

ಏಳನೆಯದು, 'ತ್ಯಾಗವಿಲ್ಲದ ಪೂಜೆ !' ಈಗ ಪೂಜೆಗೆ ಪುರಸ್ಕಾರವೆಲ್ಲಿ ? ಇದ್ದರೂ, ಅದು ಯಾಂತ್ರಿಕವಷ್ಟೆ. ತನು, ಮನ, ಧನಗಳು ಕರಗದ ಪೂಜೆ ಪೂಜೆಯಲ್ಲ. ''ಭಕ್ತಿ ಎಂಬುದು ತೋರಿ ಉಂಬ ಲಾಭ !'' ಎಂಬ ಅಲ್ಲಮ ಪ್ರಭುವಿನ ಟೀಕೆ ಈ ಕಾಲಕ್ಕೆ ಚೆನ್ನಾಗಿ ಅನ್ವಯಿಸುತ್ತದೆ.

ಈ ಪಾತಕ ಸಪ್ತಕದಿಂದ ಎಲ್ಲರೂ ಪಾರಾದಾಗ, ಗಾಂಧೀಜಿ ಕನಸಿದ ಸರ್ವೋದಯ, 'ರಾಮರಾಜ್ಯ'ದ ಸಿದ್ಧಿ ; ಭೂಸ್ವರ್ಗದ ಪ್ರಾಪ್ತಿ. ಅದು ಆದರ್ಶ ಮಾತ್ರವೇ?

**ಡಾ|| ಸಿ. ಪಿ. ಕೃಷ್ಣಕುಮಾರ್**
೨೨೭೫/೧೯, 'ಭಾರತಿ', ಒನೇ ಅಡ್ಡರಸ್ತೆ, ವಿನಾಯಕ ನಗರ
ಮೈಸೂರು - ೫೭೦ ೦೧೨

# ಕಲಾವಿದ ಎಸ್. ಕಾಳಪ್ಪನವರ ವರ್ಣಚಿತ್ರಗಳು





### ನಿಮ್ಮ ಅನಿಸಿಕೆ ಏನು?

ಇಲ್ಲಿ 'ಹೊಸತು' ಓದುಗರಿಗಾಗಿ ಖ್ಯಾತ ಕಲಾವಿದ ದಿ|| ಶ್ರೀ ಎಸ್. ಕಾಳಪ್ಪನವರ ವರ್ಣ ಚಿತ್ರಗಳನ್ನು ಪ್ರಕಟಿಸುತ್ತಿದ್ದೇವೆ. ಇವನ್ನು ನೋಡಿದಾಗ ನಿಮಗೆ ಏನೆನ್ನಿಸಿತು? ನಿಮ್ಮ ಅನಿಸಿಕೆಗಳನ್ನು ಅಂಚೆ ಕಾರ್ಡಿನಲ್ಲಿ ಬರೆದು ತಿಳಿಸಿ. ಕಲಾವಿಮರ್ಶಕರ ಪರಿಶೀಲನೆಯ ನಂತರ ನಿಮ್ಮ ಉತ್ತಮ ವಿಮರ್ಶೆಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ.

-ಸಂ



ಶ್ರೀ ಎಸ್. ಕಾಳಪ್ಪನವರ ಕಲಾಕೃತಿಗಳ ಸಂಗ್ರಹ ಇರುವ ಕೆಲವು ಕಲಾಕೇಂದ್ರಗಳೆಂದರೆ ಮೈಸೂರಿನ ಜಗನ್ಮೋಹನ ಅರಮನೆ ಮತ್ತು ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯ. ಪ್ಯಾರಿಸ್‌ನ ಶ್ರೀಮತಿ ಮಾರಿ ಕಾಸಿ ಮತ್ತು ಆಲಿಸೆಕ್ ಸಹ ಅವರ ಕಲಾಕೃತಿಗಳನ್ನು ಸಂಗ್ರಹಿಸಿದ್ದಾರೆ. ಅಲ್ಲದೆ ಅಮೆರಿಕಾ, ನೈಜೀರಿಯ ಮತ್ತು ರಷ್ಯಾ ಸಂಗ್ರಹಾಲಯಗಳಲ್ಲಿ ಇವರ ಚಿತ್ರಗಳು ರಾರಾಜಿಸುತ್ತಿವೆ.

ಲಲಿತ ಕಲಾ ಅಕಾಡೆಮಿಯು ಬೆಂಗಳೂರು ಮತ್ತು ಶ್ರೀರಂಗಪಟ್ಟಣದಲ್ಲಿ ನಡೆಸಿದ ಕಲಾಶಿಬಿರಗಳಲ್ಲಿ ಹಾಗೂ ಚಿತ್ರಕಲಾ ಪರಿಷತ್ತಿನವರು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಕಲಾಶಿಬಿರದಲ್ಲಿ ಶ್ರೀ ಕಾಳಪ್ಪನವರು ಭಾಗವಹಿಸಿ ಯುವಕಲಾವಿದರಿಗೆ ಮಾರ್ಗದರ್ಶನ ನೀಡಿದ್ದರು.

ಪ್ರತಿ ವರ್ಷ ಅವರ ಸ್ಮರಣಾರ್ಥ ಕಲಾ ಶಿಬಿರಗಳನ್ನು ನಡೆಸಬೇಕೆಂಬ ಯೋಜನೆ ಇದೆ. ಎಸ್. ಕಾಳಪ್ಪನವರ ಹೆಸರಿನಲ್ಲಿ ಖಾಯಂ ಆರ್ಟ್ ಗ್ಯಾಲರಿಯನ್ನು ಸ್ಥಾಪಿಸಲು ಅವರ ಪತ್ನಿ ಶ್ರೀಮತಿ ಸುಬ್ಬಮ್ಮ ಯೋಜಿಸಿದ್ದಾರೆ.





RNI Regn. No. 11308/99 REGD. CPMG / KA / BG-7 / 2000 Licenced to post without prepayment. Licence No. WPP(CO)-14








Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna